# ಕಾಶೀನಾಥ ಮತ್ತು ವೃಂದಾವನ

ಶರಚ್ಚಂದ್ರರ ಎರಡು ಕಾದಂಬರಿಗಳು

ಅನುವಾದಕರು

ಶ್ರೀ ಗುರುನಾಥ ಜೋಶಿ

ಶ್ರೀಮತಿ ಎಂ ಎ ಕುಪ್ಪಮ್ಮ

೧೯೪೩



ಸಾಹಿತ್ಯ ಭಾಂಡಾರ

## ಕನ್ನಡಿಸಿದವರಿಂದ

ಇವೆರಡೂ ಕಾದಂಬರಿಗಳು ಶರಚ್ಚಂದ್ರ ಚಟ್ಟೋಪಾಧ್ಯಾಯರವು 'ಕಾಶೀನಾಥ' ಅನುವಾದವಾಗಿ ಮೂರು ವರ್ಷಗಳಾದವು 'ಪಂಡಿತಜಿ'ಯ ಅನುವಾದ –'ವೃಂದಾವನ'– ಒಂದು ವರ್ಷದ ಹಿಂದೆ ಮೊದಲಾಗಿ ಈಗ ಮಾತ್ರ ಮುಗಿಯಿತು ಈ ಎರಡೂ ಕಾದಂಬರಿಗಳ ಮೊದಲ ಕರಡು ಮಾತ್ರ ನಮ್ಮಲ್ಲಿ ಸಿದ್ಧವಾಗಿತ್ತು

'ಕಾಶೀನಾಥ' ಚಲಚ್ಚಿತ್ರವಾಗಿಯೂ ಪ್ರಚಾರವಾಗಿದೆ ಆ ಚಿತ್ರ ನೋಡುವವರಿಗೆ ಇದು ಸಹಾಯಕವೂ ಆದೀತು 'ಕಾಶೀನಾಥ' ದಲ್ಲಿ ಗಂಡು-ಹೆಣ್ಣಿನ ಸೂಕ್ಷ್ಮ ಮನೋವೃತ್ತಿ, ಹೆಂಡತಿಗೆ ಗಂಡನು ಹೆಚ್ಚೊ ತವರು ಹೆಚ್ಚೊ, ಅಳಿಯನಿಗೆ ಶ್ರೀಮಂತ ಮಾವನ ಮನೆಯವಾಸ ಕಾರಾಗ್ರುಹ, ಮುಂತಾದ ಹಲವು ವಿಷಯಗಳು ಹೃದಯಂಗಮವಾಗಿ ಚಿತ್ರಿತವಾಗಿವ 'ವೃಂದಾವನ' ದಲ್ಲಿ ಆಧುನಿಕ ಶಿಕ್ಷಣ ಪದ್ಧತಿಯನ್ನು ಕುರಿತು ತೀಕ್ಷ್ಣ ಚರ್ಚೆ ಇದೆ ಇಂದಿನ ಯುವಕರು ಪದವೀಧರರಾಗಿ ಇಂಗ್ಲಂಡಿಗೆ ತೆರಳ ಬೇಕೂ, ಹಳ್ಳಿಗ ಹೋಗಿ ಬಡವರ ಮಕ್ಕಳಿಗೆ ಶಿಕ್ಷಣ ಕೊಡಬೇಕೊ, ಆದರ್ಶ ಶಿಕ್ಷಕನು ಯಾರು, ಎಂಬುದನ್ನು ಮನನಾಟುವಂತೆ ಹೇಳಲಾಗಿದೆ ಇವೆರಡೂ ಕಾದಂಬರಿಗಳನ್ನು ಓದುಗರು ಮೆಚ್ಚುವರೆಂದು ನಂಬಿದ್ದೇವೆ

ಇದರೊಳಗಿನ ಭಾಷಾಂತರದ ದೋಷ, ಭಾಷೆಯ ದೋಷ ಮೊದಲಾದುವುಗಳನ್ನು ಅಚ್ಚುಕಟ್ಟಾಗಿ ತಿದ್ದಿದವರು ಶ್ರೀ ಪಿ ವೆಂಕಟ-ರಮಣಾಚಾರ್ಯರು ಮತ್ತು ಮ ಗೋವಿಂದರಾಯರು ನಮಗೆ ಅನುಕೂಲ ವಾಗದೆ ಇದ್ದ ಈ ಕೆಲಸವನ್ನು ಹೆಚ್ಚು ಸರಸವಾಗುವಂತೆ ಮಾಡಿದುದಕ್ಕಾಗಿ ಇವರಿಬ್ಬರಿಗೂ ನಮ್ಮ ಹೃತ್ಪೂರ್ವಕ ವಂದನೆಗಳು ಈ ಎರಡನ್ನೂ ಶ್ರೀ ಮಂಗಳೂರು ಗೋವಿಂದರಾಯರು ನಮ್ಮಲ್ಲಿಂದ ಹೊತ್ತುಕೊಂಡು ಹೋಗಿ ಕಾಗದದ ಅಭಾವದ ಕಾಲದಲ್ಲಿ ಈ ಅಚ್ಚು ಹಾಕಿಸಿದ ಸಾಹಸ ಕಾರ್ಯಕ್ಕಾಗಿ ನಾವು ಕೃತಜ್ಞರಾಗಬೇಕಾಗಿದೆ

ಗುರುನಾಥ ಜೋಶಿ

# ಪ್ರಕಾಶಕರ ಮಾತು

ವೃಂದಾವನ' ಕಾದಂಬರಿಯನ್ನು ಕೂಡಲೇ ಕನ್ನಡಿಸಿ ಕೊಡಬೇಕೆಂದೂ ನಾವು ಅದನ್ನು ಪ್ರಕಟಿಸಬೇಕೆಂದೂ ಶ್ರೀ ಗುರುನಾಥ ಜೋಶಿಯವರಿಗೂ ನಮಗೂ ಸುಮಾರು ಎರಡು ವರ್ಷಗಳ ಹಿಂದೆ ಮಾತಾಗಿತ್ತು ಅದು ಪ್ರಕಟವಾಗಿ ಓದುಗರ ಕೈಸೇರುವ ಸುಯೋಗ ಈಗ ಒದಗಿತು ಇದರೊಡನೆ 'ಕಾಶೀನಾಥ'ನನ್ನೂ ಅವರೇ ದೊರಕಿಸಿ ಕೊಟ್ಟರು

ಶರಚ್ಚಂದ್ರರ ಸಾಹಿತ್ಯವನ್ನು ಕುರಿತು ಯಾರ ಅಭಿಪ್ರಾಯವೂ ಅಗತ್ಯವಿಲ್ಲ ಶರಚ್ಚಂದ್ರರು ನೂತನ ಭಾರತದ ಶ್ರೇಷ್ಠ ಕಾದಂಬರಿಕಾರರು ಅವರ ಹಲವಾರು ಕಾದಂಬರಿಗಳನ್ನು ಓದಿದ ಕನ್ನಡ ಓದುಗರು ಇದನ್ನು ಬಲ್ಲರು ಶರಚ್ಚಂದ್ರರ ಲೆಕ್ಕಣಿಕೆಯಲ್ಲಿ ಎಂತಹ ಶುಷ್ಕ ವಿಷಯವೂ ಸಂದರ್ಭಕ್ಕನುಸರಿಸಿ ಸರಸವಾಗುತ್ತದೆ ಉದಾಹರಣೆಗಾಗಿ ಹೇಳುವುದಾದರೆ 'ವೃಂದಾವನ'ದೊಳಗಿನ ಶಿಕ್ಷಣ, ಗ್ರಾಮಸ್ವೈರ್ಮಲ್ಯ ಮುಂತಾದ ವಿಷಯಗಳೇ ಸಾಕು

'ಕಾಶೀನಾಥ'ವನ್ನು ಪ್ರಕಟಿಸಲು ಅನುಮತಿಯನ್ನಿತ್ತ ಸೋದರಿ ಎಂ ಎ ಕುಪ್ಪಮ್ಮನವರಿಗೂ ಇವೆರಡೂ ಕಾದಂಬರಿಗಳನ್ನು ನಕಾಲದಲ್ಲಿ ಒದಗಿಸಿಕೊಟ್ಟ ಶ್ರೀ ಗುರುನಾಥ ಜೋಶಿಯವರಿಗೂ ನಾವು ಆಭಾರಿಗಳು ಸುಂದರವಾಗಿ ಮುದ್ರಿಸಿದ ಸಂಯುಕ್ತ ಕರ್ನಾಟಕ ಮುದ್ರಣಾಲಯಕ್ಕೆ ಧನ್ಯವಾದಗಳು

—ಪ್ರಕಾಶಕ

# ಕಾಶೀನಾಥ

ಅನುವಾದಿಕೆ

ಶ್ರೀಮತಿ ಎಂ. ಎ ಕುಪ್ಪಮ್ಮ

# ಕಾಶೀನಾಥ

## ೧

ನಸುಕಿನ ನಾಲ್ಕು ಗಂಟೆಗೇ ಎದ್ದು, ಮಿಂದು ಪೂಜಾ-ಪಾಠಗಳನ್ನು ಮುಗಿಸಿ, ಜುಟ್ಟನ್ನು ಎತ್ತಿ ಕಟ್ಟಿ, ಕಾಶೀನಾಥನು ಪಂಡಿತ ಧನಂಜಯ ಭಟ್ಟಾಚಾರ್ಯರ ಪಾಠಶಾಲೆಯ ಅಂಗಳದಲ್ಲಿ ಕುಳಿತು ದರ್ಶನಶಾಸ್ತ್ರದ ಸೂತ್ರಗಳನ್ನೂ ಭಾಷ್ಯಗಳನ್ನೂ ಕಂಠಪಾಠ ಮಾಡತೊಡಗಿದನೆಂದರೆ ಸಾಕು, ಅವನಿಗೆ ಬಾಹ್ಯ ಪ್ರಪಂಚದ ಜ್ಞಾನವೇ ಇರುತ್ತಿರಲಿಲ್ಲ. ದೀರ್ಘಾಕೃತಿ ಮತ್ತು ವಿಶಾಲ ಮುಖವುಳ್ಳ ಕಾಶೀನಾಥ ಪಂಡ್ಯೋಪಾಧ್ಯಾಯನು ದರ್ಶನಶಾಸ್ತ್ರದ ಗಹನ ವನವನ್ನು ಪ್ರವೇಶಿಸಿದಾಗ ಸಂಪೂರ್ಣ ದಿಗ್ಭ್ರಾಂತನಾಗಿಬಿಡುತ್ತಿದ್ದನು. ಈ ಸ್ಥಿತಿಯಲ್ಲಿ ಅವನನ್ನು ನೋಡಿದ ಜನರು ವಿಧವಿಧವಾಗಿ ಮಾತನಾಡಿಕೊಳ್ಳುತ್ತಿದ್ದರು. "ಅವನೂ ತನ್ನ ತಂದೆಯಂತೆ ವಿದ್ವಾಂಸನಾಗುವನು," ಎನ್ನುವವರೊಬ್ಬರು. "ಓದಿ ಓದಿ ತಂದೆಯಂತೆಯೇ ಇವನೂ ಹುಚ್ಚನಾಗಿ ಹೋಗುವನೊ ಏನೊ!" ಎನ್ನುವವರು ಮತ್ತೊಬ್ಬರು. ಅವನು ಹುಚ್ಚನಾಗುವನೆಂದು ಅನುಮಾನಪಡುವವರಲ್ಲಿ ಅವನ ಸೋದರಮಾವನೂ ಒಬ್ಬರು. ಒಮ್ಮೊಮ್ಮೆ ಅವರು ಕಾಶೀನಾಥನನ್ನು ಕುರಿತು "ಮಗೂ, ನೀನು ಬಡವರ ಮನೆಯ ಹುಡುಗ, ಇಷ್ಟೊಂದು ಓದುಬರಹ ಕಲಿತು ಏನು ಮಾಡುವೆ? ಎಷ್ಟು ಓದಿರುವೆಯೋ ಅದರಿಂದಲೇ ನಿನ್ನ ಹೊಟ್ಟೆ-ಬಟ್ಟೆಗೆ ಸಾಕಾಗುವಷ್ಟನ್ನು ಸುಲಭವಾಗಿ ಸಂಪಾದಿಸಬಹುದು. ಇಷ್ಟೆಲ್ಲ ಓದಿ, ಕಡೆಗೆ ನೀನೂ ಸ್ವರ್ಗೀಯ ಪಂಡ್ಯೋಪಾಧ್ಯಾಯರಂತೆ ಮನೆಯ ಒಂದು

ಮೂಲೆಯಲ್ಲಿ ತಲೆತೂಗುತ್ತ ಕುಳಿತುಕೊಳ್ಳುವೆಯಾ? ಈಗಿರುವ ಅಲ್ಪಸ್ವಲ್ಪ ಆಶೆಯೂ ಅನಂತರ ಇಲ್ಲದಾಗುವುದು," ಎನ್ನುತ್ತಿದ್ದರು ಸೋದರಮಾವನ ಈ ಉಪದೇಶವು ಅವನ ಒಂದು ಕಿವಿಯನ್ನು ಹೊಕ್ಕು, ಮತ್ತೊಂದು ಕಿವಿಯಿಂದ ಹೊರಟೇ ಹೋಗುತ್ತಿತ್ತು

ಎಲ್ಲಿ ಹುಚ್ಚನಾಗಿ ಹೋಗುವನೋ ಎಂಬ ಚಿಂತೆಯಿಂದ ಸೋದರ-ಮಾವ ಗದರಿಸುತ್ತಿದ್ದರು, ಮನೆಯ ಕೆಲಸ ಕಾರ್ಯಗಳಾವುದನ್ನೂ ಮಾಡುವುದಿಲ್ಲವೆಂದು ಸೋದರತ್ತೆ ಸಿಡುಕುತ್ತಿದ್ದಳು, ಸರ್ವದಾ ಪುಸ್ತಕದ ಹುಳುವಾಗಿಯೆ ಇರುವುದನ್ನು ಕಂಡು ಸೋದರಮಾವನ ಮಗನೂ ಹಾಸ್ಯಮಾಡುತ್ತಿದ್ದನು ಆದರೂ ಕಾಶೀನಾಥನು ಇವೆಲ್ಲವನ್ನೂ ಧೈರ್ಯದಿಂದ ಸಹಿಸಿಕೊಳ್ಳುತ್ತಿದ್ದನು, ಅಥವಾ ಗಮನಿಸದೆ ಇರುತ್ತಿದ್ದನು

ಅದೇನೇ ಇರಲಿ, ಅಂತೂ ಫಲಿತಾಂಶ ಒಂದೇ! ಅವನು ನಿತ್ಯವೂ ಮಾಡುತ್ತಿದ್ದುದನ್ನೇ ಮಾಡುತ್ತಿದ್ದನು ಸಾಯಂಕಾಲ ಬಯಲಿನಲ್ಲಿ ಮನ-ಬಂದಂತೆ ಅಲೆದಾಡುತ್ತಿದ್ದನು, ಒಮ್ಮೆ ನದೀ ತೀರದಲ್ಲಿನ ಒಂದು ಅಶ್ವತ್ಥ ವೃಕ್ಷದಡಿ ಕುಳಿತು ಸೂರ್ಯಾಸ್ತಮಯದ ಸುಂದರ ದೃಶ್ಯವನ್ನು ದಿಟ್ಟಿಸುತ್ತಿದ್ದನು, ಒಮ್ಮೆ ಊರಿನ ಜಮೀನುದಾರರ ಮನೆಯ ಶಿವ ದೇವಸ್ಥಾನಕ್ಕೆ ಹೋಗಿ, ಅರ್ಧನಿಮೀಲಿತ ನೇತ್ರಗಳಿಂದ ಮಂಗಳಾರತಿಯನ್ನು ಮನದಣಿಯೆ ನೋಡುತ್ತಿದ್ದನು, ಒಮ್ಮೊಮ್ಮೆ ಸೋದರಮಾವನ ಚಂಡೀಮಂಟಪಕ್ಕೆ ಹೊರಟುಹೋಗಿ, ಕತ್ತಲೆಯಾದ ಒಂದು ಮೂಲೆಯಲ್ಲಿ ಕಂಬಳಿಯನ್ನು ಹಾಸಿಕೊಂಡು ಸುಮ್ಮನೆ ಕುಳಿತುಬಿಡುತ್ತಿದ್ದನು

ಪ್ರಪಂಚದಲ್ಲಿ ಅವನಿಗೆ ಯಾವುದೊಂದೂ ಕಾರ್ಯ, ಉದ್ದಿಶ್ಯ ಅಥವಾ ಆಶೆಯೇ ಇದ್ದಿಲ್ಲವೇನೊ! ಕಾಶೀನಾಥನು ಹನ್ನೆರಡು ವರ್ಷದವನಾಗಿದ್ದಾಗ ಅವನ ತಂದೆಯವರು ತೀರಿಕೊಂಡರು ಈ ಆರು ವರ್ಷಗಳನ್ನೂ ಅವನು ತನ್ನ ಸೋದರಮಾವನ ಮನೆಯಲ್ಲಿ ಇದೇ ರೀತಿ ಕಳೆದಿದ್ದಾನೆ ಈಗೇನು ಮಾಡುತ್ತಿರುವೆನು, ಮುಂದೇನು ಮಾಡಬೇಕು, ಹಿಂದ ಏನು ಮಾಡಿದೆನು, ಮತ್ತು ಈಗ ಮಾಡಬೇಕಾದುದೇನು ಎಂಬೀ ಯೋಚನೆಗಳೇ ಅವನ ಮನಸ್ಸಿನಲ್ಲಿ ಉತ್ಪನ್ನವಾಗುತ್ತಿರಲಿಲ್ಲ ಜೀವನಪರ್ಯಂತವೂ ತನ್ನ ದಿನಗಳು ಇದೇ ರೀತಿ ಕಳೆಯುವುವು, ತನ್ನ ಸೋದರಮಾವನ ಮನೆಯಲ್ಲೇ ತಿಂದು ತಿರುಗುತ್ತಿರುವೆನು, ತಾನೇನೂ ಮಾಡಬೇಕಾದುದೇ ಇಲ್ಲ, ಎತ್ತಲೂ

ಹೋಗಬೇಕಾದುದೂ ಇಲ್ಲ, ನೀರವ ನಿಸ್ತಬ್ಧವಾದ ಆ ಕತ್ತಲೆಯ ಕೋಣೆ ಯಾವಾಗಲೂ ತನ್ನ ಅಧಿಕಾರದಲ್ಲಿಯೆ ಉಳಿಯುವುದು, ಯಾರೂ ಅದರ ಮೇಲೆ ತಮ್ಮ ಅಧಿಕಾರ ಸ್ಥಾಪಿಸುವಂತೆಯೂ ಇಲ್ಲ, ಅಥವಾ ತನ್ನನ್ನು ಅಲ್ಲಿಂದ ಹೊರದೂಡಿ ಬೇರೆ ಸ್ಥಳದಲ್ಲಿ ಕುಳಿತುಕೊಳ್ಳಲು ಹೇಳುವಂತೆಯೂ ಇಲ್ಲ, ಎಂದೇ ಅವನ ಭಾವನೆ ಒಮ್ಮೊಮ್ಮೆ ಊರಿನವರಾರಾದರೂ ಅವನನ್ನು ಕರೆದು "ಕಾಶೀನಾಥ! ಇಂಥ ಜೀವನವನ್ನು ಯಾರೂ ನಡೆಸಿದ್ದೂ ಇಲ್ಲ, ನೀನೂ ನಡೆಸಲಾರೆ ಯಾವುದಾದರೊಂದು ಕೆಲಸ ಮಾಡಬೇಕು," ಎಂದು ಹೇಳಿದರೆ ಉತ್ತರವನ್ನೆ ಕೊಡುತ್ತಿರಲಿಲ್ಲ ಮನಸ್ಸಿನಲ್ಲಿ ಮಾತ್ರ "ನಾನೇನು ಮಾಡುತ್ತಿರುವೆನು, ಏನು ಮಾಡಬೇಕು?" ಎಂಬ ಯೋಚನೆ ಹುಟ್ಟುತ್ತಿತ್ತು ಇದೇ ರೀತಿ ಅವನ ದಿನಗಳು ಸಾಗಿದ್ದುವು

## ೨

ಊರಿನ ಜಮೀನುದಾರರ ಹೆಸರು ಪ್ರಿಯನಾಥ ಮುಖೋಪಾ-ಧ್ಯಾಯರು ಪ್ರಿಯನಾಥ ಬಾಬುಗಳು ಬಹಳ ಕುಲೀನರು, ಅತಿಶಯ ಧನವಂತರು ಅಷ್ಟು ದೊಡ್ಡ ಮನುಷ್ಯರೆಂದೆನಿಸಿಕೊಂಡ ಅವರ ಮಗಳಿಗೆ ಎಷ್ಟು ಹುಡುಕಿದರೂ ಸರ್ವರೂಪಗುಣಸಂಪನ್ನನಾದ ವರನೊಬ್ಬನು ದೊರಕಲಿಲ್ಲ. ಇದರಿಂದ ಅವರಿಗೂ ಕುಲೀನತೆಯ ಪದ್ಧತಿಯೆಂದರೆ ಸಾಕುಬಡಿದು ಹೋಯಿತು ಪತ್ನಿಯೊಡನೆ ಈ ವಿಚಾರವಾಗಿ ಮಾತೆತ್ತಿದರೆ, ಅವಳು "ನನಗೆ ಇರುವವಳೇ ಒಬ್ಬಳು ಮಗಳು, ಕುಲೀನತೆಯನ್ನು ಕಟ್ಟಿಕೊಂಡು ನಾನೇನು ಮಾಡಲಿ?" ಎನ್ನುವಳು

ಪ್ರಿಯನಾಥ ಬಾಬುಗಳ ಗುರುಗಳಿರುವುದೂ ಅದೇ ಊರಿನಲ್ಲಿ ಅವರನ್ನು ಕೇಳಲಾಗಿ, ಅವರು "ಹರಿಹರಿ! ಹೀಗೂ ಎಲ್ಲಾದರೂ ಮಾಡುವುದುಂಟೇ? ನಿನಗೇನೂ ದುಡ್ಡು-ಕಾಸಿಗೆ ಕಡಿಮೆಯಿಲ್ಲ ಅಂದಬಳಿಕ ಬಡವನಾದರೂ ಕುಲೀನನಾದ ವರನನ್ನು ಹುಡುಕಿ, ಕನ್ಯಾದಾನ ಮಾಡು ಮಗಳನ್ನೂ ಅಳಿಯನನ್ನೂ ಮನೆಯಲ್ಲೇ ಇರಿಸಿಕೋ! ಇದು ನೋಡುವುದಕ್ಕೂ ಚೆಂದ, ಕೇಳುವುದಕ್ಕೂ ಚೆಂದ ಇಂತಹ ಉತ್ತಮ ವಂಶ, ಇಷ್ಟು ಉಚ್ಚ

ಕುಲ, ಇದರ ಮರ್ಯಾದೆಯನ್ನು ಹಾಳು ಮಾಡುವುದು ಧರ್ಮವೇ ? ''
ಎಂದರು ಪ್ರಿಯನಾಥ ಬಾಬುಗಳು ಮನೆಗೆ ಬಂದು, ಹೆಂಡತಿಗೆ ಈ
ಮಾತನ್ನು ತಿಳಿಸಿದರು. ಅವಳು ಅತ್ಯಾನಂದದಿಂದ " ಹೌದು ! ಹಾಗೆಯೇ
ಮಾಡಿರಿ ನನ್ನ ಜೀವವಿರುವ ವರೆಗೂ ಕಮಲಾ ನನ್ನ ಬಳಿಯಲ್ಲೇ ಇರಲಿ !"
ಎಂದು ಸೈಗುಟ್ಟಿದಳು

ಹಾಗೆಯೇ ಆಯಿತು ಬಡವನಾದರೂ ಕುಲೀನನಾದ ವರನಿಗೆ ಕಮಲೆ
ಯನ್ನು ಕೊಟ್ಟು, ವಿವಾಹ ಮಾಡಿ, ಮಗಳನ್ನೂ ಅಳಿಯನನ್ನೂ ಮನೆಯಲ್ಲೇ
ಇರಿಸಿಕೊಳ್ಳುವುದೆಂದು ನಿರ್ಧರಿಸಿದರು ಪ್ರಿಯನಾಥ ಬಾಬುಗಳು ಒಂದು
ದಿವಸ ಪಂಡಿತ ಮಧುಸೂದನ ಮುಖೋಪಾಧ್ಯಾಯರ ಮನೆಗೆ ಬಂದರು
ಮಧುಸೂದನ ಪಂಡಿತರು ಆಗ ಎಲ್ಲೋ ಹೊರಡುವುದರಲ್ಲಿದ್ದರು ಅಕಸ್ಮಾ
ತ್ತಾಗಿ ಅಷ್ಟು ದೊಡ್ಡ ಜಮೀನುದಾರರು ಆಗಮಿಸಿದ್ದನ್ನು ಕಂಡು ಅವರಿಗೆ
ಬಹಳ ಸಂಕೋಚವಾಯಿತು ಅವರನ್ನೆಲ್ಲಿ ಕುಳ್ಳಿರಿಸುವುದು, ಏನು ಮರ್ಯಾದೆ
ಮಾಡುವುದು ಎಂಬುದೇ ಪಂಡಿತರಿಗೆ ತೋರಲಿಲ್ಲ ಪ್ರಿಯನಾಥ ಬಾಬು
ಗಳು ಪಂಡಿತರ ಇಂಗಿತವನ್ನು ಅರಿತುಕೊಂಡು ನಗುತ್ತ " ತಮ್ಮೊಡನೆ ಸ್ವಲ್ಪ
ಮಾತನಾಡಬೇಕಾಗಿದೆ ನಡೆಯಿರಿ, ಒಳಗೆ ಹೋಗಿ ಕುಳಿತುಕೊಳ್ಳೋಣ, "
ಎಂದರು

'' ಹಾಗೆಯೇ ಆಗಲಿ, ನಡೆಯಿರಿ ಆದರೆ—''

" ಆದರೆ - ಗೀದರೆ ಏನೂ ಇಲ್ಲ ನಡೆಯಿರಿ, ಕುಳಿತುಕೊಂಡು ಎಲ್ಲ
ವಿಷಯವನ್ನೂ ಹೇಳುವೆನು "

ಇಬ್ಬರೂ ಚಂಡೀಮಂಟಪದಲ್ಲಿ ಹೋಗಿ ಕುಳಿತರು ಪ್ರಿಯನಾಥ
ಬಾಬುಗಳು '' ನಿಮ್ಮ ಸೋದರಳಿಯ ಎಲ್ಲಿ ? '' ಎಂದು ಕೇಳಿದರು

'' ಇನ್ನೆಲ್ಲಿರಬೇಕು ? ಭಟ್ಟಾಚಾರ್ಯರ ವಾರಶಾಲೆಯಲ್ಲಿರಬಹುದು "

'' ಸ್ವಲ್ಪ ಅವನನ್ನು ಕರೆಸಿರಿ "

'' ಕರೆಸುವೆನು ಏಕೆ, ಏನಾದರೂ ಅಗತ್ಯದ ಕೆಲಸವಿತ್ತೇ ? ''

'' ಹೌದು, ಒಂದು ಅಗತ್ಯದ ಕೆಲಸವಿದೆ "

ಏನೂ ತಿಳಿಯದ ಆ ಬಾಲಕನೊಡನೆ ಇಷ್ಟು ದೊಡ್ಡ ಜಮೀನುದಾರ
ರಿಗೆ ಏನು ಕೆಲಸವೆಂಬುದು ಮಧುಸೂದನ ಪಂಡಿತರಿಗೆ ಎಷ್ಟು ಯೋಚಿಸಿ
ದರೂ ಹೊಳೆಯಲಿಲ್ಲ ಅವರು ಸ್ವಲ್ಪ ಹೆದರಿಕೆಯಿಂದ " ಏಕೆ ? ಅವನಿಂದ
ಏನಾದರೂ ಅಪರಾಧವಾಯಿತೇ ? ''

" ಎಲ್ಲಿಯ ಅಪರಾಧ? "

" ಮತ್ತೇನು ? "

ಪ್ರಿಯ ಬಾಬುಗಳು ನಗುತ್ತ ಹೇಳಿದರು--' ಅವನನ್ನು ನನ್ನ ಅಳಿಯನನ್ನಾಗಿ ಮಾಡಿಕೊಳ್ಳಬೇಕೆಂದಿರುವೆನು ಆ ಸಂಬಂಧದಿಂದ ನೀವು ನನ್ನ ಬೀಗರಾದಿರಿ, " ಎನ್ನುತ್ತ ಪುನಃ ಗಹಗಹಿಸಿ ನಗಲಾರಂಭಿಸಿದರು ಯಾವ ವಿಷಯಕ್ಕಾಗಿ ಅವರು ನಕ್ಕರೆಂಬುದು ಮಧುಸೂದನ ಪಂಡಿತರಿಗೆ ತಿಳಿದಿದ್ದರೆ, ಮತ್ತೆ ಅವರು ಮಾತನಾಡುತ್ತಿದ್ದರೋ ಇಲ್ಲವೋ! ತುಸು ಹೊತ್ತು ಆಶ್ಚರ್ಯದಿಂದ ಅವರ ಕಡೆ ನೋಡುತ್ತ ನಿಂತಿದ್ದು " ಯಾರನ್ನು? ಕಾಶೀನಾಥನನ್ನೇ ? " ಎಂದು ಕೇಳಿದರು

" ಹೌದು "

" ಅದೇನು ? "

" ಇಷ್ಟು ಒಳ್ಳೆಯ ಕುಲೀನ ವರನು ಎಷ್ಟು ಹುಡುಕಿದರೂ ಸಿಗಲಿಲ್ಲ ಇದಕ್ಕೆ ನಿಮ್ಮದೇನಾದರೂ ಅಭ್ಯಂತರ ಉಂಟೇ ? "

" ನನಗೆ ಅಭ್ಯಂತರವೇ ? ಇದು ನನ್ನ ಪರಮ ಸೌಭಾಗ್ಯವೆಂದೇ ಹೇಳಬೇಕು ! ಆದರೆ ಮಾತ್ರ ಅವನು ಹುಚ್ಚ "

" ಹುಚ್ಚನೇ ? ಅದು ಹೇಗೆ ? ನನಗೇನೂ ಗೊತ್ತಿಲ್ಲವಲ್ಲಾ ! "

" ಅವನ ತಂದೆಯೂ ಹುಚ್ಚರಾಗಿದ್ದರು "

ಕಾಶೀನಾಥನ ತಂದೆಯವರಿಗೂ ಪ್ರಿಯ ಬಾಬುಗಳಿಗೂ ಪೂರ್ಣ ಪರಿಚಯವಿತ್ತು ಅಲ್ಲದೆ ಅನೇಕರು ಅವರನ್ನು ಹುಚ್ಚರೆನ್ನುತ್ತಿದ್ದುದೂ ಪ್ರಿಯ ಬಾಬುಗಳಿಗೆ ಗೊತ್ತಿತ್ತು ಆದ್ದರಿಂದ ಅವರು ಸ್ವಲ್ಪ ಸಮಯ ಸುಮ್ಮನಿದ್ದು, ಅನಂತರ " ಹುಡುಗನ ಹೆಸರೇನು ? " ಎಂದು ಕೇಳಿದರು

" ಕಾಶೀನಾಥ ವಂದ್ಯೋಪಾಧ್ಯಾಯ "

" ಸ್ವಲ್ಪ ಅವನನ್ನು ಕರೆಸಿರಿ ಒಮ್ಮೆ ಅವನನ್ನು ನೋಡಬೇಕಾಗಿದೆ ."

ಮಧುಸೂದನ ಪಂಡಿತರು ಅವನಿಗೆ ಕರೆಕಳುಹಿದರು ಪಂಡಿತರ ಕೊನೆಯ ಮಗನೇ ಕರೆಯಲು ಹೋದ. ಅವನು ಹೋಗಿ " ಕಾಶೀ ಅಣ್ಣ ! " ಎಂದು ಕೂಗಿದ ಕಾಶೀನಾಥ ಏನೂ ಉತ್ತರ ಕೊಡಲಿಲ್ಲ ಪುನಃ " ಕಾಶೀ ಅಣ್ಣ ! " ಎಂದು ಕೂಗಿದ ಈ ಸಲ ಕಾಶೀನಾಥ ತಲೆಯೆತ್ತಿ ನೋಡಿ, " ಏನು ? " ಎಂದ.

" ತಂದೆಯವರು ನಿನ್ನನ್ನು ಕರೆಯುತ್ತಿರುವರು. "

" ಏಕೆ ? "

" ಅದೆಲ್ಲ ನನಗೆ ಗೊತ್ತಿಲ್ಲ ಊರಿನ ಜಮೀನುದಾರರು ಬಂದಿರುವರು. ಅವರೇ ನಿನ್ನನ್ನು ಕರೆಕಳುಹಿದರು "

ಕಾಶೀನಾಥ ಮೆಲ್ಲನೆ ಪುಸ್ತಕವನ್ನು ಮುಚ್ಚಿ, ಎದ್ದು ಬಂದ ನಂತರ ಅವರೆದುರಿಗೆ ಹೋಗಿ ಕುಳಿತ ಪ್ರಿಯ ಬಾಬುಗಳು ಒಮ್ಮೆ ಅವನನ್ನು ತಲೆಯಿಂದ ಕಾಲ ವರೆಗೂ ದಿಟ್ಟಿಸಿ, " ಕಾಶೀನಾಥ, ಈಗ ನೀನೆಲ್ಲಿದ್ದೆ ? " ಎಂದು ಕೇಳಿದರು

" ಭಟ್ಟಾಚಾರ್ಯರ ಪಾಠಶಾಲೆಯಲ್ಲಿ ಓದುತ್ತಿದ್ದೆ "

" ನೀನು ವ್ಯಾಕರಣವನ್ನು ಓದಿರುವೆಯಾ ? "

ಕಾಶೀನಾಥ ತಲೆಯಲ್ಲಾಡಿಸುತ್ತ " ಓದಿರುವೆನು, " ಎಂದ

" ಸಾಹಿತ್ಯ ಓದಿರುವೆಯಾ ? "

" ಅಲ್ಪ ಸ್ವಲ್ಪ ಓದಿರುವೆನು "

" ಈಗೇನು ಓದುತ್ತಿರುವೆ ? "

" ಸಾಂಖ್ಯ ದರ್ಶನ "

" ಒಳ್ಳೆಯದು ಹೋಗಿ ಓದಿಕೋ ! " ಎಂದರು ಪ್ರಿಯ ಬಾಬು

ಕಾಶೀನಾಥ ಅಲ್ಲಿಂದ ಹೊರಟುಹೋದ ತನಗೆ ಏಕೆ ಕರೆಕಳುಹಿದರು, ಏಕೆ ಹೋಗೆಂದು ಹೇಳಿದರು, ಎಂಬುದೇನೂ ಅವನಿಗೆ ತಿಳಿಯಲಿಲ್ಲ ಅವನು ಪುನಃ ಪಾಠಶಾಲೆಗೆ ಹೋಗಿ, ಪುಸ್ತಕವನ್ನು ತೆರೆದು ಕುಳಿತುಕೊಂಡ ಅವನು ಹೊರಟು ಹೋದನಂತರ ಪ್ರಿಯಬಾಬುಗಳು " ಅದೇನೋ, ಹುಚ್ಚನೆಂದು ಹೇಳುತ್ತಿದ್ದಿರಲ್ಲಾ ? " ಎಂದು ಕೇಳಿದರು

" ಇಲ್ಲ, ಇಲ್ಲ, ಹಾಗೆ ಹುಚ್ಚನೆಂದೂ ಹೇಳುವಂತಿಲ್ಲ ಆದರೆ ಒಂದು ರೀತಿಯ ವಿಚಿತ್ರ ಮನುಷ್ಯ ಆದ್ದರಿಂದಲೇ ಜನರು ಅವನನ್ನು ಹುಚ್ಚನೆನ್ನುವರು "

" ಅದು ಹೇಗೆ ? "

" ಸದಾ ಪುಸ್ತಕವನ್ನಿಟ್ಟುಕೊಂಡು ಕುಳಿತಿರುವನು, ಇಲ್ಲದಿದ್ದರೆ ಮನ ಬಂದಂತೆ ಅಲೆದಾಡುವನು ಯಾವ ಮಾತಿಗೂ ಬರುವುದಿಲ್ಲ, ಯಾವ ಕೆಲಸವನ್ನೂ ಮಾಡುವುದಿಲ್ಲ-- ಇಂತಹ ಒಂದು ರೀತಿಯ ವಿಚಿತ್ರ ಮನುಷ್ಯ ! "

“ ಇನ್ನೇನು ಮಾಡುವನು ? ”

“ ಒಮ್ಮೊಮ್ಮೆ ಕತ್ತಲೆಯ ಕೋಣೆಯಲ್ಲಿ ಗಂಟೆ - ಗಂಟೆಗಳ ಕಾಲ ಸುಮ್ಮನೆ ಕುಳಿತುಬಿಡುವನು ”

ಪ್ರಿಯಬಾಬುಗಳು ನಗುತ್ತ “ ಆಮೇಲೆ ? ” ಎಂದರು.

ಈ ನಗೆಯ ಅರ್ಥವು ಮಧುಸೂದನ ಪಂಡಿತರ ಮನಸಿಗೆ ಸ್ವಲ್ಪ ಸ್ವಲ್ಪ ತಿಳಿಯಿತು ಅವರು ಸ್ವಲ್ಪ ಹಿಂದುಮುಂದೆ ನೋಡಿ “ ಇಲ್ಲ, ಇನ್ನೇನೂ ಇಲ್ಲ ” ಎಂದರು

“ ಒಮ್ಮೆ ಮನೆಯ ಹೆಂಗಸರನ್ನು ಕೇಳಿ ಬನ್ನಿರಿ ಅವರಿಗೂ ಒಪ್ಪಿಗೆ ಇರುವುದಾದರೆ, ಇದೇ ತಿಂಗಳಲ್ಲಿ ಮದುವೆ ನೆರವೇರಲಿ ”

ಮಧುಸೂದನ ಪಂಡಿತರು ಒಳಕ್ಕೆ ಹೋಗಿ, ತಮ್ಮ ಹೆಂಡತಿಗೆ ಎಲ್ಲ ವಿಷಯವನ್ನೂ ತಿಳಿಸಿದರು ಕೇಳಿದೊಡನೆಯೇ ಅವಳಿಗೆ ಆಕಾಶದಿಂದ ನೆಲಕ್ಕುರುಳಿದಂತಾಯಿತು ಆಶ್ಚರ್ಯವು ಸ್ವಲ್ಪ ಕಡಿಮೆಯಾದನಂತರ ಅವಳು “ ಕಾಶಿಗೆ ಪ್ರಿಯಬಾಬುವಿನ ಮಗಳನ್ನು ಕೊಟ್ಟು ಮದುವೆಯೇ ? ನಿಮಗೇನೂ ಭ್ರಾಂತಿ ಅಲ್ಲವಷ್ಟೆ ? ” ಎಂದಳು

“ ಇದರಲ್ಲಿ ಭ್ರಾಂತಿಯ ವಿಷಯವೆಲ್ಲಿಯದು ? ”

“ ಅಲ್ಲದೆ ಮತ್ತೇನು ? ”

“ ಕಾಶೀನಾಥ ಎಷ್ಟು ಕುಲೀನ ಹುಡುಗನೆಂಬುದನ್ನು ಯೋಚಿಸಿ ನೋಡು ”

ಒಮ್ಮೆ ನಿಟ್ಟುಸುರೆಳೆದು, ಅವಳೆಂದಳು— “ ನಮ್ಮ ಹರಿಯೊಡನೆ ಏಕಾಗಬಾರದು ? ”

ಅದು ಆಗದ ಮಾತೆಂಬುದು ಪತಿ-ಪತ್ನಿಯರಿಬ್ಬರಿಗೂ ಚೆನ್ನಾಗಿ ಗೊತ್ತು ಪಂಡಿತರೂ ಒಮ್ಮೆ ದೀರ್ಘ ಶ್ವಾಸವನ್ನೆಳೆದು “ ಅದಿರಲಿ ! ನಿನ್ನ ಅಭಿಪ್ರಾಯವೇನು, ಹೇಳು ? ” ಎಂದರು

ವಿಷಾದಪೂರ್ಣ ಧ್ವನಿಯಿಂದ “ ಅಭಿಪ್ರಾಯವೇನು ? ಮದುವೆ ಮಾಡಿರಿ ! ” ಎಂದಳು ಅವಳು

ಮಧುಸೂದನ ಪಂಡಿತರು ಹೊರಗೆ ಬಂದು, ಒಣ ನಗೆಯನ್ನು ಬೀರುತ್ತ ಹೇಳಿದರು— “ ಅವಳ ಆನಂದಕ್ಕೆ ಪಾರವೇ ಇಲ್ಲ ಒಂದು ವಿಧದಲ್ಲಿ ಅವಳೇ ಕಾಶಿಯ ತಾಯಿಯೆಂದು ಹೇಳಬಹುದು ಕಾಶಿ ಇನ್ನೂ

ಎರಡು ವರ್ಷದವನಾಗಿದ್ದಾಗಲೇ ನನ್ನ ತಂಗಿ ಸ್ವರ್ಗಸ್ಥಳಾದಳು ಆಗಿನಿಂದಲೂ ಅವನನ್ನು ಸಾಕಿ ಸಲಹಿ, ದೊಡ್ಡವನನ್ನಾಗಿ ಮಾಡಿದ್ದು ಅವಳೆ. ಆ ಬಳಿಕ ಭಾವನವರು ಮೃತಿಹೊಂದಿದ ಮೇಲಂತೂ ಅವನು ಇಲ್ಲೇ ಇದ್ದಾನೆ ''

" ನನಗೆ ಎಲ್ಲವೂ ಗೊತ್ತು ಹಾಗಿದ್ದರೆ ಈ ದಿವಸವೇ ಎಲ್ಲವನ್ನೂ ನಿಶ್ಚಯ ಮಾಡಿಬಿಡೋಣ ''

" ನಿಶ್ಚಯ ಮಾಡುವುದೇನು? ತಮಗೆ ಎಂದು ಅನುಕೂಲವೋ, ಅಂದೇ ನಾನೂ ಆಶೀರ್ವಾದ ಮಾಡಿ ಬರುವೆನು "

" ಹಾಗಲ್ಲ ನಾನು ಕೇಳುತ್ತಿರುವುದು ಶಿಷ್ಟಾಚಾರದ ಮಾತನ್ನು "

" ಆ ವಿಷಯವಾಗಿ ನಾನೇನೂ ಹೇಳುವಂತಿಲ್ಲ, ಎಲ್ಲವೂ ತಾವು ಹೇಳಿದಂತೆ ಹೀಗಿದ್ದರೂ ನಿಮ್ಮ ಭಾವೀ ಅಳಿಯನ ಸೋದರತ್ತೆಯೊಡನೆ-ಆಕೆಯೆ ಒಂದು ರೀತಿಯಿಂದ ಅವನ ತಾಯಿ— ಒಂದು ಮಾತನ್ನು ಕೇಳಿಬಿಡುವುದು ಒಳ್ಳೇದು ''

" ಹೌದು, ಹೌದು ಆ ವಿಷಯವೇ ನಾನೂ ಹೇಳಿದ್ದು ! " ಎಂದು ಹೇಳಿ ಪ್ರಿಯ ಬಾಬುಗಳು ಹುಡುಗನ ಸೋದರತ್ತೆಯನ್ನು ಕೇಳಿದರು ಒಂದು ಸಾವಿರ ರೂಪಾಯಿ ಕೊಟ್ಟ ಹೊರತು ಮದುವೆ ನಡೆಯುವುದೇ ಸಾಧ್ಯವಿಲ್ಲವೆಂದು ಅವಳಿಂದ ಉತ್ತರ ಬಂದಿತು ಕಡೆಗೆ ಹಾಗೆಯೇ ಆಯಿತು ಮಾತೃಪ್ರಾಯಳಾದ ಬೀಗಿತಿಗೆ ಒಂದು ಸಾವಿರ ರೂಪಾಯಿಗಳನ್ನು ಕೊಟ್ಟು, ವಿವಾಹ ನೆರವೇರಿಸುವುದೆಂದು ಪ್ರಿಯ ಬಾಬುಗಳು ನಿರ್ಧರಿಸಿಬಿಟ್ಟರು

## ೩

ಅದೇನೇ ಇರಲಿ, ಅತ್ತೆಯ ಮನೆಯ ಅಳಿಯನಾದಾಗಿನಿಂದಲೂ ಕಾಶೀನಾಥನಿಗೆ ಮಾನಸಿಕ ಸುಖವಿಲ್ಲ ಈಗ ಅವನು ಮನಬಂದಲ್ಲಿಗೆ ಹೋಗುವಂತಿಲ್ಲ, ಇಷ್ಟ ಬಂದೆಡೆ ನಿಲ್ಲುವಂತಿಲ್ಲ ಅವನೆಲ್ಲಿಗೆ ಹೋಗಬೇಕೆಂದರೂ ಮಾವನವರ ಅನುಮತಿ ದೊರಕುತ್ತಿರಲಿಲ್ಲ, ಹಾಗೆ ಒಂದುವೇಳೆ

ಅಕಸ್ಮಾತ್ ದೊರಕಿದರೂ, ಅತ್ತೆಯವರು ಸಿಡುಕುತ್ತ “ ಏನು ? ನನ್ನ ಅಳಿಯನು ಅಲ್ಲಿಗೆ ಹೋಗುವನೇ ! ” ಎಂದುಬಿಟ್ಟರೆ ಸಾಕು, ಅಳಿಯನ ಆಶೆಗೆ ನೀರು ಹೊಯ್ದಂತೆಯೇ ಆಗ ಅವನು ಆಶೆಯನ್ನು ಮನಸಿನಲ್ಲೇ ನುಂಗಿಕೊಂಡು ಸುಮ್ಮನಾಗಿ ಬಿಡುತ್ತಿದ್ದ ಹೀಗೇಕಾಯಿತು, ಏತಕ್ಕೋಸ್ಕರ ತನ್ನನ್ನು ಈ ರೀತಿ ಇರಿಸಿರುವರು, ಇದರಿಂದ ಅವರ ಯಾವ ಉದ್ದಿಶ್ಯ ಸಿದ್ಧಿಯಾಗುವುದು ಎಂಬುದೇ ಅವನಿಗೆ ಹೊಳೆಯಲೊಲ್ಲದು ಒಂದೊಂದು ಸಲ ಅವನು ತನ್ನ ಮನಸಿಗೆ ತಾನೇ ಸಮಾಧಾನ ಹೇಳಿಕೊಳ್ಳುತ್ತಿದ್ದ— “ ನಾನೇನು ಸಾಮಾನ್ಯ ಮನುಷ್ಯನೇ, ಅಲ್ಲಿ ಇಲ್ಲಿ ಅಲೆದಾಡುವುದಕ್ಕೆ ? ” ಆದರೆ ಹೃದಯವು ಒಳಗಿಂದೊಳಗೇ ಮಿಡುಕುತ್ತ “ ನೆಮ್ಮದಿ ಇಲ್ಲ, ಸುಖವಿಲ್ಲ, ಶಾಂತಿಯಿಲ್ಲ ! ” ಎನ್ನುತ್ತಿತ್ತು ಇದೇ ಹೃದಯವು ಹಿಂದೆ ಸ್ವೇಚ್ಛೆಯಿಂದ ಮುಳ್ಳಿನ ಅಡವಿಯಲ್ಲಿ ಸಂಚರಿಸುತ್ತಿತ್ತು, ಆದರೆ ಈಗ ಸ್ವರ್ಣ-ಸಂಕೋಲೆಯಿಂದ ಬಂಧಿಸಲ್ಪಟ್ಟಿದೆ ಎಂದು ಅವನಿಗ ಎನಿಸತೊಡಗಿದೆ ಇದೇ ಹೃದಯವು ಹಿಂದೆ ಅನಂತ, ವಿಶಾಲ ಸಮುದ್ರದಲ್ಲಿ ಈಜಾಡುತ್ತಿತ್ತು, ಆದರೆ ಈಗ ನಾಲ್ಕೂ ಕಡೆ ಕಟ್ಟ ಕಟ್ಟಿದ ಪುಷ್ಕರಿಣಿಯಲ್ಲಿ ಕೂಡಿರಿಸಲ್ಪಟ್ಟಿದೆ ಎಂದ ಮಾತ್ರಕ್ಕೆ ಅದು ಸಮುದ್ರದಲ್ಲಿ ಅತಿ ಸುಖದಿಂದ ಸಂಚರಿಸುತ್ತಿತ್ತೆಂದಲ್ಲ, ಅಲ್ಲಿ ಬಿರುಗಾಳಿ ಮತ್ತು ಅಲೆಗಳ ಹೊಡೆತಕ್ಕೆ ಸಿಲುಕಿ ತಲ್ಲಣಿಸಬೇಕಾಗುತ್ತಿತ್ತು, ಆದರೆ ಈ ನಿರ್ಮಲ ಸರೋವರವು ಅದಕ್ಕಿಂತಲೂ ಹೆಚ್ಚು ಕಷ್ಟಕರವಾಗಿ ತೋರುತ್ತಿದೆ ಈಗ ಅವನಿಗೆ ಒಮ್ಮೊಮ್ಮೆ ಯಾರೋ ತನ್ನನ್ನು ಕುದಿಯುತ್ತಿರುವ ನೀರಿನ ಕಗ್ಗಾಯಿಯಲ್ಲಿ ಕುಳ್ಳಿರಿಸಿಬಿಟ್ಟಿರುವರೋ ಎಂದೆನಿಸುತ್ತಿದೆ ಎಲ್ಲರೂ ಸೇರಿ ತನ್ನ ಶರೀರವನ್ನೇ ಕೊಂಡುಕೊಂಡು ಬಿಟ್ಟಿರುವರು, ಈಗ ಅದು ತನ್ನದೇ ಅಲ್ಲ, ಎಂದು ಅವನು ಭಾವಿಸುತ್ತಿದ್ದಾನೆ ತಲೆಯಲ್ಲಿ ಆ ಹಿಂದಿನ ಜುಟ್ಟಿಲ್ಲ, ಕಂಠದಲ್ಲಿ ಆ ತುಳಸೀಮಾಲೆ ಇಲ್ಲ, ಬರಿತಲೆ ಬರಿಗಾಲುಗಳಿಲ್ಲ, ಧನಂಜಯ ಭಟ್ಟಾಚಾರ್ಯರ ಆ ಪಾಠಶಾಲೆ ಇಲ್ಲ, ನದೀ ತೀರದ ಆ ಅಶ್ವತ್ಥ ವೃಕ್ಷವಿಲ್ಲ, ಚಂಡೀಮಂಟಪದ ಆ ಮೂಲೆ ಇಲ್ಲ, ಏನೇನೂ ಇಲ್ಲ !

ಅವನ ಈಗಿನ ಸ್ಥಿತಿ ಹೊಸ ಜನ್ಮವನ್ನೆತ್ತಿ, ಹಳೆಯ ಜನ್ಮದ ಸಕಲ ಸಾಮುಗ್ರಿಗಳನ್ನೂ ಕಿತ್ತೊಗೆದಂತಿತ್ತು ಅಥವಾ ಅವನ ಮನಸ್ಸು ದೇಹಗಳೆರಡೂ ಪರಸ್ಪರ ಜಗಳವಾಡಿ, ಬೇರೆ ಬೇರೆಯಾದಂತಿತ್ತು ಸಾಯಂಕಾಲ

ವಾದೊಡನೆಯೇ ಅವನ ಮನಸ್ಸು ನದೀ ತೀರದ ಆ ಅಶ್ವತ್ಥ ವೃಕ್ಷದ ಬಳಿ ಅಥವಾ ಸುತ್ತುಮುತ್ತಲಿನ ಹಸುರು ಹೊಲಗಳಲ್ಲಿ ಅಲೆದಾಡುತ್ತಿದ್ದರೆ, ಅವನ ಶರೀರವು ಬಹುಮೂಲ್ಯ - ವಸ್ತುಗಳನ್ನು ಧರಿಸಿ, ಕುದುರೆಯ ಗಾಡಿಯಲ್ಲಿ ಕುಳಿತು, ಗಾಳಿ ತಿನ್ನಲು ಹೊರಡುತ್ತಿತ್ತು ಅವನ ಮನಸ್ಸು ಸ್ವಚ್ಛವಾದ ಚೌಕವನ್ನುಟ್ಟು, ಸ್ವೇಚ್ಛೆಯಿಂದ ನದಿಯಲ್ಲಿ ಈಜಾಡುತ್ತಿದ್ದಾಗ, ಶರೀರವು ಕಾಲುಮಣೆಯ ಮೇಲೆ ಕುಳಿತು ಸೇವಕರಿಂದ ಅಭ್ಯಂಜನ ಸ್ನಾನ ಮಾಡಿಸಿ ಕೊಳ್ಳುತ್ತಿತ್ತು ಈ ರೀತಿಯಾಗಿ, ಒಬ್ಬನೇ ಕಾಶೀನಾಥನು ಎರಡು ಕಡೆ ಎರಡು ಕೆಲಸಗಳನ್ನು ಮಾಡುತ್ತಿದ್ದನು, ಆದರೆ ಮಾತ್ರ ಯಾವುದೂ ಸರ್ವಾಂಗ-ಸುಂದರವೂ ಆಗುತ್ತಿದ್ದಿಲ್ಲ, ಪೂರ್ಣವೂ ಆಗುತ್ತಿದ್ದಿಲ್ಲ

ಹೀಗೆಯೇ ಅನೇಕ ದಿನಗಳು ಸಂದುವು ಅತ್ತೆಯ ಮನೆಯಲ್ಲಿ ಒಂದೊಂದಾಗಿ, ಹನ್ನೆರಡು ತಿಂಗಳು ಕಳೆದುವು ಮೊದಲಿನ ಕೆಲವು ಮಾಸ ಗಳು ಅಷ್ಟೇನೂ ಅಸಹ್ಯವೆನಿಸಲಿಲ್ಲ ನವೀನತೆಯ ಹಿಗ್ಗಿನಿಂದಲೂ ಮೋಹ ದಿಂದಲೂ ಅವನಿಗೆ ತನ್ನ ಪರಿಸ್ಥಿತಿಯ ಗುಣ ದೋಷಗಳನ್ನು ಪರಿಶೀಲಿಸಲು ಸಮಯ ಸಿಗಲಿಲ್ಲ ತನ್ನ ಇರವಿನ ಅರಿವು ಅವನಿಗಾದೊಡನೆಯೇ ದಿನ-ದಿನಕ್ಕೂ ಕ್ಷೀಣವಾಗತೊಡಗಿದನು ಮತ್ತಾರಿಗೂ ಈ ವಿಷಯ ತಿಳಿಯಿತೋ ಇಲ್ಲವೋ, ಅಂತೂ ಕಮಲೆ ಮಾತ್ರ ಇದನ್ನು ಅರಿತುಕೊಂಡಳು ಅವಳ ಕಣ್ಣು ಪತಿಯ ಸ್ಥಿತಿಯನ್ನು ಗ್ರಹಿಸಿದುವು ಒಂದು ದಿನ ಅವಳು " ನೀವು ದಿನದಿನಕ್ಕೂ ಹೀಗೆ ಬಡವಾಗುತ್ತಿರುವಿರಲ್ಲ, ಅದೇಕೆ?'' ಎಂದು ಕೇಳಿದಳು.

" ಯಾರು ಹಾಗೆಂದು ಹೇಳುವರು ? "

" ನನ್ನ ಕಣ್ಣುಗಳು ''

" ಅದು ತಪ್ಪು "

ಕಮಲೆ ಅಷ್ಟಕ್ಕೇ ಸುಮ್ಮನಾಗಲಿಲ್ಲ ಅವಳು ಪುನಃ " ಅದೇಕೆ? ನನ್ನೊಡನೆ ಹೇಳುವುದಿಲ್ಲವೇ ? '' ಎಂದು ಕೇಳಿದಳು

" ಏನೂ ಇಲ್ಲದಿರುವಾಗ ಹೇಳುವುದೇನು ? ''

" ಇಲ್ಲ, ಏನೋ ಆಗಿದೆ ನಿಮಗೆ "

" ಇಲ್ಲವಲ್ಲಾ ! ''

" ಖಂಡಿತವಾಗಿಯೂ ಆಗಿದೆ ನನಗೆ ಎಲ್ಲಾ ಗೊತ್ತಾಗುವುದು "

ಕಾಶೀನಾಥ ಮುಖವನ್ನು ಬೇರೆ ಕಡೆ ತಿರುಗಿಸಿ, '' ನೀನು ಬಹಳ ಕಾಡಿಸುತ್ತಿರುವೆ, ನಾನಿಲ್ಲಿಂದ ಹೊರಟು ಹೋಗುವೆನು '' ಎಂದ

ಅವನು ಎದ್ದು ಹೊರಡುವುದರಲ್ಲಿದ್ದ, ಆಗ ಕಮಲೆ ಅವನ ಕೈಯನ್ನು ಹಿಡಿದುಕೊಂಡು, ವ್ಯಾಕುಲ ಸ್ವರದಿಂದ "ಹೋಗಬೇಡಿ,— ಇನ್ನುಮೇಲೆ ನಾನು ನಿಮ್ಮನ್ನೇನೂ ಕೇಳುವುದಿಲ್ಲ" ಎಂದಳು

ಕಾಶೀನಾಥ ಒಮ್ಮೆ ಕುಳಿತುಕೊಂಡ ಪುನಃ ಮರುಕ್ಷಣವೇ ಅಲ್ಲಿಂದ ಎದ್ದು ಹೊರಟುಹೋದ ಕಮಲೆಯು ಪುನಃ ಅವನನ್ನು ಕುಳಿತುಕೊಳ್ಳೆಂದು ಹೇಳಲಿಲ್ಲ ಪತಿಯು ಈ ರೀತಿ ಹೊರಟು ಹೋದನಲ್ಲಾ ಎಂಬ ವ್ಯಸನ ದಿಂದ ಅವಳು ತಲೆದಿಂಬಿನಲ್ಲಿ ಮುಖವನ್ನಡಗಿಸಿ ಅಳತೊಡಗಿದಳು

ತನ್ನನ್ನು ಯಾರೂ ನೋಡುತ್ತಿಲ್ಲವೆಂದು ತಿಳಿದು, ಕಾಶೀನಾಥ ಮನೆ ಯಿಂದ ಹೊರಬಿದ್ದ. ಬಹಳ ದೂರ ಹೋದ ಬಳಿಕ ಹಿಂತಿರುಗಿ ನೋಡ ಲಾಗಿ, ಸೇವಕನೊಬ್ಬನು ಹಿಂದೆ-ಹಿಂದೆ ಬರುತ್ತಿದ್ದುದು ಕಂಡುಬಂದಿತು. ಕಾಶೀನಾಥನಿಗ ಒಮ್ಮೆಲೇ ಕ್ರೋಧವೂ ಬೇಸರವೂ ಉಂಟಾದುವು ಅವನು ಅಲ್ಲೇ ನಿಂತು "ನೀನೆಲ್ಲಿಗೆ ಹೋಗುತ್ತಿರುವೆ ?" ಎಂದು ಕೇಳಿದ

ಆಳು ನಮಸ್ಕಾರ ಮಾಡಿ "ಯಜಮಾನರೊಡನೆ" ಎಂದ

"ನನ್ನೊಡನೆ ಬರುವ ಆವಶ್ಯಕತೆ ಇಲ್ಲ ನೀನು ಹಿಂತಿರುಗಿ ಹೋಗು"

"ಸಾಯಂಕಾಲದ ವೇಳೆ ಒಬ್ಬರೇ ತಿರುಗಾಡುವಿರಾ ?"

ಏನೂ ಉತ್ತರ ಕೊಡದೆ, ಕಾಶೀನಾಥ ಸುಮ್ಮನೆ ಮುಂದೆ ನಡೆದ. ಪಾಪ, ಊಳಿಗದವನಿಗೆ ಏನೂ ತೋರದಾಯಿತು ಸ್ವಲ್ಪ ಸಮಯ ಸುಮ್ಮನೆ ನಿಂತಿದ್ದು, ಅನಂತರ ಸಂಗಡ ಹೋಗಲೇಬೇಕೆಂದು ನಿರ್ಧರಿಸಿದ ಕಾಶೀನಾಥ ಪುನಃ ಅತ್ತಕಡೆ ವಿಶೇಷ ಗಮನ ಕೊಡಲಿಲ್ಲ ಸ್ವೇಚ್ಛೆಯಿಂದ ನಡೆಯುತ್ತ ಅವನು ತನ್ನ ಸೋದರಮಾವನ ಮನೆಗೆ ಬಂದ ಒಳಕ್ಕೆ ಹೋಗಿ, ಶೂನ್ಯ-ಮನಸ್ಕನಾಗಿ ಅಂಗಳದಲ್ಲಿ ಸುಮ್ಮನೆ ಕುಳಿತುಬಿಟ್ಟ ಬಹಳ ಹೊತ್ತಿನವರೆಗೂ ಹಾಗೆಯೇ ಕುಳಿತಿದ್ದ ಬಳಿಕ ಹರಿ ಬಾಬುವು ತಿರುಗಾಡಲಿಕ್ಕೆಂದು ಹೊರ ಟಾಗ ಅವನು ಕುಳಿತಿದ್ದುದನ್ನು ಕಂಡ ಆದರೆ, ಕತ್ತಲಾಗಿದ್ದುದರಿಂದ ಯಾರೆಂದು ಗುರುತಿಸಲಾಗಲಿಲ್ಲ ಸಮೀಪಕ್ಕೆ ಬಂದು "ಯಾರು ?" ಎಂದು ಕೇಳಿದ

"ನಾನು"

ಹರಿ ಬಾಬುವಿಗೆ ಬಹಳ ಅಚ್ಚರಿಯಾಯಿತು ಅವನು "ಓಃ! ಯುವರಾಜರೋ ? ಅದೇನು ಇತ್ತ ಕಡೆ ?" ಎಂದು ಕೇಳಿದ ಕಾಶೀನಾಥ

ಮೌನ ಹರಿ ಬಾಬು ಅಲ್ಲಿಂದಲೇ ಕೂಗಿಕೊಳ್ಳುತ್ತ ಹೇಳಿದ "ಅಮ್ಮಾ ನೋಡು, ಇಲ್ಲಿ ನೋಡು! ಜಮೀನುದಾರರ ಕುಮಾರ ಸಾಹೇಬರು ಬಂದಿರು ವರು ಕುಳಿತುಕೊಳ್ಳುವುದಕ್ಕೆ ಯಾರೂ ಮಣೆಯನ್ನು ಸಹ ಕೊಡಲಿಲ್ಲವೇ!"

ಹರಿಯ ತಾಯಿ ಒಳಗಿಂದ ಓಡಿ ಬಂದು, "ಓಹೋ, ಸುದಿನ ಬಡ ಸೋದರತ್ತೆಯ ನೆನವಾಯಿತೆ, ಕಾಶೀ?" ಎಂದಳು

ಕಾಶೀನಾಥ ಆಗಲೂ ಸುಮ್ಮನೆಯೇ ಇದ್ದ ಆಗ ಸೋದರತ್ತೆ ತನ್ನ ಮಗಳು ಬಿಂದುವಾಸಿನಿಯನ್ನು ಕರೆದು "ಬಿಂದು, ಬೇಗ ಬಾ ಇದೋ ನೋಡು, ನಿನ್ನ ಕಾಶೀ ಅಣ್ಣ ಬಂದಿದ್ದಾನೆ ಕುಳಿತುಕೊಳ್ಳಲು ಒಂದು ಮಣೆ ತೆಗೆದುಕೊಂಡು ಬಾ ಅಷ್ಟು ಹೊತ್ತಿಗೆ ನಾನು ಸಂಧ್ಯಾ-ಪೂಜೆಯನ್ನು ಮುಗಿಸಿಕೊಂಡು ಬರುವೆನು" ಎಂದಳು

ಬಿಂದುವಾಸಿನಿಯು ಮಧುಸೂದನ ಭಟ್ಟಾಚಾರ್ಯರ ಕೊನೆಯ ಮಗಳು ದೊಡ್ಡ ಸಂಸಾರಸ್ಥರ ಮನೆಯ ಸೊಸೆಯಾದುದರಿಂದ, ಹೆಚ್ಚಾಗಿ ತವರುಮನೆಗೆ ಬರುತ್ತಿರಲಿಲ್ಲ ಅಂದಿಗೆ ಒಂದು ತಿಂಗಳಾಗಿತ್ತು, ಅವಳು ತಾಯಿಯ ಮನೆಗೆ ಬಂದು ಅಷ್ಟಾದರೂ ಇದು ವರೆಗೆ ಅವಳು ಕಾಶೀ ಅಣ್ಣನನ್ನು ನೋಡಲಾಗಿರಲಿಲ್ಲ ಕಾಶೀ ಅಣ್ಣನೆಂದರೆ ಅವಳಿಗೆ ಪ್ರಾಣ ಆದ್ದರಿಂದ ಅವನ ಹೆಸರನ್ನು ಕೇಳಿದೊಡನೆಯೇ ಆತುರದಿಂದ ಓಡಿಬಂದಳು ಸುತ್ತಲೂ ನೋಡಲಾಗಿ ಎಲ್ಲೂ ಯಾರೂ ಇರಲಿಲ್ಲ ಕಗ್ಗತ್ತಲಿನ ಅಂಗಳ ದಲ್ಲಿ ಮಾತ್ರ ಯಾರೋ ಒಬ್ಬ ಬಾಬುಗಳು ಕುಳಿತಿದ್ದರು ಇಂತಹ ಕಾಶೀ ಅಣ್ಣನನ್ನು ಅವಳು ಹಿಂದೆಂದೂ ನೋಡಿರಲಿಲ್ಲ! ಕಾಶೀ ಅಣ್ಣ ಈಗ ಸಾಹು ಕಾರರ ಮನೆಯಳಿಯನಾಗಿಬಿಟ್ಟಿದ್ದಾನೆ, ದೊಡ್ಡ ಬಾಬು ಆಗಿಹೋಗಿದ್ದಾನೆ

ಅವಳಿಗೆ ಬಹಳ ನಗೆ ಬಂದಿತು ಆದರೆ ಹತ್ತಿರ ಹೋಗಿ, ಮುಸುಕಿನಲ್ಲಿ ಅವನ ಸಪ್ಪೆ ಮೋರೆ ನೋಡಿದೊಡನೆಯೇ ಅವಳ ನಗೆ ಎಲ್ಲೋ ಮಾಯ ವಾಯಿತು ಕಾಶೀನಾಥನ ಈ ಪರಿಯ ಪೆಚ್ಚು ಮೋರೆಯನ್ನು ಯಾರೂ ಎಂದೂ ನೋಡಿರಲಿಲ್ಲ, ಅದರಲ್ಲೂ ಬಿಂದುವಂತೂ ನೋಡಿಯೇ ಇರಲಿಲ್ಲ ಅವಳು ಕಾಶಿಯ ಸಮೀಪಕ್ಕೆ ಬಂದು, ಸ್ನೇಹದಿಂದ ಅವನ ಬೆನ್ನ ಮೇಲೆ ಕೈಯಾಡಿಸುತ್ತ "ಕಾಶೀ ಅಣ್ಣ! ಇಲ್ಲಿ ಒಬ್ಬನೇ ಏಕೆ ಕುಳಿತಿರುವೆ? ನಡೆ, ಒಳಗೆ ಕುಳಿತುಕೋ, ಏಳು" ಎಂದಳು ಮಾತನಾಡದೆ ಎದ್ದು ಒಳಕ್ಕೆ ಹೋಗಿ, ಕಾಶೀನಾಥ ಮಂಚದ ಮೇಲೆ ಕುಳಿತುಕೊಂಡ.

" ಅಣ್ಣ ! ನಾನು ಇಲ್ಲಿಗೆ ಬಂದು ಎಷ್ಟು ದಿನಗಳಾದವು, ಒಮ್ಮೆ ನೋಡಿಕೊಂಡು ಹೋಗಲು ಸಹ ನೀನು ಬರಲಿಲ್ಲ " ಎಂದಳು ಬಿಂದು

" ಬರುವುದಕ್ಕೆ ಆಗಲಿಲ್ಲ ತಂಗೀ "

" ಏಕೆ ? ಏಕೆ ಬರಲಾಗಲಿಲ್ಲ ? "

ಕಾಶೀನಾಥ ಸ್ವಲ್ಪ ಹಿಂದು ಮುಂದು ನೋಡಿ "ಬರಗೊಡುವುದಿಲ್ಲ" ಎಂದ

" ಬರಗೊಡುವುದಿಲ್ಲವೇ ? ಏಕೆ ? "

ಕಾಶೀನಾಥ ತುಸು ಅನ್ಯಮನಸ್ಕನಾಗಿ ಉತ್ತರ ಕೊಟ್ಟ– " ಏನೊ, ಹೀಗೆಯೆ ! "

ಬಿಂದುವು ಖೇದಗೊಂಡು " ನೀನು ಎಲ್ಲಿಗೆ ಹೋಗಬೇಕೆಂದರೆ ಅಲ್ಲಿಗೆ ಹೋಗಗೊಡುವುದಿಲ್ಲವೇ ? " ಎಂದು ಕೇಳಿದಳು

" ಇಲ್ಲ, ಹೋಗಗೊಡುವುದಿಲ್ಲ ನಾನು ಎಲ್ಲಿಗಾದರೂ ಹೋಗುವುದರಿಂದ ಮಾವನವರ ಅಪಮಾನವಾಗುವದಂತೆ ! "

ಈ ವಿಷಯವಾಗಿ ಒತ್ತಿ ಒತ್ತಿ ಕೇಳುವುದರಿಂದ ಅಣ್ಣನ ಮನಸ್ಸಿಗೆ ನೋವಾಗುವದೆಂದರಿತು ಬಿಂದುವು ಮಾತನ್ನು ಹೊರಳಿಸಿದಳು. " ಅಣ್ಣ ! ನಿನ್ನ ಹೆಂಡತಿಯನ್ನು ನನಗೆ ತೋರಿಸಲೇ ಇಲ್ಲ ? " ಎಂದಳು

ಕಾಶೀನಾಥ ಸುಮ್ಮನೆ ಇದ್ದ

" ನಿನ್ನ ಹೆಂಡತಿ ಹೇಗಿರುವಳು ? " ಎಂದಳು ಬಿಂದು

" ಚೆನ್ನಾಗಿದ್ದಾಳೆ "

" ಹಾಗಿದ್ದರೆ ಒಂದು ದಿವಸ ನಾನು ಹೋಗಿ ನೋಡಿಕೊಂಡು ಬರಲೆ ?"

ಕಾಶೀನಾಥ ತಲೆಯೆತ್ತಿ ಬಿಂದುವಿನ ಮುಖದಕಡೆ ನೋಡಿದ ಅನಂತರ ನಗುತ್ತ ನುಡಿದ— " ಹಾಗಯೇ ಆಗಲಿ, ಬಾ "

ಅಷ್ಟರಲ್ಲಿ ಹೊರಗೆ ಗಾಡಿಯ ಶಬ್ದ ಕೇಳಬಂದಿತು " ಓಹೋ ! ನಿನ್ನ ಗಾಡಿ ಬಂದುಬಿಟ್ಟಂತೆ ಕಾಣುತ್ತದೆ ! " ಎಂದಳು ಬಿಂದು

" ಹೌದು, ಹಾಗೆಯೇ ಇರಬೇಕು "

ಕಾಶೀನಾಥ ಹೊರಡಲನುವಾಗುತ್ತ "ಬಿಂದು, ಯಾವಾಗ ಬರುವೆ ?" ಎಂದು ಕೇಳಿದ.

" ಎಲ್ಲಿಗೆ ? "

" ಅತ್ತಿಗೆಯನ್ನು ನೋಡುವುದಕ್ಕೆ "

ಬಿಂದು ಮುಗುಳುನಗೆ ನಗುತ್ತ “ ನಿನಗೆ ಯಾವಾಗ ಬಿಡುವಾಗುವುದೋ, ಆಗ ಬಂದು ಕರೆದುಕೊಂಡು ಹೋಗು,'' ಎಂದಳು

“ನಾಳೆ ಬರಲೇ ? ''

“ ಅಗತ್ಯವಾಗಿ ಬಾ ”

ಮರುದಿನ ಕಾಶೀನಾಥ ಗಾಡಿ ತೆಗೆದುಕೊಂಡು ಬಂದ ಬಿಂದು ಹೊರಡುವ ಸಮಯಕ್ಕೆ ಸರಿಯಾಗಿ ಎಲ್ಲಿಂದಲೋ ಹರಿ ಬಾಬು ಬಂದುಬಿಟ್ಟ ಬರುವಾಗ ಅವನು ಹೊರಗೆ ಗಾಡಿ ನಿಂತಿದ್ದುದನ್ನು ನೋಡಿದ್ದ ಕಾಶೀನಾಥ ಬಂದಿರಬಹುದೆಂದು ಊಹಿಸಿಯೂ ಇದ್ದ ಒಳಕ್ಕೆ ಬಂದೊಡನೆಯೇ ಅವನು ತಾಯಿಯನ್ನುಕರೆದು “ಅಮ್ಮಾ! ಬಿಂದು ಹೊರಟಿರುವುದು ಎಲ್ಲಿಗೆ?'' ಎಂದು ಕೇಳಿದ

“ ಅತ್ತಿಗೆಯನ್ನು ಒಮ್ಮೆ ನೋಡಿಕೊಂಡು ಬರುವುದಕ್ಕೆ ''

“ಯಾವ ಅತ್ತಿಗೆಯನ್ನು ? ಜಮೀನುದಾರರ ಮಗಳನ್ನೇ ?''

ತಾಯಿ ಏನೂ ಉತ್ತರ ಕೊಡಲಿಲ್ಲ

ಹರಿ ಬಾಬು ಅತ್ಯಂತ ಗಂಭೀರ ಮುಖಮುದ್ರೆಯಿಂದ “ ಬಿಂದು ಅಲ್ಲಿಗೆ ಹೋದಳಾದರೆ, ಜೀವವಿರುವವರೆಗೂ ನಾನು ಅವಳ ಮುಖಾವ-ಲೋಕನ ಮಾಡುವುದಿಲ್ಲ ! ” ಎಂದ

ತಾಯಿ ಆಶ್ಚರ್ಯಚಕಿತಳಾಗಿ “ ಅಣ್ಣನ ಹೆಂಡತಿಯನ್ನು ನೋಡಲು ಹೋದರೆ ಅದರಲ್ಲಿ ತಪ್ಪೇನೋ, ಹರಿ ? '' ಎಂದಳು

“ ತಪ್ಪು-ನಪ್ಪನ್ನು ಚರ್ಚಿಸಲು ಈಗ ನನಗ ಸಮಯವಿಲ್ಲ ಬಿಂದು ನನ್ನ ಮಾತನ್ನು ಕೇಳದೆ ಹೋದರೆ, ಅವಳು ಈ ಮನಗೇ ಕಾಲಿಡಲಾಗದು, ಜೋಕೆ ! ”

ಹರಿ ಅಣ್ಣ ಎಂತಹ ಸ್ವಭಾವದವನು ಎಂಬುದು ಬಿಂದುವಿಗೆ ತಿಳಿಯದ ಮಾತಾಗಿರಲಿಲ್ಲ ಆದ್ದರಿಂದ ಅವಳು ಮರುಮಾತಾಡದೆ ಅಲಂಕಾರಗಳೆಲ್ಲವನ್ನೂ ಬಿಚ್ಚಿಟ್ಟಳು ಕಾಶೀನಾಥ ನಿಂತು ನಿಂತು ಎಲ್ಲವನ್ನೂ ನೋಡುತ್ತಿದ್ದ ಅನಂತರ ಪೆಚ್ಚು ಮೋರೆ ಹಾಕಿಕೂಂಡು ಗಾಡಿಯಲ್ಲಿ ಬಂದು ಕುಳಿತ

ಸಾಯಂಕಾಲ ಕಮಲೆ ಅವನ ಬಳಿ ಬಂದು “ ಏಕೆ ? ಅತ್ತಿಗೆಯವರು ಬರಲಿಲ್ಲವೇ ? ”

ಕಾಶೀನಾಥ ದೀನಸ್ವರದಿಂದ “ ಇಲ್ಲ, ಅವರು ಕಳಿಸಲಿಲ್ಲ ! ''

" ಏಕೆ ? "

" ಗೊತ್ತಿಲ್ಲ ಇಲ್ಲಿಗೆ ಕಳುಹಲು ಅವರಿಗೆ ನಾಚಿಕೆಯೋ ಏನೋ ! "

ಈ ಮಾತು ಕಮಲೆಯ ಹೃದಯದಲ್ಲಿ ನಾಟಿತು

೪

ಕಮಲೆಯು ಜಮೀನುದಾರ ಪ್ರಿಯ ಬಾಬುಗಳ ಒಬ್ಬಳೇ ಮಗಳು ಪ್ರಿಯ ಬಾಬುಗಳು ಮೊದಲು ಎರಡು ವಿವಾಹ ಮಾಡಿಕೊಂಡಿದ್ದರು ಆದರೆ ಅವರಲ್ಲಿ ಒಬ್ಬರಿಗೂ ಸಂತಾನವಾಗಲಿಲ್ಲ ಅವರಿಬ್ಬರೂ ಕಾಲವಾದನಂತರ ಬಹಳ ಮನೋವ್ಯಥೆಯಿಂದ, ವೃದ್ಧಾಪ್ಯದಲ್ಲಿ ಪ್ರಿಯ ಬಾಬುಗಳು ಮೂರ-ನೆಯ ವಿವಾಹ ಮಾಡಿಕೊಂಡರು ತತ್ಫಲವಾಗಿ ಈ ಕನ್ಯಾ-ರತ್ನ ಜನನವಾಯಿತು ಸಂತಾನ ವಿಹೀನರಿಗೆ ಸಂತಾನ ಪ್ರಾಪ್ತಿಯಾದರೆ, ಹೆಣ್ಣು-ಗಂಡೆಂಬ ಭೇದವಿರುವುದಿಲ್ಲ ಅಂತೆಯೇ ಕಮಲೆಯೂ ಮನೆಯಲ್ಲಿ ಯಜ-ಮಾನಿಗೂ ಯಜಮಾನಿಯಾಗಿ ಬೆಳೆದಳು ಅವಳ ಮಾತನ್ನು ಮೀರುವಷ್ಟು ಅಥವಾ ಅವಳ ಇಚ್ಛೆಗೆ ವಿರುದ್ಧವಾಗಿ ಹೋಗುವಷ್ಟು ಸಾಹಸ ಯಾರಿಗೂ ಇರಲಿಲ್ಲ ಕಮಲೆ ಧನವತಿ, ವಿದ್ಯಾವತಿ, ರೂಪವತಿ, ಗುಣವತಿಯೂ ಅಹುದು ಎಲ್ಲ ವಿಷಯದಲ್ಲೂ ಅವಳ ಏಕಾಧಿಪತ್ಯವಿದೆ ಆದರೆ ಒಬ್ಬ ಮನುಷ್ಯನನ್ನು ಮಾತ್ರ ಅವಳು ಯಾವ ರೀತಿಯಿಂದಲೂ—ಎಷ್ಟೇ ಪ್ರಯತ್ನಪಟ್ಟರೂ—ವಶ ಮಾಡಿಕೊಳ್ಳಲಾಗಲಿಲ್ಲ ಕಮಲೆ ಅನೇಕ ಉಪಾಯಗಳನ್ನು ಮಾಡಿ ನೋಡಿದಳು— ಕೋಪಿಸಿ ನೋಡಿದಳು, ದುಃಖಿಸಿ ನೋಡಿದಳು, ಚಂಡಿತನ ತೋರಿಸಿ ನೋಡಿದಳು, ಸೇವೆ ಶುಶ್ರೂಷೆ ಮಾಡಿ ನೋಡಿದಳು, ಆದರೆ ಯಾವ ವಿಧ-ದಿಂದಲೂ ಅವಳು ತನ್ನ ಪತಿಯ ಮನಸ್ಸನ್ನು ವಶಮಾಡಿಕೊಳ್ಳಲಾರದೆ ಹೋದಳು ವಶಮಾಡಿಕೊಳ್ಳುವ ಮಾತು ಹಾಗಿರಲಿ, ಮನಸ್ಸನ್ನು ಸಮೀಪಿಸುವುದು ಸಹ ಅವಳಿಂದ ಸಾಧ್ಯವಾಗಲಿಲ್ಲ ಓರ್ವ ದರಿದ್ರ ಮನುಷ್ಯನು ಎಂತಹ ಉಚ್ಚ ಮನವನ್ನೊಳಗೊಂಡು ತನ್ನ ಪತಿಯಾಗಿ ಬಂದಿರುವನು ?— ಈ ಮಾತನ್ನು ಅವಳು ಎಷ್ಟೇ ಯೋಚಿಸಿದರೂ ಬಗೆಹರಿಯದೆ ಹೋಯಿತು ಪ್ರತಿನಿತ್ಯ— ಎರಡೂ ವೇಳೆ— ಅವಳು " ಹೇ ಭಗವಂತ! ಅವರ ಹೃದಯ

ನನ್ನನ್ನು ಒಲಿಯುವಂತೆ ಮಾಡು" ಎಂದು ಪ್ರಾರ್ಥಿಸುತ್ತಿದ್ದಳು ಒಮ್ಮೊಮ್ಮೆ ಅವಳು ಮನಸಿನಲ್ಲೇ "ಬಹುಶಃ ಅವರಿಗೆ ಹೃದಯವೇ ಇರಲಾರದು, ಆದ್ದರಿಂದಲೇ ಅದು ನನ್ನಕಡೆ ಒಲಿದಿಲ್ಲ," ಎಂದುಕೊಳ್ಳುತ್ತಿದ್ದುದೂ ಉಂಟು. ಕಮಲೆಗೆ ತನ್ನ ಗಂಡನೆಂದರೆ ಒಂದು ದೊಡ್ಡ ಒಗಟು ದಿನ ಕಳೆದಂತೆಲ್ಲ ಆ ತೊಡಕನ್ನು ಬಿಡಿಸುವ ಮಾರ್ಗ ಸಿಗುವುದಂತಿರಲಿ—ಅದರ ಜಟಿಲತೆ ಹೆಚ್ಚುತ್ತಲೇ ಬಂದಿತು ಒಂದೊಂದು ಸಲ ಅವಳು ಮನಸಿನಲ್ಲಿ "ಪತಿಯ ಇಂಥ ಅತಿಶಯ ಪ್ರೇಮವು ಮತ್ತಾವ ಸ್ತ್ರೀಗೂ ದೊರಕಿರಲಾರದು," ಎಂದುಕೊಳ್ಳುವಳು ಆದರೆ ಮರುಕ್ಷಣವೇ "ಆಹಾ! ಇಂತಹ ಭಯಂಕರ ಉಪೇಕ್ಷೆಯನ್ನು ಯಾವ ಸ್ತ್ರೀಯೂ ಅನುಭವಿಸಿರಲಾರಳು," ಎನಿಸುತಿತ್ತು ಅವಳಿಗೆ ಹೀಗೆಯೇ ಕಮಲೆಯ ಎಷ್ಟೋ ದಿನಗಳು ಕಳೆದುವು ಆದರೆ ಕಾಶೀನಾಥನಿಗೆ ದಿನಗಳೆಯುವುದೇ ಕಷ್ಟವಾಗಿತ್ತು ಪುಸ್ತಕಗಳನ್ನೋದುವುದಕ್ಕೂ ಮನಸಾಗುತ್ತಿರಲಿಲ್ಲ, ಸುಮ್ಮನೆ ಕುಳಿತಿದ್ದರೂ ಆನಂದವಿಲ್ಲ, ಮಾತು-ಕತೆ, ನಗೆಯಾಟದಲ್ಲಿಯೂ ಅಭಿರುಚಿಯಿಲ್ಲ! ಅವನ ಹೃಷ್ಟಪುಷ್ಟ ಶರೀರವು ಕೃಶವಾಗ ತೊಡಗಿತು ಗೌರವರ್ಣವು ಶ್ಯಾಮವರ್ಣಕ್ಕೆ ತಿರುಗಿತು ದಿನ-ದಿನಕ್ಕೂ ಗಂಡನು ಹೀಗೆ ಸೊರಗುತ್ತಿರುವುದನ್ನು ಕಂಡು, ಕಮಲೆಗೆ ಬಹಳ ಚಿಂತೆಗಿಟ್ಟುಕೊಂಡಿತು ಈ ಸಂಬಂದವಾಗಿ ಪತಿಯನ್ನು ಪುನಃ ಪ್ರಶ್ನಿಸುವುದಿಲ್ಲವೆಂದು ಮೊದಲು ಅವಳು ಪ್ರತಿಜ್ಞೆಮಾಡಿದ್ದಳು, ಆದರೆ ಅದನ್ನು ಪಾಲಿಸಲಾಗಲಿಲ್ಲ ಗಂಡನು ಬಂದೊಡನೆಯೇ ಅವನ ಕಾಲುಗಳ ಮೇಲೆ ತನ್ನ ತಲೆಯನ್ನಿಟ್ಟು, ಅಳತೊಡಗಿದಳು ಕಾಶೀನಾಥ ಗಾಬರಿಗೊಂಡು ಅವಳನ್ನು ಮೇಲಕ್ಕೆತ್ತಲು ಪ್ರಯತ್ನಿಸಿದ, ಆದರೆ ಅವನಿಂದ ಎತ್ತಲಾಗಲಿಲ್ಲ

"ಏಕೆ? ಏನಾಯಿತು? ಏಕೆ ಅಳುತ್ತಿರುವೆ?"

ಏನೂ ಉತ್ತರವಿಲ್ಲ ಬಹಳ ಹೊತ್ತಿನವರೆಗೆ ಅಳುತ್ತಲೇ ಇದ್ದು, ಅವಳು ಪುನಃ ಅವನ ಕಾಲುಗಳ ಮೇಲೆ ತಲೆಯಿರಿಸಿ "ಈ ರೀತಿ ನನ್ನನ್ನು ಸ್ವಲ್ಪ ಸ್ವಲ್ಪವೇ ಪ್ರಾಣ ಹಿಂಡುವಿರೇಕೆ? ಒಟ್ಟಿಗೆ ಒಂದೇ ಸಲ ಪ್ರಾಣ ತೆಗೆದುಬಿಡಬಾರದೇ?" ಎಂದಳು

ಕಾಶೀನಾಥನಿಗೆ ಮಿತಿಮೀರಿದ ಆಶ್ಚರ್ಯವುಂಟಾಯಿತು ಅವನು "ವಿಷಯವೇನು, ಹೇಳಬಾರದೇ? ನಾನೇನು ಮಾಡಿದೆ?" ಎಂದು ಕೇಳಿದ.

"ಏನು ಮಾಡಿದಿರೆಂಬುದು ನಿಮಗೆ ಗೊತ್ತಿಲ್ಲವೇ?"

" ನನಗೇನೂ ಗೊತ್ತಿಲ್ಲವಲ್ಲಾ ? "

"ನಿಮ್ಮ ಮನಸ್ಸಿಗೆ ಬಂದುದನ್ನೆಲ್ಲಾ ಮಾಡಿ, ನಾನು ಬೇಡೆನ್ನುವುದಿಲ್ಲ. ಆದರೆ ನನಗೆ ನಿಲ್ಲುವುದಕ್ಕೆ ಸ್ವಲ್ಪ ಸ್ಥಾನಮಾತ್ರ ಕೊಡಿರಿ, ಮತ್ತೇನೂ ಬೇಡ "

ಈ ಸಲ ಕಾಶೀನಾಥ ಕಮಲೆಯನ್ನು ಕೈಹಿಡಿದೆತ್ತಿ ಪಕ್ಕದಲ್ಲಿ ಕುಳ್ಳಿರಿಸಿಕೊಂಡು ಪ್ರೇಮದಿಂದ ಕೇಳಿದ— " ಏಕೆ ? ಏನಾಗಿದೆ, ಸ್ಪಷ್ಟವಾಗಿ ತಿಳಿಸು "

" ನೀವು ದಿನದಿನಕ್ಕೂ ಹೀಗೆ ಕೃಶರಾಗುತ್ತಿರುವಿರೇಕೆ ? "

" ಏನು ? ನನ್ನ ಶರೀರವು ಬಹಳ ಕೃಶವಾಗುತ್ತಿದೆಯೇ ? "

ಕಮಲೆ ಸೀರೆಯ ಸೆರಗಿನಿಂದ ಕಣ್ಣೊರೆಸಿಕೊಳ್ಳುತ್ತ ಅಳುತ್ತಿದ್ದಳು. ಹಾಗೆಯೇ ಅವಳು "ಹೌದು ಬಹಳ ದುರ್ಬಲರಾಗುತ್ತಿರುವಿರಿ" ಎಂದಳು.

" ಈ ವಿಷಯ ನನಗೂ ಗೊತ್ತು ಆದರೆ ನಾನೇನು ಮಾಡಲಿ, ನೀನೇ ಹೇಳು "

ಕಮಲೆ ಮುಖವನ್ನು ಮೇಲಕ್ಕೆತ್ತಿ " ಔಷಧಿ ತೆಗೆದುಕೊಳ್ಳಿ ! "

ಅವನು ನಗುತ್ತ "ಔಷಧಿಯಿಂದ ಗುಣವಾಗುವದಿಲ್ಲ" ಎಂದ.

" ಹಾಗಿದ್ದರೆ ಮತ್ತೇತರಿಂದಾಗುವುದು ? "

"ಅವನ್ನು ನಾನರಿಯೆ "

" ಔಷಧಿಯಿಂದ ಗುಣವಾಗುವುದಿಲ್ಲ, ಮತ್ತೇತರಿಂದ ಗುಣವಾಗುವುದು— ಗೊತ್ತಿಲ್ಲ ಹಾಗಿದ್ದರೆ ನನ್ನ ಭಾಗ್ಯವನ್ನೇ ಮಣ್ಣುಗೂಡಿಸುವಿರಾ?"

ಕಾಶೀನಾಥ ಸಂಸ್ಕೃತ ಪಾಠಶಾಲೆಯಲ್ಲಿ ಅಧ್ಯಯನ ಮಾಡಿದ, ಸರಳ ಸ್ವಭಾವದ ಮನುಷ್ಯ ಪ್ರೇಮ-ಪ್ರೀತಿಯ ರೀತಿ ನೀತಿಯೊಂದೂ ಅವನಿಗೆ ತಿಳಿಯದು ಪ್ರಣಯ ಸಂಭಾಷಣೆಯೂ ಅವನಿಗೆ ಬರದು ಆದರೂ ಅವನು ಸ್ವಾಭಾವಿಕ ಸ್ನೇಹದಿಂದ ತನ್ಮಯನಾಗಿ, ಕಮಲೆಯ ಕೈ ಹಿಡಿದುಕೊಂಡು, ಕಣ್ಣುಗಳನ್ನೊರೆಸುತ್ತ ಹೇಳಿದ— " ಇಲ್ಲಿ ನನಗೆ ಸುಖವಿಲ್ಲ ಬಹುಶಃ ಆ ಕಾರಣದಿಂದ ಹೀಗಾಗುತ್ತಿರುವೆನೋ ಏನೋ ! "

" ಹಾಗಿದ್ದರೆ ಇಲ್ಲೇಕಿರುವಿರಿ ? "

" ಇಲ್ಲಿರದೆ ಮತ್ತೆಲ್ಲಿಗೆ ಹೋಗಲಿ ? "

" ಈ ಒಂದು ಸ್ಥಳದ ವಿನಾ ಮತ್ತೆಲ್ಲೂ ಸ್ಥಳವೇ ಇಲ್ಲವೇ? ಎಲ್ಲಿ ನಿಮಗೆ ಆನಂದ ದೊರಕುವುದೋ, ಅಲ್ಲಿ ಹೋಗಿ ಇದ್ದು ಬಿಡಿ. "

" ಅದು ಆಗುವುದಿಲ್ಲ "

" ಏಕೆ? "

" ನಾನು ಇಲ್ಲಿರದಿದ್ದರೆ ಮಾವನವರ ಮನಸ್ಸಿಗೆ ವ್ಯಸನವೆನಿಸುವುದಿಲ್ಲವೇ? "

" ಈ ರೀತಿ ಕಂದಿ ಕೃಶರಾಗುತ್ತಿದ್ದರೆ ಮಾತ್ರ ಅವರ ಮನಸ್ಸಿಗೆ ಸಂತೋಷವೆನಿಸುವುದೇ! "

" ಇಲ್ಲ ಆದರೆ ಇದಕ್ಕುಪಾಯವಾದರೂ ಏನು? ನಾನು ಬಡವನೆಂಬುದನ್ನು ತಿಳಿದು ನಿಮ್ಮ ತಂದೆಯವರು "

ಕಮಲೆ ಅಷ್ಟರಲ್ಲಿ ತನ್ನ ಕೈಯಿಂದ ಅವನ ಬಾಯನ್ನು ಮುಚ್ಚಿ, ಅವನು ಹೇಳಬೇಕೆಂದಿದ್ದುದನ್ನು ಅಷ್ಟಕ್ಕೇ ತಡೆದಳು ಅನಂತರ " ರಾಮ ರಾಮ! ಇಂತಹ ಮಾತನ್ನಾಡಬೇಡಿ ನನ್ನೊಡನೆ ಎಲ್ಲ ಸಂಗತಿಯನ್ನೂ ಬಿಚ್ಚಿ ತಿಳಿಸಿ, ನಾನು ಅದಕ್ಕೆ ತಕ್ಕ ಉಪಾಯ ಹುಡುಕುವೆನು" ಎಂದಳು.

ಕಾಶೀನಾಥ ತುಸು ಯೋಚಿಸಿ, ನಂತರ " ಎಲ್ಲ ಮಾತನ್ನೂ ನಿನ್ನೊಡನೆ ಬಿಚ್ಚಿ ಹೇಳಲು ಸಾಧ್ಯವಿಲ್ಲ " ಎಂದು ಮತ್ತೆ ಸ್ವಲ್ಪ ಹೊತ್ತು ಸುಮ್ಮನಿದ್ದು ಪುನಃ ಎಂದ— " ಇದೆಲ್ಲವನ್ನೂ ನೋಡಿದರೆ ಒಮ್ಮೊಮ್ಮೆ ನನ್ನೊಡನೆ ನಿನ್ನ ವಿವಾಹವಾಗಿರದಿದ್ದರೆ ಚೆನ್ನಾಗಿತ್ತು— ಎಂದೆನಿಸುತ್ತದೆ! "

" ಏಕೆ? "

" ನೀನೇ ಹೇಳು, ನನ್ನನ್ನು ಹೊಂದಿ ನೀನು ಒಂದು ದಿವಸವಾದರೂ ಸುಖಪಟ್ಟೆಯಾ? ನನಗೆ ಪ್ರೇಮದ ರೀತಿ-ನೀತಿಗಳು ಗೊತ್ತಿಲ್ಲ, ಆದರ-ಪ್ರೀತಿಗಳನ್ನು ನಾನರಿಯೆ, ವಾಸ್ತವವಾಗಿಯೂ ನೋಡಿದರೆ ಏನನ್ನೂ ಅರಿಯೆ. ಈ ವಯಸ್ಸಿನಲ್ಲಿ ನಿನಗೆಷ್ಟು ಆಶೆ-ಆಕಾಂಕ್ಷಗಳಿರುವುವೋ? ಅವುಗಳಲ್ಲಿ ಒಂದನ್ನಾದರೂ ನಾನು ಪೂರಯಿಸಿರುವೆನೇ, ಹೇಳು! ನಾನು ನಿನ್ನ ಪತಿಯಂತಿಲ್ಲ, ಪತಿಯ ಛಾಯೆಯಂತಿರುವೆನು. "

ಕಮಲೆಯ ಕಣ್ಣಾಲೆಗಳು ನೀರಿನಲ್ಲಿ ತೇಲತೊಡಗಿದುವು ಅವನ ಎಷ್ಟೋ ಮಾತುಗಳ ಅರ್ಥ ಕೂಡ ಅವಳಿಗೆ ಆಗಲಿಲ್ಲ ಅದೆಷ್ಟೋ ದಿವಸಗಳಿಂದ, ಒಂದು ಮಾತು ಅವಳ ಹೃದಯದಿಂದ ಹೊರಬರಲು ಚಡಪಡಿಸುತ್ತಿತ್ತು ಅದು ಗಾಳಿಯಿಲ್ಲದ ಕೊಠಡಿಯೊಂದರಲ್ಲಿ ಬಲಾತ್ಕಾರವಾಗಿ ಬಂಧಿಸಿರಿಸಲ್ಪಟ್ಟಂತಿತ್ತು! ಆದರೆ ಈಗ ಅದು ಅತಿ ಪ್ರಯತ್ನದಿಂದ ಹೊರಬಿತ್ತು.

ಕಮಲೆಯು ಕಂಪಿತ ಧ್ವನಿಯಿಂದ ಕೇಳಿದಳು— “ ಅದೇಕೆ ? ನೀವು ನನ್ನನ್ನು ನೋಡಲಾರಿರಾ ? ”

“ ಈ ವಿಷಯವನ್ನು ಮತ್ತೆ ಯಾವಾಗಲಾದರೂ ತಿಳಿಸುವೆನು ”

“ ಇಲ್ಲ, ಈಗಲೇ ಹೇಳಬೇಕು ನನ್ನನ್ನು ಮದುವೆ ಮಾಡಿಕೊಂಡು ನೀವು ಸುಖಿಯಾಗಲಿಲ್ಲವೇ ? ”

“ ಹೇಗೆ ಹೇಳಲಿ ? ಬಹುಶಃ ಇಲ್ಲ ”

“ ಬೇರೆ ಯಾರನ್ನಾದರೂ ಮದುವೆ ಮಾಡಿಕೊಂಡಿದ್ದರೆ ಸುಖದಿಂದ ಇರುತ್ತಿದ್ದಿರಾ ? ”

“ ಅದನ್ನೂ ಸರಿಯಾಗಿ ಹೇಳಲಾರೆ ! ”

ಈ ಮಾತನ್ನು ಕೇಳಿ ಕಮಲೆಯ ಶರೀರವೆಲ್ಲ ಉರಿಯತೊಡಗಿತು. ಅಷ್ಟರೊಳಗೆ ಹೊರಗಿನಿಂದ ಕೆಲಸದವಳು ಬಂದು “ ಅಮ್ಮಾವರಿಗೆ ಬಹಳ ಜ್ವರ ಬಂದುಬಿಟ್ಟಿದೆ ಅವರು ನಿಮ್ಮನ್ನು ಕರೆಯುತ್ತಿರುವರು ” ಎಂದಳು.

ಕಮಲೆ ಕಣ್ಣೊರೆಸಿಕೊಳ್ಳುತ್ತ ಅಲ್ಲಿಂದ ಹೊರಟು ಹೋದಳು

೫

ಕಮಲೆಯ ತಾಯಿಯ ಜ್ವರ ಗುಣಮುಖವಾಗಲೇ ಇಲ್ಲ ಹದಿನೈದು ದಿವಸ ಬಹಳ ಕಷ್ಟವನ್ನನುಭವಿಸಿ, ಕಡೆಗೆ ಎಲ್ಲರನ್ನೂ ಅಳುವಂತೆ ಮಾಡಿ ಅವಳು ಈ ಲೋಕವನ್ನು ಬಿಟ್ಟು ತೆರಳಿದಳು ಪತ್ನೀಶೋಕದಿಂದ ಪ್ರಿಯ ಬಾಬುಗಳ ಹೃದಯಕ್ಕೆ ಬಲವಾದ ಆಘಾತವುಂಟಾಯಿತು ಈ ವೃದ್ಧಾಪ್ಯ ದಲ್ಲಿ ತಾನೂ ಇನ್ನು ಹೆಚ್ಚು ದಿವಸ ಈ ಲೋಕದಲ್ಲಿರುವುದಿಲ್ಲವೆಂದು ಅವರು ತಿಳಿದುಕೊಂಡರು ಈಗ ಎಲ್ಲಾ ಕೆಲಸ ಕಾರ್ಯದ ಭಾರವೂ ಕಮಲೆಯ ಮೇಲೆಯೆ ಪ್ರಪಂಚದಲ್ಲಿ ಮನುಷ್ಯನು ಕೇವಲ ತನ್ನ ಸುಖವೊಂದನ್ನೇ ಯೋಚಿಸಿದರೆ ಸಾಲದು, ಇನ್ನೂ ಅನೇಕ ಕೆಲಸಗಳನ್ನು ಮಾಡಬೇಕಾಗು ವುದು. ಕ್ರಮ ಕ್ರಮೇಣ ಪ್ರಿಯ ಬಾಬುಗಳು ಹೆಚ್ಚು ಅಶಕ್ತರಾಗುತ್ತ ಬಂದರು, ಆದ್ದರಿಂದ ಕಮಲೆ ಇತ್ತೀಚೆಗೆ ಸರ್ವದಾ ಅವರ ಬಳಿಯಲ್ಲೇ ಇರುತ್ತಿದ್ದಳು. ಕಾಶೀನಾಥನೋ ? ಏನೇ ಆಗಲಿ, ಇದೇ ಸಮಯವೆಂದು

ತಿಳಿದು ತನ್ನ ಪುಸ್ತಕಗಳ ಗಂಟನ್ನು ತೆಗೆದುಕೊಂಡು, ಬಾಗಿಲನ್ನು ಭದ್ರ ವಾಗಿ ಮುಚ್ಚಿ, ಅಧ್ಯಯನ ಮಾಡಲು ಕುಳಿತ ಓದಿ ಓದಿ ಬೇಸರವೆನಿಸಿ ದರೆ, ಹೊರಗ ಗಾಳಿ ತಿನ್ನಲು ಹೋಗಿ ಬರುತ್ತಿದ್ದ ಒಂದೊಂದು ಸಲ ಎರ ಡೆರಡು— ಮೂರು ಮೂರು— ದಿವಸ ಮನೆಗೇ ಬರುತ್ತಿರಲಿಲ್ಲ ಎಲ್ಲಿ ಊಟ ಮಾಡುವನು, ಎಲ್ಲಿ ಮಲಗುವನು— ಎಂಬುದೇ ಯಾರಿಗೂ ಗೊತ್ತಾಗುತ್ತಿರ ಲಿಲ್ಲ ಇದೆಲ್ಲವನ್ನೂ ನೋಡಿ ಕಮಲೆ ಒಂದು ವಿಧದಲ್ಲಿ ಹತಾಶಳಾದಳು ಯುವತಿಯಾಗಿದ್ದರೂ ಅವಳಿನ್ನೂ ಬಾಲಿಕೆಯೇ ಪತಿ-ಪ್ರೇಮ, ಪತಿ-ಭಕ್ತಿ ಇವೆಲ್ಲವನ್ನೂ ಅವಳು ಪೂರ್ತಿಯಾಗಿ ಕಲಿತು ಕೂಡ ಇರಲಿಲ್ಲ. ಆಗ ತಾನೇ ಕಲಿಯಲು ಆರಂಭಿಸಿದ್ದಳು, ಅದಕ್ಕೂ ವಿಘ್ನ ಬಂದೊದಗಿತು, ಅದೂ ಪತಿ ಯಿಂದಲೇ! ಇದರಲ್ಲಿ ಅವಳ ದೋಷವಾದರೂ ಏನು? ಪಾಪ! ಕಲಿತಿದ್ದ ಅಲ್ಪ-ಸ್ವಲ್ಪವನ್ನೂ ಮೆಲ್ಲ-ಮೆಲ್ಲನೆ ಮರೆಯಲಾರಂಭಿಸಿದಳು ಇದುವರೆಗೆ ಅವಳ ಹೃದಯವೆಂಬ ಒರೆಗಲ್ಲ ಮೇಲೆ ಬಿದ್ದಿದ್ದ ಒಂದೆರಡು ಬಂಗಾರದ ಗೆರೆ ಗಳು ಇನ್ನೂ ಪ್ರಕಾಶಿಸಲು ಸಹ ಮಾರ್ಗವಿರಲಿಲ್ಲ, ಹೊರಗಿನ ಸೌಂದರ್ಯವು ಒಳಗಡೆ ಪ್ರತಿಬಿಂಬಿಸುವಷ್ಟು ಸಹ ಸಮಯವಾಗಿರಲಿಲ್ಲ, ಅಷ್ಟರಲ್ಲೇ ಅವು ಅಜಾಗರೂಕತೆ ಮತ್ತು ಅಲಕ್ಷ್ಯದಿಂದ ಕ್ಷೀಣವಾಗತೊಡಗಿದುವು ಕಡೆಗೆ ಅವು ಸಂಪೂರ್ಣವಾಗಿ ಅಳಿಸಿ ಹೋದುದು ಕೂಡ ಕಮಲೆಗೆ ತಿಳಿಯಲಿಲ್ಲ. ಒಮ್ಮೊಮ್ಮೆ ಅವಳಿಗೆ ಯಾವುದೋ ಒಂದು ಮುರುಕಲು ಮನೆಯ ಒಂದೆರಡು ಇಟ್ಟಿಗೆ, ಕಲ್ಲು, ಕೆಲವು ಮರದ ತುಂಡು— ಅಲ್ಲಿ-ಇಲ್ಲಿ ಹರಡಿ ಬಿದ್ದಿದ್ದಂತೆ ಭಾಸವಾಗುತ್ತಿತ್ತು ಆದರೆ ಅವೆಲ್ಲವನ್ನೂ ಪುನಃ ಒಟ್ಟುಗೂಡಿಸಿ ಒಂದು ಭವನವನ್ನು ತಯಾರಿಸಬೇಕೆಂಬ ಅಪೇಕ್ಷೆಯೂ ಅವಳಿಗುಂಟಾಗುತ್ತಿರಲಿಲ್ಲ, ಅಲ್ಲದೆ ಅಷ್ಟು ಸಾಮರ್ಥ್ಯವೂ ಅವಳಲ್ಲಿರಲಿಲ್ಲ ಒಂದಾನೊಂದು ಕಾಲದಲ್ಲಿ ಇಲ್ಲೊಂದು ರಾಜ-ಪ್ರಾಸಾದವಿತ್ತು, ಪ್ರಮೋದ-ಕಾನನವಿತ್ತು ಸ್ವಪ್ನದಂತೆ ಅದು ಒಮ್ಮೆ ಕಣ್ಣಿಗ ಕಾಣಿಸಿ, ಮರುಕ್ಷಣವೇ ಮಾಯವಾಯಿತು. ಆ ಕನಸನ್ನು ಮತ್ತೊಮ್ಮೆ ಕಾಣಬೇಕೆಂಬ ಅಭಿಲಾಷೆ ಸಹ ಅವಳಿಗಾಗ ಲಿಲ್ಲ ಹೋದದ್ದು ಹೋಗಿಯೇ ಹೋಯಿತು!

ವೃದ್ಧ ಪಿತನ ಸೇವೆ ಶುಶ್ರೂಷೆ ಮಾಡುತ್ತ, ಆಳುಮಕ್ಕಳನ್ನು ನೋಡಿ ಕೊಳ್ಳುತ್ತ ಅವಳ ದಿನಗಳು ಒಂದು ವಿಧದ ಕರ್ಮ-ಸುಖದಲ್ಲಿ ಕಳೆಯತೊಡ ಗಿದುವು ಆದರೆ ಯಾವ ಕೆಲಸದಿಂದ ಒಬ್ಬರಿಗೆ ಸುಖ ದೊರಕುವುದೋ,

ಅದೇ ಕೆಲಸದಿಂದ ಮತ್ತೊಬ್ಬರಿಗೂ ಸುಖ ಸಿಗಬೇಕೆಂದರೆ ಹೇಗೆ? ಕಮಲೆಯ ಈ ಪರಿಯ ಸುಖವನ್ನು ಕಂಡು, ಕೆಲಸದವಳ ಮನಸ್ಸಿಗೆ ಕಷ್ಟವೆನಿಸತೊಡಗಿತು ಬಹಳ ಯೋಚನೆ ಮಾಡಿ, ಕಡೆಗೊಂದು ದಿವಸ ಅವಳು ಪ್ರಿಯ ಬಾಬುಗಳು ಒಬ್ಬರೇ ಇದ್ದ ಸಮಯವನ್ನು ನೋಡಿ ಈ ರೀತಿ ಹೇಳಿದಳು— "ಕುಮಾರರು ಇತ್ತೀಚೆಗೆ ಹೇಗಾಗುತ್ತಿರುವರು, ಗೊತ್ತೇ? ಒಮ್ಮೆ ಮನೆಯಲ್ಲಿರುವರು, ಒಮ್ಮೆ ಎತ್ತಲೋ ಹೊರಟುಹೋಗುವರು ಯಾವಾಗ ಬರುವರು, ಏನು ಮಾಡುವರು— ಎಂಬುದೇ ಮನೆಯವರಾರಿಗೂ ಗೊತ್ತಾಗುವುದಿಲ್ಲ ಕುಮಾರಿ (ಕಮಲೆ) ಯೊಡನೆ ಸಹ ಮಾತನಾಡುವುದಿಲ್ಲವೆಂದು ತೋರುತ್ತದೆ"

ಪ್ರಿಯ ಬಾಬುಗಳು ತಮ್ಮ ಅಸ್ವಸ್ಥತೆಯಿಂದಲೇ ವ್ಯಾಕುಲಗೊಂಡಿದ್ದರು, ಆದ್ದರಿಂದ ಈ ವಿಷಯಗಳ ಕಡೆ ಅವರಿಗೆ ಗಮನ ಕೊಡಲಾಗಿರಲಿಲ್ಲ ವೃದ್ಧ ದಾಸಿಯ ಈ ಮಾತುಗಳಿಂದ ಅವರು ಎಚ್ಚೆತ್ತರು ಕಮಲೆ ಬಂದ ಕೂಡಲೇ ಅವರು ಅತ್ಯಂತ ಸ್ನೇಹದಿಂದ "ಮಗು! ನಾನು ಕೇಳಿದ ಮಾತಿಗೆ ಸರಿಯಾದ ಉತ್ತರ ಕೊಡುವೆಯಾ?" ಎಂದು ಕೇಳಿದರು

"ಅದಾವ ಮಾತು, ಅಪ್ಪಾ?"

"ಇಲ್ಲಿ ಕೇಳು, ಮಗೂ! ನನ್ನ ಸಂಗಡ ನಾಚಿಕೆಪಡಬೇಕಾದುದೇನೂ ಇಲ್ಲ ಆಪತ್ತು-ವಿಪತ್ತುಗಳಲ್ಲಿ ಹೆತ್ತ ತಂದೆಯೊಡನೆ ಯಾವ ಮಾತನ್ನೂ ಮರೆಮಾಚಬಾರದು ವಿಷಯ ಏನೆಂಬುದನ್ನು ಸ್ಪಷ್ಟವಾಗಿ ತಿಳಿಸು, ನಾನು ಎಲ್ಲ ಜಗಳವನ್ನೂ ತೀರ್ಮಾನ ಮಾಡಿ ಹೋಗುವೆನು"

ಕಮಲೆ ಮೌನದಿಂದಿದ್ದಳು

ಪ್ರಿಯ ಬಾಬುಗಳು ಪುನಃ ಹೇಳಿದರು— "ಮಗೂ, ನೀನು ಸುಖದಿಂದ ಬಾಳಲೆಂಬ ಆಶೆಯಿಂದಲೇ ನಿನ್ನನ್ನು ಸುಪಾತ್ರನ ಕೈಗೆ ಕೊಟ್ಟೆ ನೀನೊಬ್ಬಳ ಹೊರತು ನನಗೆ ಮತ್ತಾರಿರುವರು? ಹೀಗಿರುವಲ್ಲಿ ನೀನೂ ಸುಖದಿಂದಿರದಿದ್ದರೆ, ನಾನು ಸತ್ತ ಬಳಿಕಲೂ ಸುಖಿಯಾಗಲಾರೆ!" ವೃದ್ಧ ಪಿತನ ಕಣ್ಣುಗಳಿಂದ ಪಟಪಟನೆ ಅಶ್ರುಬಿಂದುಗಳುದುರಿದುವು ಕಮಲೆಯದೂ ಅದೇ ಸ್ಥಿತಿಯಾಯಿತು ಪ್ರಿಯ ಬಾಬುಗಳು ಅತ್ಯಂತ ಪ್ರೀತಿಯಿಂದ ಕಮಲೆಯ ಕಣ್ಣೀರೊರೆಸುತ್ತ "ಮಗು, ನನ್ನೊಡನೆ ಎಲ್ಲ ವಿಷಯವನ್ನೂ ಮರೆಮಾಚದೆ ತಿಳಿಸುವುದಿಲ್ಲವೇ?" ಎಂದು ಕೇಳಿದರು

ಆದರೆ ಕಮಲೆಗೆ ಏನು ಹೇಳಬೇಕೆಂಬುದೇ ಗೊತ್ತಾಗಲಿಲ್ಲ ಪ್ರಿಯ ಬಾಬುಗಳು ಸುಮ್ಮನಿದ್ದು, ಅನಂತರ "ಏಕೆ? ಏನಾದರೂ ಜಗಳವಾಗಿದೆಯೇ? ಎಂದು ಕೇಳಿದರು

ಕಮಲೆಯು ಮನಸ್ಸಿನಲ್ಲೇ 'ಜಗಳವಾಗುವುದಕ್ಕೆ ಸ್ನೇಹವಾದರೂ ಯಾವಾಗಿತ್ತು?" ಎಂದುಕೊಂಡು, ಪ್ರಕಾಶವಾಗಿ "ಇಲ್ಲ" ಎಂದಳು ತಲೆಯಲ್ಲಾಡಿಸುತ್ತ

"ಜಗಳವಾಗಿಲ್ಲವೆನ್ನುವೆ ಹಾಗಿದ್ದರೆ ಮತ್ತೇನು? ನಿನ್ನ ಮೇಲೆ ಅವನಿಗೆ ಮನಸ್ಸಿಲ್ಲವೇ?"

ಹೌದೆಂದು ಹೇಳಿಬಿಡಲೇ— ಎಂದೆನಿಸಿತು ಒಮ್ಮೆ ಕಮಲೆಗೆ ಆದರೆ ಹಾಗೆ ಹೇಳಲು ಮಾತ್ರ ಅವಳಿಂದಾಗಲಿಲ್ಲ ಪತಿಗೆ ತನ್ನನ್ನು ಕಂಡರೆ ಇಷ್ಟವಿಲ್ಲ, ಎಂದು ಹೇಳಲು ಅವಳ ಮನಸಿಗೆ ಬಹಳ ಕಷ್ಟವೆನಿಸ್ಸಿತು ಆದ್ದರಿಂದ ಏನೂ ಹೇಳದೆ ಸುಮ್ಮನಿದ್ದಳು ಪ್ರಿಯಬಾಬುಗಳು ಮ್ಲಾನ ಮುಖದಿಂದ ನಗುತ್ತ "ಹಾಗಿದ್ದರೆ ನಿನಗೇ ಅವನನ್ನು ಕಂಡರೆ ನೇರುವುದಿಲ್ಲವೇ?" ಎಂದು ಕೇಳಿದರು ಕಮಲೆ ಯೋಚಿಸತೊಡಗಿದಳು-"ಬಹುಶಃ ಇದೇ ಇರಬಹುದು. ನನಗೇ ಅವರನ್ನು ಕಂಡರೆ ಇಷ್ಟವಿಲ್ಲವೋ, ಏನೋ! ಆದರೆ ಇದೆಂತಹ ಮಾತು? ನನ್ನ ಪತಿಯನ್ನು ಕಂಡರೆ ನನಗೇ ಇಷ್ಟವಿಲ್ಲವೇ?" ಕಮಲೆಯು ಕಂಪಿಸುತ್ತ, ತನ್ನ ಹೃದಯವನ್ನೊಳಹೊಕ್ಕು ನೋಡಿದಳು- ಅಲ್ಲಿನ ಸಂಗೀತವೆಲ್ಲಾ ಸಮಾಪ್ತವಾಗಿ ಹೋಗಿದೆ ನಡುನಡುವೆ ಒಬ್ಬಿಬ್ಬರು ತಮ್ಮ ಸಾಮಾನುಗಳನ್ನು ತೆಗೆದುಕೊಂಡು ಹೋಗುವುದಕ್ಕೋಸ್ಕರ ಓಡಾಡುತ್ತಿದ್ದಾರೆ ಆಗ ಅಕಸ್ಮಾತ್ತಾಗಿ ಅವರ ಕೈ ವಾದ್ಯಕ್ಕೆ ತಗುಲಿ, ಯಾವುದೋ ಒಂದು ತಾನ ಗುಂಜರಿಸಿ ಎದ್ದಿದೆ, ಅಷ್ಟೆ ಕಮಲೆ ಅಳುತ್ತ, ಸೆರಗಿನಿಂದ ಕಣ್ಣುಗಳನ್ನು ಮುಚ್ಚಿಕೊಂಡಳು ಪ್ರಿಯಬಾಬುಗಳು ಅತ್ಯಂತ ಕಾತರಧ್ವನಿಯಿಂದ "ಅಳಬೇಡ, ಮಗೂ!" ಎಂದರು

"ಅಪ್ಪಾ, ನಮ್ಮಿಬ್ಬರಲ್ಲಿ ಯಾರಿಗೆ ಯಾರೂ ಇಲ್ಲ"

ಪ್ರಿಯ ಬಾಬುಗಳು ಮಗಳನ್ನು ಸಮೀಪಕ್ಕೆಳೆದುಕೊಂಡು, ಅತ್ಯಂತ ಕೋಮಲ ಸ್ವರದಿಂದ "ಛೀ, ಮಗೂ! ಇಂತಹ ಮಾತನ್ನಾಡುವರೇ? ನಿನ್ನ ತಾಯಿ ನನ್ನ ಸರ್ವಸ್ವವಾಗಿದ್ದಳು ಈಗಲೂ ಅವಳು ರಾತ್ರಿಯ ಹೊತ್ತು ನನ್ನ ಕಾಲ ಬಳಿ ಬಂದು ಕುಳಿತುಕೊಳ್ಳುವಳು. ನಿಮ್ಮೆಲ್ಲರ ಹೆದರಿಕೆಗೋಸ್ಕರ ಹಗಲಿನಲ್ಲಿ ಬರುವುದಿಲ್ಲ. ಇನ್ನೇನು, ಸಾಯಂಕಾಲವಾಯಿತು.

ಮಗೂ! ಅವಳು ಬಂದು, ನಿನ್ನ ಈ ಮಾತುಗಳನ್ನು ಕೇಳಿದರೆ ನಿಜವಾಗಿಯೂ ಬಹಳ ವ್ಯಸನಗೊಳ್ಳುವಳು" ಎಂದರು

ಸಾಯಂಕಾಲವಾಗಿತ್ತು, ಕೋಣೆಯಲ್ಲಿ ಕತ್ತಲಾಗುತ್ತ ಬಂದಿತ್ತು. ಕಮಲೆಯು ಗಾಬರಿಯಿಂದ- ನಿಜವಾಗಿಯೂ ಯಾರಾದರೂ ಬಂದಿರುವರೇ ಇಲ್ಲವೇ ಎಂದು ನಾಲ್ಕೂಕಡೆ ನೋಡಿದಳು ಎಲ್ಲೂ ಯಾರೂ ಇರಲಿಲ್ಲ, ಆಗ ಅವಳ ಮನಸಿಗೆ ಸಮಾಧಾನವೆನಿಸಿತು ಅಲ್ಲಿಂದ ಅವಳು ಹೊರಗೆ ಹೋದಾಗ ಕಾಲುಗಳು ಥರಥರನೆ ನಡುಗುತ್ತಿದ್ದುವು ಶರೀರದ ಅರ್ಧ ರಕ್ತವನ್ನೇ ಯಾರಾದರೂ ಹೀರಿಬಿಟ್ಟರೋ ಎಂಬಂತೆ ನಿಃಶಕ್ತಳಾದಳು ತನ್ನ ಕೆಲಸ ಕಾರ್ಯಗಳೆಲ್ಲಾ ಮುಗಿದನಂತರ ಕಮಲೆಯು ಕಾಶೀನಾಥನ ಕೋಣೆಗೆ ಹೋದಳು ನೆಲದ ಮೇಲೆ ಚಾಪೆ ಹಾಸಿ, ದೀಪವನ್ನು ಹೊತ್ತಿಸಿ, ಪುಸ್ತಕವನ್ನು ತೆರೆದಿಟ್ಟುಕೊಂಡು ಅಧ್ಯಯನ ಮಾಡುತ್ತ ಕುಳಿತಿದ್ದ ಕಾಶೀನಾಥ. ತಲೆಯೆತ್ತಿ ನೋಡಿದ, ಕಮಲೆ! ಆಶ್ಚರ್ಯದೊಡನೆ— "ನೀನು ಬಂದಿರುವೆಯಾ!" ಎಂದ

"ಹೌದು, ನಾನು ಬಂದಿರುವೆನು"

"ಕುಳಿತುಕೊ!" ಎಂದು ಹೇಳಿ ಕಾಶೀನಾಥ ಪುನಃ ಓದುವುದರಲ್ಲಿ ತಲ್ಲೀನನಾದ ಕಮಲೆ ಬಹಳ ಹೊತ್ತಿನ ವರೆಗೆ ಪತಿಯ ಅಧ್ಯಯನವನ್ನು ನೋಡುತ್ತಿದ್ದಳು ಅನಂತರ ತಾನೇ ಅವನ ಪುಸ್ತಕವನ್ನು ಮುಚ್ಚಿಬಿಟ್ಟಳು. ಕಾಶೀನಾಥ ವಿಸ್ಮಯದಿಂದ ತಲೆಯೆತ್ತಿ ನೋಡಿ "ಪುಸ್ತಕವನ್ನು ಮುಚ್ಚಿಬಿಟ್ಟೆಯಾ?" ಎಂದ

"ನಿತ್ಯವೂ ಓದುತ್ತಲೇ ಇರುವಿರಿ ಈ ಹೊತ್ತು ಒಂದು ದಿವಸ ಓದದಿದ್ದರೆ ಏನೂ ನಷ್ಟವಿಲ್ಲ ಏನಾದರೂ ಮಾತುಕತೆಯಾಡೋಣ!"

"ಅದಕ್ಕಾಗಿಯೇ ಪುಸ್ತಕವನ್ನು ಮುಚ್ಚಿದೆಯಾ?"

"ಕೇವಲ ಅದಕ್ಕಾಗಿಯೇ ಅಲ್ಲ ನೀವು ಕೋಪಗೊಳ್ಳಬೇಕು— ಏನಾದರೂ ಎನ್ನಬೇಕು, ಎಂದು ಹಾಗೆ ಮಾಡಿದೆ"

ಕಾಶೀನಾಥ ಮುಗುಳುನಗೆ ನಗುತ್ತ "ಏತಕ್ಕೆ ಕೋಪಮಾಡಿಕೊಳ್ಳಲಿ, ಕಮಲಾ? ನಿನ್ನೊಡನೆ ಎಂದಾದರೂ ಕಟು-ವಾಕ್ಯ ಒಂದನ್ನಾದರೂ ಆಡಿದ್ದುಂಟೆ? ನೀನೇ ಮಾತನಾಡುವುದಿಲ್ಲ, ಬಳಿಗೆ ಬರುವುದಿಲ್ಲ, ಎಂದಬಳಿಕ ಓದದೆ ಹೇಗೆ ಹೊತ್ತುಕಳೆಯಲಿ?" ಎಂದ ತುಸುಹೊತ್ತು ಸುಮ್ಮನಿದ್ದು,

ಪುನಃ ಮುಗುಳುನಗೆ ನಗುತ್ತ "ಜ್ವರವೇರಿ ಬಂದಿದೆ, ಈಗೆರಡು ದಿವಸದಿಂದ ಏನೇನೂ ತಿಂದಿಲ್ಲ, ಹಾಗಿದ್ದರೂ ನೀನು ಒಮ್ಮೆಯೂ ನನ್ನನ್ನು ವಿಚಾರಿಸಲಿಲ್ಲ!" ಎಂದ

ಮುಖವೆತ್ತಿ ನೋಡಿದಳು ಕಮಲಾ. ಪತಿಯ ಮುಖ ಬಹಳ ಬಾಡಿತ್ತು ಹಣೆಯ ಮೇಲೆ ಕೈಯಿಟ್ಟು ನೋಡಿ "ಬಹಳ ಜ್ವರವಿದೆ" ಎಂದಳು ಒಡನೆಯೇ ಗಂಡನ ತೊಡೆಯ ಮೇಲೆ ಮುಖವನ್ನಿರಿಸಿ ಅಳತೊಡಗಿದಳು ಈ ಕ್ಷಣ ಪ್ರಾಣ ತ್ಯಜಿಸಿ ಬಿಡಲೇ, ಎನ್ನುವಷ್ಟು ನಾಚಿಕೆಯಾಯಿತು ಕಮಲೆಗೆ ಅಳುತ್ತಿದ್ದಂತೆಯೇ ಅವಳು "ನನ್ನ ಅಪರಾಧವನ್ನು ಕ್ಷಮಿಸಿ, ಈ ಒಂದು ಸಲ ನನ್ನನ್ನು ಸ್ವೀಕರಿಸಿರಿ, ನಿಮ್ಮ ಸಮಸ್ತ ಭಾರವನ್ನೂ ನಾನು ವಹಿಸಿಕೊಳ್ಳುವೆನು!" ಎಂದಳು

"ನಾನೇನೋ ಒಪ್ಪುವೆ, ಆದರೆ ನೀನದನ್ನು ನಿರ್ವಹಿಸಲಾರೆ!"

"ನಿರ್ವಹಿಸಲಾರೆನೇ? ಏಕೆ?"

"ಆಗಲಿ, ನೋಡೋಣವಂತೆ"

"ಹಾಗಿದ್ದರೆ ನನ್ನನ್ನು ನಿಮ್ಮವಳನ್ನಾಗಿ ಮಾಡಿಕೊಳ್ಳಿರಿ"

"ಎಷ್ಟೋ ದಿನಗಳಿಂದ ನೀನು ನನ್ನವಳಾಗಿಯೇ ಇರುವೆ ಆದರೆ ನೀನೇ ನನ್ನನ್ನು ಅರಿತುಕೊಳ್ಳಲಿಲ್ಲ, ಬಹುಶಃ ಇನ್ನೂ ಸಂಪೂರ್ಣವಾಗಿ ಚೆನ್ನಾಗಿ ಅರಿತುಕೊಳ್ಳಲಾರೆ!"

ದೀಪದ ಪ್ರಕಾಶದಲ್ಲಿ ಕಮಲೆ ಆ ಮುಖವನ್ನು ಮನದಣಿಯೆ ನೋಡಿದಳು ಆಹಾ! ಬೂದಿ ಮುಚ್ಚಿದ ಕೆಂಡ, ಮೇಣ ಮುಚ್ಚಿದ ಮಧು! ಕ್ಷಣ-ಕಾಲ ಅವಳು ತನ್ನನ್ನೇ ಮರೆತುಬಿಟ್ಟಳು ಅತಿ ಆವೇಗದಿಂದ ಅವಳು "ಹಾ! ಇಷ್ಟು ದಿನ ನಾನು ನಿಮ್ಮನ್ನು ತಿಳಿಯಲಾರದೆ ಹೋದೆ ಬೂದಿ ಮುಚ್ಚಿದ ಕೆಂಡದಂತಿದ್ದು, ಇಷ್ಟು ದಿವಸ ನನ್ನನ್ನು ತೊಂದರೆಗೀಡುಮಾಡಿದಿರೇಕೆ?" ಎನ್ನುತ್ತ, ಅತ್ಯಾನಂದದಿಂದ ಪತಿಯನ್ನು ಅಪ್ಪಿಕೊಂಡಳು ಆ ದಿನ ಕಾಶೀನಾಥನ ಕಣ್ಣುಗಳಿಂದಲೂ ಕಂಬನಿಗಳುದುರಿದುವು

೬

ಮರುದಿನ ಪ್ರಿಯ ಬಾಬುಗಳು ಕಾಶೀನಾಥನನ್ನು ತಮ್ಮ ಬಳಿಗೆ ಕರೆದು ಹೇಳಿದರು— “ ಮಗೂ ! ಇನ್ನು ನನ್ನ ಕಾಲ ಮುಗಿಯುತ್ತ ಬಂತು ಯಾವೊತ್ತು ಈ ಲೋಕವನ್ನು ಬಿಟ್ಟು ಹೊರಟು ಹೋಗುವೆನೋ ! ನನಗೆ ಮಕ್ಕಳು-ಮರಿ ಯಾವುದೂ ಇಲ್ಲ ನಾನು ಬಿಟ್ಟು ಹೋಗುವ ಆಸ್ತಿ-ಗೀಸ್ತಿ ಎಲ್ಲವೂ ನಿನ್ನದೇ ಆದ್ದರಿಂದ ನಾನು ಜೀವದಿಂದಿರುವಾಗಲೇ-- ನನ್ನ ಕಣ್ಮುಂದೆ-- ಎಲ್ಲವನ್ನೂ ತಿಳಿದುಕೊ ಇಲ್ಲದಿದ್ದರೆ ನಂತರ ಏನೂ ಉಳಿಯುವುದಿಲ್ಲ, ಜನರು ಮೋಸ ಮಾಡಿಬಿಡುವರು. ”

ಕಾಶೀನಾಥ ತಲೆ ತಗ್ಗಿಸಿಕೊಂಡೇ “ ಹಾಗೆಯೆ ಆಗಲಿ ! ” ಎಂದ ಪ್ರಿಯ ಬಾಬುಗಳು “ ನಿನಗೆ ನಾನು ಹೇಳುವುದಿಷ್ಟೆ ನಾಳೆಯಿಂದ ಪ್ರತಿನಿತ್ಯವೂ ನನ್ನ ಕಚೇರಿಯಲ್ಲಿ ಹೋಗಿ ಕುಳಿತುಕೋ ! ” ಎಂದರು

“ ಒಳ್ಳೇದು ” ಎಂದು ಕಾಶೀನಾಥ ಅಲ್ಲಿಂದ ಎದ್ದು ಹೋದ ಬಳಿಕ ಪ್ರಿಯ ಬಾಬುಗಳು ಕಮಲೆಯನ್ನು ಬಳಿಗೆ ಕರೆದು “ ಮಗು, ನಾನಂತೂ ಮುದುಕನಾದೆ, ಕೆಲಸ ಕಾರ್ಯಗಳನ್ನು ನಿರ್ವಹಿಸುವಷ್ಟು ಶಕ್ತಿಯಿಲ್ಲ, ಆದ್ದರಿಂದ ಜಮೀನುದಾರಿಯ ಸಮಸ್ತ ಭಾರವನ್ನೂ ಕಾಶೀನಾಥನಿಗೆ ವಹಿಸಿಬಿಟ್ಟಿರುವೆನು ಮುಂದೆ ಯಾವ ಅನಾನುಕೂಲ-ತೊಂದರೆಗಳೂ ಬಂದೊದಗದಿರಲೆಂಬ ಉದ್ದಿಶ್ಯದಿಂದ ಈಗಲೇ ಎಲ್ಲವನ್ನೂ ತಿಳಿಸಿ ಹೇಳುತ್ತಿರುವೆನು ” ಎಂದರು

ಕೆಲವು ದಿನಗಳ ವರೆಗೆ ಪ್ರಿಯ ಬಾಬುಗಳೂ ಕಾಶೀನಾಥನ ಸಂಗಡ ಕಚೇರಿಗೆ ಹೋಗಿ, ಜಮೀನುದಾರೀ ಸಂಬಂಧವಾದ ಅನೇಕ ವಿಷಯಗಳನ್ನು ಅವನಿಗೆ ತಿಳಿಯಹೇಳಿದರು ಒಂದು ಕೆಲಸ ಸಿಕ್ಕಿದ್ದಕ್ಕಾಗಿ ಅವನಿಗೂ ಎಷ್ಟೋ ಆನಂದವಾಯಿತು ಮನೆಯಲ್ಲಿ ಒಳಗಿಂದೊಳಗೇ ಉರಿಯುತ್ತಿದ್ದ ಜ್ವಾಲೆ ಮೆಲ್ಲ-ಮೆಲ್ಲನೆ ಆರುತ್ತ ಬಂದಿತು

ಕಾಶೀನಾಥ ಇತ್ತೀಚೆಗೆ ಜಮೀನುದಾರಿಯ ಕೆಲಸ ಕಾರ್ಯಗಳನ್ನು ನಿಯಮದಿಂದ ನೋಡಿಕೊಳ್ಳುತ್ತಿದ್ದ, ಕಮಲೆ ಸಂಸಾರವನ್ನು ನಿಯಮದಿಂದ ನಿರ್ವಹಿಸುತ್ತಿದ್ದಳು, ಇತ್ತ ಪ್ರಿಯ ಬಾಬುಗಳೂ ನಿಯಮದಿಂದ ಹಾಸಿಗೆ ಹಿಡಿದರು ! ಈ ರೀತಿ ಸಂಸಾರವು ಬಹಳ ಆನಂದದಿಂದ ಸಾಗುತ್ತಿತ್ತು,

ಆದರೆ ಕೆಲವೇ ದಿವಸಗಳಲ್ಲಿ ಪ್ರಿಯ ಬಾಬುಗಳ ದೇಹಸ್ಥಿತಿ ಬಹಳ ಹದ-ಗೆಟ್ಟಿತು ಒಂದು ದಿವಸ ಅವರು ಕಮಲೆಯನ್ನು ಕರೆದು "ಮಗೂ, ನಾನೊಂದು ಮೃತ್ಯುಪತ್ರವನ್ನು ಬರೆಸಿರುವೆನು, ಇದೋ!" ಎನ್ನುತ್ತ ತಲೆ ದಿಂಬಿನ ಕೆಳಗಡೆಯಿಂದ ಒಂದು ಕಾಗದವನ್ನು ತೆಗೆದು ಓದತೊಡಗಿದರು— ನಾನು ನನ್ನ ಸ್ಥಾವರ ಜಂಗಮ ಸರ್ವ ಸಂಪತ್ತಿನಲ್ಲಿ ಅರ್ಧ ಭಾಗವನ್ನು ನನ್ನ ಅಳಿಯನಾದ ಕಾಶೀನಾಥನಿಗೂ, ಉಳಿದ ಅರ್ಧ ಭಾಗವನ್ನು ನನ್ನ ಮಗಳಾದ ಕಮಲಾದೇವಿಗೂ ಕೊಟ್ಟಿರುವೆನು-- ಸರಿಯಾಗಿದೆಯೇ ಮಗೂ? ಎಂದರು ಕಮಲೆ ಏನೂ ಉತ್ತರ ಕೊಡಲಿಲ್ಲ ಪ್ರಿಯ ಬಾಬುಗಳು ವಿಸ್ಮಯಗೊಂಡು "ಅದೇಕೆ ಕಮಲಾ! ಮೃತ್ಯುಪತ್ರ ನಿನ್ನ ಮನಸಿಗೆ ಸರಿಯೆನಿಸಲಿಲ್ಲವೇ?" ಎಂದು ಕೇಳಿದರು ಕೇವಲ ಕಮಲೆಯ ಮನ-ಸ್ಸಂತೋಷ ಪಡಿಸುವ ಉದ್ದಿಶ್ಯದಿಂದ ಅವರು ಈ ಪತ್ರವನ್ನು ಬರೆಸಿದ್ದರು. ಸರ್ವ ಸಂಪತ್ತಿಗೂ ಅಧಿಕಾರಿ ಕಾಶೀನಾಥನೇ ಆದರೂ, ಇದರಿಂದ ಕಮಲೆಯ ಮನಸಿಗೆ ಸಂತೋಷವುಂಟಾಗಬಹುದೆಂದು ಅವರು ಭಾವಿಸಿದ್ದರು. ಆದರೆ ಕಮಲೆಗೆ ತನ್ನ ಮನಸಿನಲ್ಲಿದ್ದುದನ್ನು ಹೇಳಲು ನಾಚಿಕೆಯಾಗುತ್ತಿತ್ತು ಪ್ರಿಯ ಬಾಬುಗಳು ಪುನಃ ಕೇಳಿದರು— "ಏನಾದರೂ ಹೇಳುವುದಿದೆಯೆ?"

ಕಮಲೆ ತಲೆಯಲ್ಲಾಡಿಸಿ "ಹೌದು, ಹೇಳುವುದಿದೆ" ಎಂದಳು

"ಅದೇನು, ಮಗು!"

ಕಮಲೆ ಸ್ವಲ್ಪ ಯೋಚನೆ ಮಾಡುತ್ತ "ಎಲ್ಲ ಆಸ್ತಿಯನ್ನೂ ನನ್ನ ಹೆಸರಿಗೇ ಬರೆದು ಬಿಡಿ!" ಎಂದಳು

"ಅದೇಕೆ, ಕಮಲಾ?"

ಕಮಲೆ ತಲೆ ತಗ್ಗಿಸಿಕೊಂಡು ಸುಮ್ಮನೆಯೇ ಕುಳಿತಿದ್ದಳು

ಪ್ರಿಯ ಬಾಬುಗಳು ಒಳ್ಳೆಯ ಅನುಭವಶಾಲಿ ಪ್ರಪಂಚವನ್ನು ಸಾ-ಕಷ್ಟು ನೋಡಿ ತಿಳಿದವರು ಕಮಲೆಯ ಮನಸಿನ ಮಾತು ಅವರಿಗೆ ತಿಳಿಯದಿರಲಿಲ್ಲ ಹೃದಯದ ಆಳದ ವರೆಗೂ ಹೊಕ್ಕು, ಎಲ್ಲ ಮಾತನ್ನೂ ಒಂದೊಂ-ದಾಗಿ ತಿಳಿದುಕೊಂಡಾಗಲಂತೂ ಅವರ ಶರೀರವೇ ಕುಸಿದುಬಿದ್ದಂತಾಯಿತು; ತಾನು ಒರಗಿ ಕುಳಿತುಕೊಂಡಿದ್ದ ದಿಂಬಿನ ಮೇಲೆಯೇ ತಲೆಯಿರಿಸಿ, ಕಣ್ಣುಗಳನ್ನು ಮುಚ್ಚಿಕೊಂಡು ಮಲಗಿಬಿಟ್ಟರು

ಬಹಳ ಹೊತ್ತಿನವರೆಗೆ ಮೌನದಿಂದಿದ್ದು, ಅನಂತರ "ಮಗು, ಇರುವವಳು ನೀನೊಬ್ಬ ಮಗಳು ನಿನ್ನ ಮನಸ್ಸು ನೋಯಿಸಲು ನಾನು ಇಚ್ಛಿಸುವುದಿಲ್ಲ ಎಲ್ಲ ಆಸ್ತಿಯನ್ನೂ ನಿನಗೇ ಬರೆದಿಟ್ಟು ಹೋಗುವೆನು, ಆದರೆ ಹಾಗೆ ಮಾಡುವುದು ಉಚಿತವಲ್ಲ ಸುಖಿಯಾಗಿ ಬಾಳೆಂದು ಆಶೀರ್ವಾದವನ್ನೇನೊ ಮಾಡುವೆನು, ಮಗೂ! ಆದರೆ ಆ ಮಾತಿನಲ್ಲಿ ನನಗಷ್ಟು ಭರವಸೆ ಇಲ್ಲ. ಇದುವರೆಗಿನ ನನ್ನ ಜೀವನದಲ್ಲಿ ನಾನೆಷ್ಟೋ ನೋಡಿ ಕೇಳಿರುವೆನು, ಅಷ್ಟೇಕೆ? ನಾನೇ ಮೂರು ಮದುವೆ ಮಾಡಿಕೊಂಡು ಅನುಭವಿಸಿರುವೆನು-- ಇಂತಹ ಮನಸ್ಸುಳ್ಳ ಯಾವ ಸ್ತ್ರೀಯೂ ಪ್ರಪಂಚದಲ್ಲಿ ಸುಖಿಯಾಗಲಾರಳು!" ಎಂದರು ಪುನಃ ಸ್ವಲ್ಪಹೊತ್ತು ಸುಮ್ಮನಿದ್ದು, ಬಳಿಕ ಎಂದರು— "ನೋಡುವುದಕ್ಕೂ ಚೆನ್ನಾಗಿರುವುದು, ಕೇಳುವುದಕ್ಕೂ ಚೆನ್ನಾಗಿರುವುದು, ನಿನ್ನ ಮನಸಿಗೂ ಸರಿಯೆನಿಸುವುದು, ಎಂದು ತಿಳಿದು ಇಬ್ಬರ ಹೆಸರಿಗೂ ಅರ್ಧ ಅರ್ಧ ಆಸ್ತಿಯನ್ನು ಬರೆಸಿದೆ ನೀವಿಬ್ಬರೂ ಬೇರೆ ಬೇರೆಯಲ್ಲವೆಂದು ನಾನು ಭಾವಿಸಿದ್ದೆ ಅದಿರಲಿ ಮಗು, ಯಾವ ಕಾರಣದಿಂದ ನೀನು ಅವನ ಹೆಸರಿಗೆ ಆಸ್ತಿ ಬರೆಯಬೇಡವೆನ್ನುವೆ?"

ಕಮಲೆ ಅಳು-ಮುಖವನ್ನು ಮಾಡಿಕೊಂಡು "ಆಸ್ತಿ ಸಿಕ್ಕಿದನಂತರ, ನನ್ನನ್ನು ಯಾರು ಕಣ್ಣೆತ್ತಿ ನೋಡುವರು?" ಎಂದಳು

"ಆಸ್ತಿ ಸಿಕ್ಕದೇ ಇದ್ದರೆ?"

"ಆಗ ನನ್ನ ಅಧೀನದಲ್ಲಿರುವರು"

"ಮಗು! ಕಾಶೀನಾಥನ ಸ್ವಭಾವ ನನಗೆ ಚೆನ್ನಾಗಿ ಗೊತ್ತು, ನಿನಗಿನ್ನೂ ಗೊತ್ತಾಗಿಲ್ಲ ಅವನು ಎಲ್ಲಾ ತನ್ನ ತಂದೆಯಂತೆ ಅವನ ಸ್ವಬಾವ ಯಾವಾಗಲೂ ಒಂದೇ, ಸಂಪತ್ತು ಸಿಕ್ಕಿದರೂ ಒಂದೇ, ಸಿಗದಿದ್ದರೂ ಒಂದೇ! ಅದಿರಲಿ ಮಗು, ಈರೀತಿ ಪತಿಯನ್ನು ವಶದಲ್ಲಿರಿಸಿಕೊಳ್ಳುವುದು ಸಾಧ್ಯವೇ? ಅರಣ್ಯದ ಸಿಂಹವನ್ನು ಬಲಾತ್ಕಾರದಿಂದ ವಶಪಡಿಸಿಕೊಳ್ಳಬಹುದು, ಆದರೆ ಅದೇ ರೀತಿ ಒಂದು ಸಣ್ಣ ಹೂವನ್ನು ಬಲಾತ್ಕಾರದಿಂದ ಅರಳಿಸುವುದು ಸಾಧ್ಯವೇ?" ಎಂದರು ಪ್ರಿಯ ಬಾಬು

ತುಸು ಹೊತ್ತು ಸುಮ್ಮನಿದ್ದು, ಅನಂತರ "ಮಗೂ, ನಿನಗೆ ಸರ್ವ ಸಫಲತೆ ದೊರಕಲೆಂದು ಪರಮಾತ್ಮನನ್ನು ಪ್ರಾರ್ಥಿಸುವೆನು, ಆದರೆ ಇದು ಒಳ್ಳೆಯ ಮಾರ್ಗವಲ್ಲ ಒಂದುವೇಳೆ ಅವನೇ ನಿನ್ನನ್ನು ಸ್ವೀಕರಿಸದೆ ಹೋದರೆ

ಎಲ್ಲವನ್ನೂ ಇಟ್ಟುಕೊಂಡು ನೀನೇನು ಮಾಡುವೆ? ಹಾಗಾಗುವ ಪಕ್ಷ ದಲ್ಲೂ ಅರ್ಧ ಆಸ್ತಿ ನಿನಗೆ ಸಾಲದೇ? ಇನ್ನೊಂದು ವಿಷಯ ಪತಿಯಾದವ ನಿಗೆ ಶರೀರ, ಮನಸ್ಸು, ಆತ್ಮ–ಪಾರ್ಥಿವ–ಅಪಾರ್ಥಿವ–ಸರ್ವಸ್ವವನ್ನೂ ಕೊಡುವಾಗ ಅರ್ಧ ಆಸ್ತಿಯನ್ನು ಕೊಡಲಾಗುವುದಿಲ್ಲವೇ? ಕಮಲಾ, ಹೀಗೆ ಮಾಡಬೇಡ ಮಗೂ! ಎಂದಾದರೂ ಅವನಿಗೆ ಈ ವಿಷಯ ತಿಳಿದರೆ ಬಹಳ ದುಃಖಪಡುವನು'' ಎಂದರು.

ಕಮಲೆ ಏನೂ ಉತ್ತರಕೊಡಲಿಲ್ಲ, ಪ್ರಿಯಬಾಬುಗಳೂ ಪುನಃ ಏನೂ ಕೇಳಲಿಲ್ಲ ಇಬ್ಬರೂ ಸುಮಾರು ಅರ್ಧ ಗಂಟೆಯವರೆಗೆ ಮೌನದಿಂದಿದ್ದರು ಕತ್ತಲಾಗುತ್ತ ಬಂದಿತು ಕೆಲಸದವಳು ದೀಪವನ್ನು ಹೊತ್ತಿಸಿ ಕೋಣೆಯ ಲ್ಲಿಟ್ಟು ಹೋದಳು ಕಮಲೆಯೂ ಕಣ್ಣೊರೆಸಿಕೊಳ್ಳುತ್ತ, ತನ್ನ ಕೆಲಸಕ್ಕೆಂದು ಅಲ್ಲಿಂದ ಎದ್ದು ಹೊರಟು ಹೋದಳು

ಮರುದಿನ ಪ್ರಿಯ ಬಾಬುಗಳು ತಮ್ಮ ವಕೀಲನನ್ನು ಕರೆಸಿ "ನಾನು ನನ್ನ ಮೃತ್ಯುಪತ್ರವನ್ನು ಬದಲಿಸಬೇಕೆಂದಿದ್ದೇನೆ" ಎಂದರು

"ಏನೆಂದು ಬದಲಿಸಬೇಕು?"

"ಅಳಿಯನ ಹೆಸರನ್ನು ಹೊಡೆದು, ಎಲ್ಲ ಆಸ್ತಿಯನ್ನೂ ಮಗಳ ಹೆಸ ರಿಗೇ ಬರೆಯಬೇಕು"

"ಏಕೆ?"

"ಈ ಪ್ರಶ್ನೆಯ ಅವಶ್ಯಕತೆಯೇನೂ ಇಲ್ಲ ನಾನು ಹೇಳಿದಂತೆ ಬರೆದು ಬಿಡಿರಿ"

## ೭

ಪ್ರಿಯ ಬಾಬುಗಳು ಸ್ವರ್ಗಸ್ಥರಾಗಿ, ಶ್ರಾದ್ಧಕರ್ಮಗಳೆಲ್ಲಾ ನೆರ ವೇರಿದ ಬಳಿಕ ಮೃತ್ಯುಪತ್ರವನ್ನು ನೋಡಿದಾಗ, ಕಾಶೀನಾಥನಿಗೆ ಸ್ವಲ್ಪವೂ ದುಃಖವಾಗಲಿಲ್ಲ, ವಿಸ್ಮಯವೂ ಆಗಲಿಲ್ಲ ಪ್ರಪಂಚದಲ್ಲಿ ಸಾಮಾನ್ಯವಾಗಿ ಯಾವ ರೀತಿ ನಡೆಯುವುದೋ, ಯಾವ ರೀತಿ ನಡೆಯಬೇಕೋ, ಹಾಗೆಯೇ ನಡೆದಿದೆ ಇದಕ್ಕಾಗಿ ದುಃಖ ಅಥವಾ ವಿಸ್ಮಯವೇತಕ್ಕೆ? ಆದರೆ ವೃದ್ಧ

ಸಚಿವನು ಕಾಶೀನಾಥನನ್ನು ಸುಮ್ಮನೆ ಬಿಡಲಿಲ್ಲ ಅವನನ್ನು ಏಕಾಂತಕ್ಕೆ ಕರೆದು "ಕುಮಾರಜೀ, ಒಡೆಯರು ಈ ರೀತಿಯ ಮೃತ್ಯುಪತ್ರವನ್ನು ಬರೆಸುವ ರೆಂದು ನಾನು ಕನಸಿನಲ್ಲೂ ನೆನಸಿರಲಿಲ್ಲ ಮೊದಲು ಅವರು ಬೇರೆ ಒಂದು ಪತ್ರವನ್ನು ಬರೆಸಿದ್ದರು, ಅದರಲ್ಲಿ ನಿಮಗೂ ಮತ್ತು ಕಮಲೆಗೂ-ಇಬ್ಬರಿಗೂ ಅರ್ಧ-ಅರ್ಧ ಆಸ್ತಿಯನ್ನು ಬರೆದಿದ್ದರು ಪುನಃ ಅದನ್ನೇಕೆ ಬದಲಾಯಿಸಿ ದರು, ಯಾರ ಮಾತು ಕೇಳಿ ಅವರ ಮನಸ್ಸು ತಿರುಗಿತು ಎಂಬುದೇ ತಿಳಿಯ ಲೊಲ್ಲದು'' ಎಂದನು

ಕಾಶೀನಾಥ ಮುಗುಳು ನಗೆ ನಗುತ್ತ "ತಿಳಿಯುವ ಆವಶ್ಯಕತೆ ಯಾದರೂ ಏನು? ಆಸ್ತಿ ಯಾರದೋ, ಅವರಿಗೆ ಸಿಕ್ಕಿತು ಇದರಲ್ಲಿ ನನ್ನದೂ ನಿಮ್ಮದೂ ಏನಿದೆ?'' ಎಂದ

ಸಚಿವನು ಸ್ವಲ್ಪ ಅಪ್ರತಿಭನಾಗಿ "ಆದರೂ—ಆದರೂ'' ಎಂದ

"ಆದರೂ-ಗೀದರೂ ಏನೂ ಇಲ್ಲ ವಾಸ್ತವವಾಗಿ ನೋಡಿದರೆ ಈ ಆಸ್ತಿಗೆ ನನ್ನ ಅಧಿಕಾರವಾದರೂ ಏನಿದೆ? ಅವರು ಅರ್ಧ ಆಸ್ತಿಯನ್ನು ನನ್ನ ಹೆಸರಿಗೆ ಬರೆದಿದ್ದರೆ, ಆಗ ನಿಜವಾಗಿಯೂ ಆಶ್ಚರ್ಯವೆನಿಸುತ್ತಿತ್ತು ಆದ ರೇನು? ನನಗೆ ಅರ್ಧ ಕೊಡುವುದು, ಅವಳಿಗ ಪೂರ್ತಿ ಕೊಡುವುದು— ಎರಡೂ ಒಂದೇ ಅಲ್ಲವೇ! ಇದರಲ್ಲಿ ವ್ಯತ್ಯಾಸವೆಲ್ಲಿಯದು?''

ಸಚಿವನು ಮತ್ತಷ್ಟೂ ಅಪ್ರತಿಭನಾದ ಪೆಚ್ಚು ಮೋರೆ ಹಾಕಿಕೊಂಡು ಅವನು "ಇಲ್ಲ, ಇಲ್ಲ, ವ್ಯತ್ಯಾಸವೇನೂ ಇಲ್ಲ ನಾನು ಕೇವಲ ಧನಿಯರ ಮಾತನ್ನು ಹೇಳಿದೆ ಅವರ ಅಭಿಪ್ರಾಯವೇನೆಂದು ನನಗೆ ಚನ್ನಾಗಿ ತಿಳಿ ದಿತ್ತು, ಆದ್ದರಿಂದ ಈ ಮಾತನ್ನಾಡಿದೆ!" ಎಂದ

"ಅವರು ತಮ್ಮ ಕರ್ತವ್ಯವನ್ನೇ ಮಾಡಿದರು ನೀವೇ ಯೋಚಿಸಿ ನೋಡಿರಿ— ಸ್ತ್ರೀಯಾದವಳಿಗೆ ಪತಿಯ ವಿನಾ ಗತಿಯೇ ಇಲ್ಲ! ಆದರೆ ಪುರುಷನಿಗೆ ಎಷ್ಟೋ ಮಾರ್ಗಗಳಿವೆ. ಅದೂ ಅಲ್ಲದೆ ನಾನು ಬಡವ ಒಮ್ಮೆಗೇ ಇಷ್ಟೊಂದು ಸಂಪತ್ತು ಸಿಕ್ಕಿದರೆ, ಅದರ ಪರಿಣಾಮ ಕೆಟ್ಟದಾಗ ಬಹುದೆಂದು ಯೋಚಿಸಿ ಅವರು ಪತ್ರವನ್ನು ಬದಲಾಯಿಸಿರಬಹುದು!''

ವೃದ್ಧ ಸಚಿವನು ಕಾಶೀನಾಥನನ್ನು ಇದುವರೆಗೂ ಕೇವಲ ಪಂಡಿತ- ಮೂರ್ಖನೆಂದೇ ತಿಳಿದಿದ್ದ. ಇಂದು ಅವನ ಬಾಯಿಂದ ಇಷ್ಟು ಪರಿಪಕ್ವ ವಾದ ಮಾತನ್ನು ಕೇಳಿ ಅವನಿಗೆ ಅತ್ಯಾಶ್ಚರ್ಯವಾಯಿತು, ಕಾಶೀನಾಥನನ್ನು

ಮನಸಾ ವಂದಿಸದೇ ಇರಲು ಅವನಿಂದಾಗಲಿಲ್ಲ. ಹೀಗೆ ವೃದ್ಧ ಸಚಿವನಿಗೆ ಕಾಶೀನಾಥನ ಜಾಣತನದ ವಿಶೇಷ ಪರಿಚಯವಾಗುತ್ತಲಿತ್ತು ಕಮಲೆಗೆ ಮಾತ್ರ ಕಾಶೀನಾಥನ ಅಜ್ಞತೆಯ ಪರಿಚಯವೇ ಹೆಚ್ಚಾಗತೊಡಗಿತು. ದಿನಕ್ಕೆ ನೂರಾವರ್ತಿ ಅವಳು ತನ್ನನ್ನು ತಾನೇ ಕೇಳಿಕೊಳ್ಳುವಳು—" ಇವರೆಂತಹ ಮನುಷ್ಯರು ? " ಪ್ರತಿಸಲವೂ ಅವಳ ಪ್ರಶ್ನೆಗೆ " ಗೊತ್ತೇ ಆಗುವುದಿಲ್ಲ " ಎಂಬ ಉತ್ತರವೇ ದೊರಕುತ್ತಿತ್ತು

ಎಷ್ಟೇ ಪ್ರಯತ್ನ ಪಟ್ಟರೂ ಕಮಲೆಗೆ " ಇವರೆಂತಹ ಮನುಷ್ಯರು ? " ಎಂಬುದು ತಿಳಿಯಲಿಲ್ಲ ! ಅವನ ಮನಸ್ಸು ಅವನ ಶರೀರದಲ್ಲೇ ಇರುವುದೋ, ಅಥವಾ ಮತ್ತೆಲ್ಲಾದರೂ ಇರುವುದೋ— ಎಂದು ಅವಳು ಯೋಚಿಸತೊಡಗಿದಳು ಆದರೆ ಇಷ್ಟು ಮಾತ್ರ ನಿಜ, ಇತರರು ಏನು ಮಾಡುವರೋ ಅದನ್ನೇ ಅವಳ ಪತಿಯೂ ಮಾಡುವನು— ಎಲ್ಲರಂತೆ ಊಟ ಮಾಡುವನು, ನಿದ್ರಿಸುವನು, ಜಮೀನುದಾರಿಯ ಕೆಲಸವನ್ನು ನೋಡಿಕೊಳ್ಳುವನು, ಸಂಸಾರವನ್ನೂ ನಿರ್ವಹಿಸುವನು, ಎಲ್ಲವನ್ನೂ ಮಾಡುವನು. ಎಲ್ಲ ವಿಷಯಗಳಲ್ಲೂ ಅದೇ ಅಭಿರುಚಿ, ಅದೇ ಉದಾಸೀನತೆ ! ಇಷ್ಟು ದಿನಗಳಾದರೂ ಕಮಲೆ ತನ್ನ ಪತಿಯ ಮನಸ್ಸನ್ನು ಅಳೆಯಲಾರದೆ ಹೋದಳು— ಯಾವ ಕಾರ್ಯದಿಂದ ಅವನ ಮನಸ್ಸಿಗೆ ಸಂತೋಷವೆನಿಸುವುದು, ಯಾವ ವಸ್ತು ಅವನಿಗೆ ಹೆಚ್ಚು ಪ್ರಿಯ— ಎಂಬೀ ವಿಷಯಗಳನ್ನು ಅವಳು ಅರಿಯಲಾರದೆ ಹೋದಳು. ಕಮಲೆ ಎಂದಾದರೂ ಬೇನೆ ಬಿದ್ದಳೆಂದರೆ, ಕಾಶೀನಾಥ ರಾತ್ರಿಯೆಲ್ಲಾ ಅವಳ ಬಳಿಯಲ್ಲಿ ಎಚ್ಚೆತ್ತೇ ಕುಳಿತುಕೊಂಡಿರುತ್ತಿದ್ದ,— ಅವನ ಮುಖವು ಚಿಂತಾಕ್ರಾಂತವಾಗುತ್ತಿತ್ತು, ಹೃದಯದಲ್ಲಿ ಅಗಾದವಾದ ಪ್ರೇಮವೂ ಸ್ನೇಹವೂ ಉಕ್ಕಿ, ಹೊರಸೂಸುತ್ತಿತ್ತು ಅದೇ ಅವಳ ಬೇನೆ ಸ್ವಲ್ಪ ಗುಣಮುಖವಾಗಿ, ಅವಳು ನಡೆದಾಡುವಂತಾದರೆ ಸಾಕು— ಅವಳು ಎದುರಿಗೆ ಬಂದರೂ ಕೂಡ ಕಣ್ಣೆತ್ತಿ ನೋಡುತ್ತಿರಲಿಲ್ಲ, ತನ್ನ ಕೆಲಸದ ಧ್ಯಾನದಲ್ಲಿ ಹೊರಟು ಹೋಗುತ್ತಿದ್ದ ಕಮಲೆ ಎಷ್ಟೋ ಸಲ ಕೋಪ ಮಾಡಿಕೊಂಡು, ನಾಲ್ಕಾರು ದಿನಗಳ ವರೆಗೆ ಮಾತನಾಡದೆ ಇದ್ದು ನೋಡಿದಳು, ಏನೂ ಪ್ರಯೋಜನವಾಗಲಿಲ್ಲ ಕಾಶೀನಾಥ ಕಮಲೆಯ ಬಳಿಗೆ ಬರುತ್ತಿದ್ದ, ಕಮಲೆ ಮಾತನಾಡದೆ ಇದ್ದರೆ ಸುಮ್ಮನೆ ಅಲ್ಲಿಂದ ಹೊರಟು ಹೋಗುತ್ತಿದ್ದ ಅವಳನ್ನು ಸಮಾಧಾನ ಪಡಿಸುತ್ತಲೂ ಇರಲಿಲ್ಲ, ತಾನಾಗಿ ಮಾತನಾಡಿ

ಸುತ್ತಲೂ ಇರಲಿಲ್ಲ ಪುನಃ ಕಮಲೆ ಮಾತನಾಡತೊಡಗಿದರೆ, ತಾನೂ ಎಂದಿನಂತೆ ಮುಗುಳುನಗೆ ಮತ್ತು ಪ್ರಸನ್ನಚಿತ್ತದೊಡನೆ ಮಾತನಾಡುತ್ತಿದ್ದ. ತಾನೆಂದೂ ಕೋಪಮಾಡಿಕೊಳ್ಳುತ್ತಿರಲಿಲ್ಲ, ಅಥವಾ "ಎರಡು ದಿನ ಏತಕ್ಕೆ ಮಾತನಾಡಲಿಲ್ಲ, ಕೋಪವೇ?" ಎಂದೂ ಕೇಳುತ್ತಿರಲಿಲ್ಲ ಆಗ ಕಮಲೆ ಮನಸಿನಲ್ಲೇ ಯೋಚಿಸಿ, ತನ್ನ ಉದಾಸೀನ ಪತಿಗೆ ಹೀಗೆ ಹೇಳಬೇಕೆಂದು ನಿರ್ಧರಿಸಿಕೊಂಡಳು— ನೀವು ನನ್ನನ್ನು ಲಕ್ಷ್ಯಮಾಡದಿದ್ದರೆ, ನಾನೂ ನಿಮ್ಮನ್ನು ಲಕ್ಷ್ಯಮಾಡದೆ ಇರಬಲ್ಲೆ ನೀವು ನನ್ನನ್ನು ಕಾಲಿನಿಂದ ಒದ್ದು ತಳ್ಳುತ್ತಿದ್ದರೆ, ನಾನು ನಿಮ್ಮ ಕಾಲುಗಳನ್ನು ಹಿಡಿದುಕೊಂಡು ಕುಳಿತಿರಲೇಕೆ? ಅಂತೆಯೇ, ಪತಿಯು ಎದುರಿಗೆ ಬಂದಾಗಲೆಲ್ಲಾ ಅವಳು ಬಹಳ ಗಂಭೀರತೆಯೊಡನೆ ಮುಖವನ್ನು ಬೇರೆಕಡೆ ತಿರುಗಿಸಿಕೊಂಡು, ತನ್ನ ಕೆಲಸಕ್ಕಾಗಿ ಹೊರಟು ಹೋಗುತ್ತಿದ್ದಳು "ನಿಮ್ಮಲ್ಲಿ ದಯೆತೋರಿ ನಿಮ್ಮನ್ನು ವಿವಾಹ ಮಾಡಿಕೊಂಡ ಮಾತ್ರಕ್ಕೆ ನನ್ನ ಪ್ರಾಣವೇ ನಿಮ್ಮಲ್ಲಿದೆಯೆಂದು ತಿಳಿದುಕೊಂಡಿರಾ? ಅದಕ್ಕಾಗಿ ನಿಮ್ಮನ್ನು ಕಂಡೊಡನೆಯೇ ಮಧುರ ಮಂದಹಾಸದಿಂದ ಮಾತನಾಡುವೆನೆಂದು ಭಾವಿಸಿರಬಹುದಲ್ಲವೇ? ನನ್ನ ಕೆಲಸದ ವೇಳೆಯಲ್ಲಿ ನೀವು ಎದುರಿಗೆ ಬಂದರೆ, ನಾನೂ ಕಣ್ಣೆತ್ತಿ ನೋಡುವುದಿಲ್ಲ" ಎಂಬುದನ್ನು ಅವನಿಗೆ ತೋರಿಸಬಯಸುವಳೋ ಎಂಬಂತೆ ವರ್ತಿಸತೊಡಗಿದಳು

ಕಮಲೆ ಎಂದಾದರೂ ಮನೆಯ ಆಳುಮಕ್ಕಳನ್ನು ಗದರಿಸುತ್ತಿರುವಾಗ ಅಕಸ್ಮಾತ್ತಾಗಿ ಕಾಶೀನಾಥನ ಬಾಯಿಂದ ಯಾವುದಾದರೊಂದು ಮಾತು ಹೊರಟರೆ, ಅವಳು ಆ ಮಾತಿನಕಡೆ ಗಮನವೇ ಕೊಡುತ್ತಿರಲಿಲ್ಲ "ನನ್ನ ಕೆಲಸದವರು, ನನ್ನ ಆಳುಮಕ್ಕಳು, ನನ್ನ ಮನೆ, ನನಗಿಷ್ಟ ಬಂದಂತೆ ಮಾಡುವೆನು, ಇಷ್ಟಬಂದುದನ್ನು ಹೇಳುವೆನು ಮಧ್ಯಸ್ಥಿಕೆಗೆ ಬರಲು ನೀವಾರು?" ಎಂದು ಹೇಳಲಿಚ್ಛಿಸುವಳೋ ಎಂಬಂತೆ ತನ್ನದೇ ಮಾತನ್ನು ಆಡುತ್ತ ಹೋಗುತ್ತಿದ್ದಳು

ಆದರೆ ಇದೆಲ್ಲದರಿಂದ ಆದ ತೃಪ್ತಿಯಾದರೂ ಏನು? ಕಾಶೀನಾಥ ಯಾವುದಕ್ಕೂ ತಿಲಮಾತ್ರವೂ ಜಗ್ಗಲಿಲ್ಲ ಯಾರೇನು ಮಾಡಿದರೂ ಸರಿಯೆ ಅವನು ತನ್ನ ಪ್ರಶಾಂತ, ಗಂಭೀರ ಮುಖಭಾವದಿಂದ— ತಾನು ನಿಶ್ಚಲನೆಂದೂ, ಸುಮೇರು ಪರ್ವತದ ಶಿಖರದಂತೆ ಅಚಲನೆಂದೂ, ಬಿರುಗಾಳಿ-ಮಳೆ-ಮೋಡಗಳೆಷ್ಟೇ ಬಂದರೂ ತಾನು ಚಲಿಸುವುದಿಲ್ಲವೆಂದೂ ವ್ಯಕ್ತಪಡಿಸುತ್ತಿದ್ದನು

ಹಾಗಿದ್ದರೆ, ಕಮಲೆಗೆ ಅವನಲ್ಲಿ ಪ್ರೇಮವಿಲ್ಲವೇ ? ಇದೆ, ಆದರೆ ಆ ಪ್ರೇಮವು ಅಗಾಧ-- ಅನಂತ ಪ್ರೇಮವಲ್ಲ "ನಾನು ಹಾಕಿದ ಗೆರೆಯನ್ನು ನೀವು ಮೀರಿ ಹೋಗಬಾರದು ಹಾಗೆ ಮಾಡಿದಿರಾದರೆ, ನನ್ನಿಂದ ಸಹಿಸಲಾಗುವುದಿಲ್ಲ ಅಥವಾ ನೀವು ಹಾಗೆ ಮಾಡಿದರೂ, ನಾನು ನಿಮ್ಮನ್ನು ಪ್ರೀತಿಸದೆ ಇರುವುದಿಲ್ಲ, ಆದರೆ ಮಾತ್ರ ನಿಮ್ಮ ಗೌರವ ರಕ್ಷಿಸಲಾರೆ" ಎಂದು ಹೇಳಬಯಸುವಳೋ ಎಂಬಂತಿತ್ತು ಇದು

ಒಂದು ದಿವಸ ಅವಳು ವೃದ್ಧ ದಾಸಿಯ ಮುಂದೆ ತನ್ನ ದುಃಖವನ್ನು ಹೇಳಿಕೊಂಡಳು— " ಅಪ್ಪಾಜಿಯವರು ನನ್ನನ್ನು ಈ ವಿಚಿತ್ರ ಮೃಗದ ಕೈಗೆ ಕೊಟ್ಟು ಹೋದರು ! "

" ಅದೇಕೆ ಹಾಗೆನ್ನುವೆ ? "

" ಅದೇಕೆಂದು ನನ್ನನ್ನು ಕೇಳುವೆಯಾ ? ನೀವೆಲ್ಲರೂ ಸೇರಿ ನನ್ನ ಕೈ-ಕಾಲುಗಳನ್ನು ಕಟ್ಟಿ, ಹಾಳುಬಾವಿಯಲ್ಲಿ ಬಿಸುಟಿದ್ದರೂ ಎಷ್ಟೋ ಚೆನ್ನಾಗಿರುತ್ತಿತ್ತು "

" ಛೀಃ ! ಇಂತಹ ಮಾತನ್ನಾಡಬಾರದು, ಮಗೂ ! "

" ಏಕಾಡಬಾರದು ? ನೀವೆಲ್ಲ ಯಾವ ಕೆಲಸವನ್ನು ಕೈಯಾರ ಮಾಡಿದಿರೋ, ಅದನ್ನು ನಾನು ಒಮ್ಮೆ ಬಾಯಿಂದಲೂ ಹೇಳಬಾರದೇ ? "

" ಇಲ್ಲ, ಇಲ್ಲ, ಹಾಗಲ್ಲ. ಅವರು ಬಹಳ ಒಳ್ಳೆಯ ಮನುಷ್ಯರು ಆದರೆ ಒಂದು ರೀತಿಯಲ್ಲಿ ಸ್ವಲ್ಪ ಹುಚ್ಚರೆಂಬುದು ಮಾತ್ರ ನಿಜ ಅವರ ತಂದೆಯವರೂ ಸ್ವಲ್ಪ ಹುಚ್ಚು, ಆದ್ದರಿಂದಲೇ ಮಗನಿಗೂ "

" ಸಾಕು ಸುಮ್ಮನಿರು ! ಹುಚ್ಚರೆಂಬ ಮಾತನ್ನು ಹೇಳಬೇಡ ತಂದೆ ಹುಚ್ಚರಾದರೆ ಮಗನೂ ಹುಚ್ಚನಾಗುವನೆಂಬುದು ಎಲ್ಲಿಯ ಮಾತು ? ಅವರಿಗೆ ಸ್ವಲ್ಪವೂ ಹುಚ್ಚಿಲ್ಲ ಬೇಕು-ಬೇಕೆಂದೇ ನನ್ನನ್ನು ಪೀಡಿಸುವರು ! "

ಪತಿಯು ಹುಚ್ಚನೆಂದು ಒಪ್ಪಿಕೊಳ್ಳಲು ಕಮಲೆಯ ಮನಸ್ಸಿಗೆ ಬಹಳ ನೋವೆನಿಸಿತು

ಇಂದಿಗೆ ಮೂರು ದಿನಗಳಾದುವು, ಕಾಶೀನಾಥನ ಸುಳಿವೇ ಇಲ್ಲ. ಎರಡು ದಿನಗಳು ಮಾತ್ರ ಕಮಲೆಯು ಬೇಕೆಂದೇ ಸುಮ್ಮನಿದ್ದಳು, ಏನೂ ವಿಚಾರಿಸಲಿಲ್ಲ ಆದರೆ ಮೂರನೆಯ ದಿನ ಅವಳು ಗಾಬರಿಗೊಂಡು ಸೇವಕನಿಗೆ ಕರೆಕಳಿಸಿ, ಚೆನ್ನಾಗಿ ಗದರಿಸಿದಳು—"ಎರಡು ದಿವಸಗಳಿಂದ ಬಾಬೂಜಿಯವರು (ಕಾಶೀನಾಥ) ಮನೆಗೇ ಬಂದಿಲ್ಲ, ನೀವು ಯಾರೂ ವಿಚಾರಿಸಿ ಸಹ

ಇಲ್ಲ. ನೀವೆಲ್ಲಾ ಇರುವುದಾದರೂ ಏತಕ್ಕೆ ? ” ಸೇವಕನು ಮನಸ್ಸಿನಲ್ಲೇ ಯೋಚಿಸಿದ— “ ಭಲಾ ! ಇದೂ ಸರಿಯೆ ! ಯಾರು ಎಲ್ಲಿಗೆ ಹೋದರು, ಯಾರು ಎಲ್ಲಿಗೆ ಬಂದರು ಎಂಬುದನ್ನೆಲ್ಲಾ ನಾವು ವಿಚಾರಿಸಿ ತಿಳಿದುಕೊಳ್ಳಲು ಸಾಧ್ಯವೇ ? ”

ಅನಂತರ ಕೋಶಾಧಿಕಾರಿಯನ್ನು ಕೇಳಲಾಗಿ—ಕುಮಾರಜೀ ಮೂರು ಸಾವಿರ ರೂಪಾಯಿಗಳನ್ನು ತೆಗೆದುಕೊಂಡು ಎಲ್ಲಿಗೋ ಹೊರಟು ಹೋದ ರೆಂದೂ, ಎಲ್ಲಿಗೆ ಹೋದರು, ಯಾವಾಗ ಹಿಂತಿರುಗುವರು ಎಂಬುದನ್ನು ಯಾರೊಡನೆಯೂ ಹೇಳಲಿಲ್ಲವೆಂದೂ ತಿಳಿಯಬಂದಿತು

ಕಮಲೆ ಸ್ವಲ್ಪ ಹೊತ್ತಿನವರೆಗೆ ತಲೆಯ ಮೇಲೆ ಕೈಯಿಟ್ಟು ಸುಮ್ಮನೆ ಕುಳಿತುಬಿಟ್ಟಳು, ಬಳಿಕ ತನ್ನ ತಂದೆಯವರ ವಕೀಲರನ್ನು ಕರೆಸಿ ಹೇಳಿ ದಳು— “ ನಮ್ಮ ಜಮೀನುದಾರಿಯ ಕೆಲಸವೆಲ್ಲವನ್ನೂ ನಿರ್ವಹಿಸುವಷ್ಟು ಯೋಗ್ಯತೆಯುಳ್ಳ ಒಬ್ಬ ಮನುಷ್ಯನನ್ನು ಒಂದು ವಾರದೊಳಗಾಗಿ ದಯ ವಿಟ್ಟು ನೇಮಿಸಿ ಕೊಡಬೇಕು ಅವನು ಕೇಳಿದಷ್ಟು ವೇತನವನ್ನು ಕೊಡಲು ನಾನು ಸಿದ್ಧಳಿರುವೆನು ”

೮

ಇತ್ತ ಕಾಶೀನಾಥ ಕಲಕತ್ತೆಯನ್ನು ಸೇರಿ, ದಿನವೆಲ್ಲಾ ಮಳೆಯಲ್ಲಿ ನೆನೆಯುತ್ತ, ಮೊಣಕಾಲ ವರೆಗಿನ ನೀರು ಮತ್ತು ಕೊಚ್ಚೆಯಲ್ಲಿ ನಡೆಯುತ್ತ, ಹಾಗೂ ಹೀಗೂ ಸಾಯಂಕಾಲದ ಹೊತ್ತಿಗೆ ಒಂದು ಸಣ್ಣ ಓಣಿಯಲ್ಲಿದ್ದ ಸಾಮಾನ್ಯವಾದ ಒಂದಂತಸ್ತಿನ ಮನೆಯೊಂದನ್ನು ತಲುಪಿದ ಅವನ ಕೈಯಲ್ಲಿ ಎರಡು ಸೀಸೆ ಔಷಧಿ, ಒಂದು ಟಿನ್ ಬಿಸ್ಕತ್ತು, ಮತ್ತು ಮೇಲು ಹೊದಿಕೆಯಲ್ಲಿ ಕಾಬೂಲು ದಾಳಿಂಬೆ ಮುಂತಾದ ಹಣ್ಣುಗಳಿದ್ದುವು

ಈ ಮನೆಯ ಒಂದು ಕೋಣೆಯಲ್ಲಿ, ಮಂಚದ ಮೇಲೆ ಒಬ್ಬ ರೋಗಿಯು ಮಲಗಿದ್ದನು ಒಬ್ಬ ಸ್ತ್ರೀಯು ಅವನ ತಲೆಯ ಬಳಿ ಕುಳಿತು, ತಲೆಯ ಮೇಲೆ ಕೈಯಾಡಿಸುತ್ತಿದ್ದಳು ಕಾಶೀನಾಥ ಒಳಕ್ಕೆ ಪ್ರವೇಶಿಸುತ್ತಲೇ

ಅವಳು "ಕಾಶೀ ಅಣ್ಣ! ಇಷ್ಟು ಮಳೆಯಲ್ಲಿ ಏಕೆ ನೆನೆಯುತ್ತ ಬಂದೆ? ಎಲ್ಲಾದರೂ ನಿಂತುಕೊಳ್ಳಬಾರದಾಗಿತ್ತೇ?" ಎಂದಳು

"ಅದು ಹೇಗಾದೀತು, ತಂಗೀ! ನೆನೆಯುತ್ತ ಬಂದಿದ್ದರಿಂದೇನೂ ಹಾನಿಯಾಗಲಿಲ್ಲ, ನಿಂತುಕೊಂಡಿದ್ದರೇ ಹೆಚ್ಚು ತೊಂದರೆಯಾಗುತ್ತಿತ್ತು!"

ಬಿಂದು ಯೋಚಿಸಿ ನೋಡಿದಳು, ಕಾಶೀನಾಥನ ಮಾತು ನಿಜವೇ ಆಗಿತ್ತು ಆದ್ದರಿಂದ ಅವಳು ಸುಮ್ಮನಾದಳು

ಈಗ ಕೆಲವು ವರ್ಷಗಳಿಂದ ಬಿಂದು ಎಷ್ಟು ಕಷ್ಟವನ್ನನುಭವಿಸುತ್ತಿದ್ದಳೆಂಬುದು ಅವಳಿಗೇ ಗೊತ್ತು ನಾವು ಅವಳನ್ನು ನೋಡಿದ್ದು ಅವಳ ತವರು ಮನೆಯಲ್ಲಿ, ಪುನಃ ನೋಡಲಿಲ್ಲ ಆದ್ದರಿಂದ ಈಗ ಅವಳ ವಿಚಾರವನ್ನು ಸ್ವಲ್ಪ ತಿಳಿಯೋಣ ಹಿಂದೆ ಒಂದು ದಿನ ಅವಳು ಜಮೀನುದಾರರ ಮಗಳನ್ನು (ಕಾಶೀನಾಥನ ಹೆಂಡತಿ) ನೋಡಲು ಹೋಗುವುದಕ್ಕೆಂದು ಎಲ್ಲ ಸಿದ್ಧತೆಯನ್ನೂ ಮಾಡಿಕೊಂಡು, ಕಡೆಗೆ ಹೋಗದೆ ಇದ್ದುದು ಓದುಗರಿಗ ನೆನಪಿರಬಹುದು ಅದಕ್ಕೆ ಮರುದಿನವೇ ಅವಳ ಮಾವ ಗೋಪಾಲ ಬಾಬುಗಳಿಗೆ ಬಹಳ ಬೇನೆಯೆಂದು ಸಮಾಚಾರ ಬಂದುದರಿಂದ ಅವಳು ಅತ್ತೆಯ ಮನೆಗೆ ಹೊರಡಬೇಕಾಯಿತು ಬಂದು ನೋಡಲಾಗಿ ಮಾವನವರ ದೇಹ-ಸ್ಥಿತಿ ವಾಸ್ತವವಾಗಿಯೂ ಬಹಳ ಕೇಡುಗೆಟ್ಟಿತ್ತು ಮನೆಯವರೆಲ್ಲರೂ ಯಥಾಶಕ್ತಿ ಚಿಕಿತ್ಸೆಯನ್ನು ನಡೆಸಿದರು, ಆದರೇನು? ಯಾವ ರೀತಿಯಿಂದಲೂ ಅವರನ್ನು ಉಳಿಸಿಕೊಳ್ಳುವ ಭಾಗ್ಯ ಇವರಿಗಿರಲಿಲ್ಲ ರೋಗವು ಮಿತಿಮೀರಿದಾಗ ಒಂದು ದಿವಸ ಗೋಪಾಲ ಬಾಬುಗಳು "ಚಿಕ್ಕ ಸೊಸೆಯನ್ನು ಸ್ವಲ್ಪ ಕರೆಸಿರಿ, ಒಮ್ಮೆ ನೋಡಬೇಕೆನಿಸುವುದು" ಎಂದರು

ಚಿಕ್ಕ ಸೊಸೆಯೇ ನಮ್ಮ ಬಿಂದುವಾಸಿನಿ ಸಾಯುವುದಕ್ಕೆ ಒಂದೆರಡು ದಿನ ಮುಂಚಿತವಾಗಿ ಗೋಪಾಲ ಬಾಬುಗಳು ಬಿಂದುವನ್ನು ಬಳಿಗೆ ಕರೆದು "ಮಗೂ ಇದೋ, ಬೀಗದ ಕೈ ತೆಗೆದುಕೊ, ಆ ಪೆಟ್ಟಿಗೆಯಲ್ಲಿ ಏನಿದೆಯೋ ಎಲ್ಲವನ್ನೂ ನಿನಗೆ ಕೊಟ್ಟಿರುವೆನು!" ಎಂದರು ಬಿಂದು ಕೈ ನೀಡಿ ಬೀಗದ ಕೈಯನ್ನು ತೆಗೆದುಕೊಂಡಳು ಉಳಿದ ಸೊಸೆಯರೆಲ್ಲರೂ ಮನಸ್ಸಿನಲ್ಲೇ "ನೋಡು! ಮುದುಕ ಸಾಯುವಾಗ ಎಲ್ಲವನ್ನೂ ಚಿಕ್ಕ ಸೊಸೆಗೇ ಕೊಟ್ಟು ಹೋದ" ಎಂದುಕೊಂಡರು ಇನ್ನೊಂದು ಸಂಗತಿ— ಗೋಪಾಲ ಬಾಬುಗಳು ಬೇನೆ ಬಿದ್ದಾಗಲೇ ಒಂದು ದಿವಸ ತನ್ನ ನಾಲ್ಕೂ ಮಕ್ಕಳನ್ನು ಬಳಿಗೆ

ಕರೆಸಿ ಹೇಳಿದ್ದರು— “ ಇದೋ ಕೇಳಿರಿ ! ನಿಮ್ಮಲ್ಲಿ ಪರಸ್ಪರ ಒಮ್ಮತವಿಲ್ಲ ಅದೂ ಅಲ್ಲದೆ ನಿಮ್ಮ ತಾಯಿಯೂ ಜೀವಂತಳಾಗಿಲ್ಲ ಆದ್ದರಿಂದ ನಾನು ಹೋದ ಬಳಿಕ ನೀವು ನಾಲ್ಕು ಮಂದಿಯೂ ಒಟ್ಟಿಗೆ ಇರಬೇಡಿ ವ್ಯರ್ಥವಾಗಿ ಜಗಳವಾಡಿ ಬೇರೆಯಾಗುವುದಕ್ಕೆ ಮುಂಚಿತವಾಗಿಯೇ— ಈಗಿರುವ ಅಲ್ಪ ಸ್ವಲ್ಪ ಸ್ನೇಹ-ಸೌಜನ್ಯದೊಡನೆ— ಬೇರೆ ಬೇರೆಯಾಗಿರಿ ನಾನು ಬಿಟ್ಟುಹೋಗುವ ಆಸ್ತಿಯನ್ನು ನಾಲ್ಕು ಮಂದಿಯೂ ಹಂಚಿಕೊಳ್ಳಿ ನಂಗಡಲೇ ನೀವೂ ಸ್ವಲ್ಪ ಸ್ವಲ್ಪ ಸಂಪಾದಿಸಿಕೊಳ್ಳಿ— ಅಂದರೆ ಸುಲಭದಿಂದ ನಿಮ್ಮ ಜೀವನ ನಿರ್ವಾಹವಾಗುವದು ! ”

ತಂದೆಯ ದೇಹಾಂತವಾದ ಬಳಿಕ ನಾಲ್ಕು ಮಂದಿ ಅಣ್ಣತಮ್ಮಂದಿರೂ ಬೇರೆ ಬೇರೆಯಾದರು ಬಿಂದು ಒಂದು ದಿವಸ ಆ ಪೆಟ್ಟಿಗೆಯನ್ನು ತೆಗೆದು ನೋಡಲಾಗಿ, ಅದರಲ್ಲಿ ಒಂದು ‘ ರಾಮಾಯಣ ’, ಒಂದು ‘ ಮಹಾಭಾರತ ’ ದ ಹೊರತು ಮತ್ತೇನೂ ಇರಲಿಲ್ಲ ಬಿಂದುವಿನ ಆಶೆ ನಿರಾಶೆಯಾಯಿತು, ಅಷ್ಟಾದರೂ ಅವಳು ಸ್ವರ್ಗೀಯ ಮಾವನವರ ದಾನವನ್ನು ಶಿರೋಧಾರ್ಯವೆಂದು ಭಾವಿಸಿದಳು, ಮತ್ತು ಅಸ್ಪಷ್ಟ ಸ್ವರದಲ್ಲಿ “ ಇದು ಅವರ ಸ್ನೇಹ-ದಾನ ಇದೇ ನಮಗೆ ರತ್ನ ! ” ಎಂದುಕೊಂಡಳು

ಬಿಂದುವಿನ ಜೀವನದಲ್ಲಿ ಕೆಲವು ದಿನಗಳು ಸುಖದಿಂದ ಕಳೆದುವು ನಂತರ ಒಂದರ ಹಿಂದೊಂದು ಕಷ್ಟ ಬರತೊಡಗಿತು ಅವಳ ಪತಿ ಯೋಗೇಶ ಬಾಬುವು ರೋಗಗ್ರಸ್ತನಾದನು ಅವಳು ತನ್ನ ಶರೀರಾರೋಗ್ಯವನ್ನು ಸಹ ಲೆಕ್ಕಿಸದೆ ಪ್ರಾಣ-ಪಣದಿಂದ ಪತಿಯ ಸೇವೆ-ಶುಶ್ರೂಷೆ ಮಾಡಿದಳು ಜಮೀನನ್ನು ಮಾರಿ, ಬಂದ ಹಣದಿಂದ ಅವನಿಗೆ ಚಿಕಿತ್ಸೆ ನಡೆಸಿದಳು ಆದರೇನು ? ಯಾವುದರಿಂದಲೂ ಅವನ ರೋಗ ಗುಣಮುಖವಾಗಲಿಲ್ಲ ನೆರೆ-ಹೊರೆಯವರೆಲ್ಲಾ “ ಕಲಕತ್ತೆಗೆ ಕರೆದುಕೊಂಡು ಹೋಗಿ ಚಿಕಿತ್ಸೆ ಮಾಡಿಸಬೇಕು ” ಎಂದು ಸಲಹೆಯಿತ್ತರು ಆಗ ಬಿಂದು ತನ್ನ ಬಳಿಯಿದ್ದ ಒಂದೆರಡು ಒಡವೆಗಳನ್ನೂ ಮಾರಿ, ಗಂಡನನ್ನು ಕಲಕತ್ತಗೆ ಕರೆದುಕೊಂಡು ಬಂದಳು ಇಲ್ಲೂ ಕೂಡ ಅನೇಕ ಚಿಕಿತ್ಸೆಗಳು ನಡೆದುವು, ಇದಕ್ಕಾಗಿ ಉಳಿದಿದ್ದ ಸ್ವಲ್ಪ ಜಮೀನನ್ನೂ ವಿಕ್ರಯಿಸಲಾಯಿತು ಆದರೆ ರೋಗ ಮಾತ್ರ ಸ್ವಲ್ಪವೂ ವಾಸಿಯಾಗಲಿಲ್ಲ ಹಣದ ಅಭಾವದ ಕಾರಣದಿಂದ, ಉತ್ತಮ ಚಿಕಿತ್ಸೆಯನ್ನು ನಡೆಸುವುದು ಸಹ ಸಾಧ್ಯವಿಲ್ಲದೆ ಹೋಯಿತು ಬಿಂದು ತನ್ನ ಹಿರಿಯ ಭಾವನಿಗೆ

ಎಲ್ಲ ವಿಷಯವನ್ನೂ ಬರೆದು ತಿಳಿಸಿದಳು, ಆದರೆ ಅದರಿಂದೇನೂ ಪ್ರಯೋಜನವಾಗಲಿಲ್ಲ, ಅವನು ಉತ್ತರ ಕೂಡ ಕೊಡಲಿಲ್ಲ ಆಗ ಬಿಂದುವು ತನ್ನ ಇನ್ನಿಬ್ಬರು ಭಾವಂದಿರಿಗೂ ಪತ್ರ ಬರೆದು, ವಿಷಯವನ್ನು ತಿಳುಹಿದಳು, ಆದರೆ ಅವರೂ ತಮ್ಮ ಹಿರಿಯಣ್ಣನ ಆದರ್ಶವನ್ನೇ ಅನುಸರಿಸಿ, ಮೌನವನ್ನು ಸಾಧಿಸಿದರು ಬಿಂದುವಿಗೆ ದಿಕ್ಕೇ ತೋರದಂತಾಯಿತು ಇನ್ನು ಗತಿಯಾದರೂ ಏನು? ಉಪವಾಸ ಮಾಡಿ ಸಾಯಬೇಕು, ಇಲ್ಲವೆ ವಿಷ ಕುಡಿದು ಪ್ರಾಣ ಬಿಡಬೇಕು ' ಎಂದು ಯೋಚಿಸಿಕೊಂಡಳು

ಯೋಗೇಶ ಬಾಬುವು ಪತ್ನಿಯ ಮುಖ-ಭಾವದಿಂದಲೇ ಅವಳ ಮನಸ್ಸಿನ ಮಾತುಗಳನ್ನು ಗ್ರಹಿಸಿಕೊಳ್ಳುತ್ತಿದ್ದ ಒಂದುದಿನ ಅವನು ಬಿಂದುವನ್ನು ಸಮೀಪಕ್ಕೆ ಕರೆದು, ಬಳಿಯಲ್ಲಿ ಕುಳ್ಳಿರಿಸಿಕೊಂಡು, ಅತ್ಯಂತ ಸ್ನೇಹದಿಂದ ಅವಳ ಕೈಹಿಡಿದುಕೊಂಡು ಹೇಳಿದ— " ಬಿಂದು, ನನ್ನನ್ನು ಊರಿಗೆ ಕರೆದುಕೊಂಡು ನಡ ಹಾಗ ಸಾಯುವುದೇ ಇದ್ದರೆ ಅಲ್ಲೇ ಸಾಯುವೆನು. ಇಲ್ಲಿ ಸತ್ತೆನಾದರೆ, ಎತ್ತಲು ಕೂಡ ಯಾರೂ ಸಿಗುವುದಿಲ್ಲ ! "

ಪತಿಗೆ ಚಿಕಿತ್ಸೆಯನ್ನೂ ನಡೆಸುವಂತಿಲ್ಲ-- ಊರಿಗೂ ಕರೆದುಕೊಂಡು ಹೋಗುವಂತಿಲ್ಲ ಹೀಗಾಗಿ, ಯಾವ ಉಪಾಯವನ್ನೂ ಕಾಣದೆ ಬಿಂದುವಾಸಿನಿಯು " ಇನ್ನು ಸಾಯುವುದೇ ಸರಿ! " ಎಂದು ನಿಶ್ಚಯಿಸಿಕೊಂಡಳು. ಆದರೆ ಪತಿಯನ್ನು ಈ ಪಾಡಿನಲ್ಲಿ ಬಿಟ್ಟು ಸಾಯುವುದಾದರೂ ಹೇಗೆ? ಹಾಗೆ ಸಾಯಬೇಕೆಂದೇ ಇದ್ದರೆ ನಾಚಿಕೆ ಏತಕ್ಕೆ? ದೀರ್ಘವಾಗಿ ಪರ್ಯಾಲೋಚಿಸಿ, ಬಹಳ ಊಹಾಪೋಹ ನಡೆಸಿದ ಬಳಿಕ ಅವಳು ಅಭಿಮಾನ ನಾಚಿಕೆಗಳನ್ನು ಒತ್ತಟ್ಟಿಗಿರಿಸಿ ಕಾಶೀನಾಥನಿಗೆ ಪತ್ರ ಬರೆದು ಎಲ್ಲ ವಿಷಯವನ್ನೂ ತಿಳಿಸಿದಳು ಆ ಬಳಿಕ ನಡೆದ ಘಟನೆ ಓದುಗರಿಗೆ ತಿಳಿದೇ ಇದೆ

ಕಾಶೀನಾಥ ಬರುವಾಗ, ಸಂಗಡ ಸಾಕಷ್ಟು ರೂಪಾಯಿಗಳನ್ನು ತಂದಿದ್ದ ಊರಿನ ಉತ್ತಮೋತ್ತಮ ವೈದ್ಯರನ್ನು ಕೇಳಲಾಗಿ, ಎಲ್ಲರೂ ಹವೆ ಬದಲಿಸಬೇಕೆಂದೇ ಸಲಹೆ ಇತ್ತರು ಅಂತೆಯೇ ಕಾಶೀನಾಥ ಎಲ್ಲರನ್ನೂ ಕರೆದುಕೊಂಡು ವೈದ್ಯನಾಥಕ್ಕೆ ಬಂದ ಎರಡು ತಿಂಗಳ ಕಾಲ ಅಲ್ಲಿರಲಾಯಿತು ಯೋಗೇಶ ಬಾಬುವು ಒಮ್ಮೆಗ ಬದುಕಿದನೆಂದು ಎಲ್ಲರೂ ಹರ್ಷಗೊಂಡರು ಆದರೆ ಇನ್ನೂ ಕೆಲವು ದಿವಸಗಳು ಅಲ್ಲೇ ಇರಬೇಕಾಗಿತ್ತು, ಆದ್ದರಿಂದ ಕಾಶೀನಾಥ ಅವರನ್ನು ಅಲ್ಲೇ ಬಿಟ್ಟು, ತಾನು ಊರಿಗೆ —ಮನೆಗೆ— ಹಿಂತಿರುಗಿದ

ಬೆಳಗಾಗುತ್ತಲೇ ಕಮಲೆಯ ಬೆಟ್ಟಿಯಾದಾಗ, ಅವಳು " ಯಾವಾಗ ಬಂದಿರಿ ? " ಎಂದು ಕೇಳಿದಳು

" ರಾತ್ರಿ ಬಂದೆ "

ಕಮಲೆ ತನ್ನ ಕೆಲಸಕ್ಕೆಂದು ಹೊರಟು ಹೋದಳು ಕಾಶೀನಾಥ ಮನೆಯಿಂದ ಹೊರಟು ಕಚೇರಿಗೆ ಬಂದ ಅನೇಕ ದಿನಗಳ ನಂತರ ಅಕಸ್ಮಾತ್ತಾಗಿ ಬಾಬೂಜೀಯನ್ನು ( ಕಾಶೀನಾಥನನ್ನು ) ಕಂಡು, ಕೆಲಸದವರೆಲ್ಲರೂ ಒಟ್ಟಿಗೆ ಎದ್ದು ನಿಂತರು ಆದರೆ ಹ್ಯಾಟ್-ಬೂಟುಗಳನ್ನು ಧರಿಸಿದ್ದ ಒಬ್ಬ ಯುವಕನು ಮಾತ್ರ ತನ್ನ ಕೆಲಸದಲ್ಲಿ ಮಗ್ನನಾಗಿ ಕುರ್ಚಿಯ ಮೇಲೆ ಕುಳಿತೇ ಇದ್ದ ಓರ್ವ ಆಗಂತುಕನಿಗೆ ತನ್ನ ಕಾರ್ಯಕರ್ತರು ತೋರಿಸಿದ ಸನ್ಮಾನ ಬಹುಶಃ ಈ ಹೊಸ ಅಡಳಿತಗಾರನಿಗ ತಿಳಿಯಲಿಲ್ಲವೆಂದು ತೋರುವುದು ಕಾಶೀನಾಥ ತಾನೇ ಒಂದು ಸುಖಾಸನವನ್ನು ಬಳಿಗೆಳೆದುಕೊಂಡು, ಅದರ ಮೇಲೆ ಕುಳಿತುಕೊಂಡ ಹೊಸ ಆಡಳಿತಗಾರನ ಹೆಸರು ವಿಜಯ ಕಿಶೋರದಾಸ್ ಕಲಕತ್ತಯಲ್ಲಿ ಬಿ ಎ ಪಾಸು ಮಾಡಿದ್ದ ಅಲ್ಲದೆ ಒಳ್ಳೆಯ ಕಾರ್ಯದಕ್ಷತೆಯನ್ನೂ ಪಡೆದಿದ್ದ ಆದ್ದರಿಂದಲೇ ವಕೀಲ ವಿನೋದ ಬಾಬುಗಳು ಅವನನ್ನು ಆಡಳಿತಗಾರನ ಸ್ಥಾನದಲ್ಲಿ ನೇಮಿಸಿದ್ದರು ಆಡಳಿತಗಾರನು ಬಹಳ ಹೊತ್ತಿನ ನಂತರ ಕಾಶೀನಾಥನ ಕಡೆ ನೋಡಿ " ನೀವು ಯಾವುದಾದರೂ ಕೆಲಸಕ್ಕಾಗಿ ಬಂದಿರುವಿರಾ ? " ಎಂದು ಕೇಳಿದ

" ಇಲ್ಲ, ಏನೂ ಕೆಲಸವಿಲ್ಲ ಕೆಲಸ ಕಾರ್ಯಗಳು ಹೇಗೆ ನಡೆಯುತ್ತಿವೆಯೆಂದು ನೋಡಿಕೊಂಡು ಹೋಗಲು ಬಂದೆ "

ಆಗ ಸಚಿವನು ಎದ್ದು ನಿಂತು " ಇವರೇ ನಮ್ಮ ಅಳಿಯ ಸಾಹೇಬರು ! " ಎಂದನು

ವಿಜಯ ಬಾಬು ಎದ್ದು, ಕಾಶೀನಾಥನೊಡನೆ ಪ್ರೀತಿಯಿಂದ ಸಂಭಾಷಿಸಿದನು ಅಷ್ಟರಲ್ಲಿ ಒಬ್ಬ ಸೇವಕನು ಬಂದು " ಯಜಮಾನಿಯವರು ನಿಮ್ಮನ್ನು ಕೂಗುತ್ತಿರುವರು " ಎಂದು ಹೇಳಿದ ವಿಜಯ ಬಾಬು ಹೊರಟು ಹೋದ ಬಳಿಕ ಕಾಶೀನಾಥ ಸಚಿವನನ್ನು ಕುರಿತು " ಇವರಾರು ? " ಎಂದು ಕೇಳಿದ

" ಹೊಸ ಆಡಳಿತಗಾರರು "

" ಯಾರು ನೇಮಿಸಿದರು ? "

" ಯಜಮಾನಿಯವರು "

" ಏಕೆ ? "

" ಕೆಲಸ-ಕಾರ್ಯಗಳು ಸರಿಯಾಗಿ ನಡೆಯುತ್ತಿರಲಿಲ್ಲ, ಅದಕ್ಕೋಸ್ಕರ ಇರಬಹುದು "

" ಈಗ ಎಲ್ಲಿ ಹೋದರು ? "

" ಒಳಗಡೆ ಕೋಣೆಗೆ "

ಕಾಶೀನಾಥ ಮತ್ತೇನೂ ಕೇಳದೆ, ಅಲ್ಲಿಂದ ಒಳಕ್ಕೆ ಹೊರಟು ಹೋದ. ಒಳಗಡೆ ಒಂದು ಕೋಣೆಯಲ್ಲಿ ತೆರೆಯಿಂದೀಚೆಗೆ ವಿಜಯ ಬಾಬು ನಿಂತಿದ್ದ, ತೆರೆಯೊಳಗಡೆಯಿಂದ ಯಾರೋ ಮೃದು ಧ್ವನಿಯಲ್ಲಿ ಮಾತನಾಡುತ್ತಿದ್ದರು ಮಾತನಾಡುತ್ತಿದ್ದವರು ಯಾರೆಂಬುದು ಕಾಶೀನಾಥನಿಗೆ ತಿಳಿದುಹೋಯಿತು, ಆದರೆ ಅವನು ಏನೂ ಹೇಳದೆ, ಆ ಕಡೆ ಕಣ್ಣೆತ್ತಿ ಕೂಡ ನೋಡದೆ ಸುಮ್ಮನೆ ಹೊರಟುಹೋದ ಮಧ್ಯಾಹ್ನ ಪುನಃ ಅವನಿಗ ಕಮಲಯ ಬೆಟ್ಟಿಯಾಯಿತು ಕಮಲೆ ಅತ್ಯಂತ ಗಂಭೀರತೆಯೊಡನೆ " ದೇಹಸ್ಥಿತಿ ಸರಿಯಾಗಿದೆಯಷ್ಟೆ ? " ಎಂದು ಕೇಳಿದಳು ಕಾಶೀನಾಥನೂ ಅಷ್ಟೇ ಗಂಭೀರತೆಯೊಡನೆ ತಲೆ ಯಲ್ಲಾಡಿಸಿ " ಸರಿಯಾಗಿದೆ " ಎಂದ ಕಮಲೆ ಪುನಃ ಏನೂ ಕೇಳಲಿಲ್ಲ, ಅಲ್ಲಿಂದ ಹೊರಟು ಹೋದಳು ಪಾಪ, ನಿಂತುಕೊಂಡು ಹರಟೆ ಹೊಡೆಯು ವಷ್ಟು ಸಮಯವಾದರೂ ಅವಳಿಗಲ್ಲಿಯದು ? ಸಾವಿರಾರು ಕೆಲಸಗಳು ಬಿದ್ದಿವೆ ಅದೂ ಅಲ್ಲದೆ ಜಮೀನುದಾರಿಯ ಭಾರವನ್ನು ಬೇರೆ ವಹಿಸಿ ಕೊಂಡಿರುವುದರಿಂದ ಅವಳಿಗೆ ಉಸಿರಾಡಲು ಸಹ ಪುರಸತ್ತಿಲ್ಲ ಒಂದು ದಿನ ಬೆಳಿಗ್ಗೆ ಕಾಶೀನಾಥ ಹೊಸ ಆಡಳಿತಗಾರನನ್ನು ಕರೆಯ ಕಳುಹಿದ ಅವನು ಸೇವಕನ ಸಂಗಡ " ಈಗ ಪುರಸತ್ತಿಲ್ಲ, ಪುರಸತ್ತಾದೊಡನೆಯೇ ಬರುವೆ ನೆಂದು ಹೇಳು ! " ಎಂದು ಹೇಳಿ ಕಳುಹಿದ ಆಗ ಕಾಶೀನಾಥ ತಾನೇ ಕಚೇರಿಗೆ ಹೋಗಿ, ವಿಜಯ ಬಾಬುವನ್ನು ಬೇರೆ ಕರೆದು " ನಿಮಗೆ ಪುರ ಸತ್ತಿರಲಿಲ್ಲ, ಆದ್ದರಿಂದ ನಾನೇ ಬಂದಿರುವೆನು ಈ ದಿವಸ ನನಗೆ ಐನೂರು ರೂಪಾಯಿಗಳು ಬೇಕಾಗಿವೆ ಪುರಸತ್ತಾದೊಡನೆಯೇ ಕಳುಹಿಸಿ ಕೊಡಿರಿ !" ಎಂದು ಹೇಳಿದ.

" ಏತಕ್ಕೋಸ್ಕರ ? "

" ಅದನ್ನು ನೀವು ತಿಳಿಯಬೇಕಾದ ಆವಶ್ಯಕತೆ ಇಲ್ಲ "

“ ಹಾಗೆಂದೇ ಭಾವಿಸಿದರೂ, ಯಜಮಾನಿಯವರ ಅಪ್ಪಣೆ ಇಲ್ಲದೆ ನಾನು ಹೇಗೆ ಕೊಡಲಿ ? ”

ಏನೋ ಬದಲಾವಣೆ ನಡೆದಿದೆಯೆಂದು ಕಾಶೀನಾಥ ತಿಳಿದುಕೊಂಡ. ಅವನು ಕೇಳಿದ—“ ನಾನು ಹೇಳುತ್ತಿರುವುದು ಸಾಲದೇ ? ಇದಕ್ಕೆ ಇನ್ನೊಬ್ಬರ ಅಪ್ಪಣೆಯ ಅವಶ್ಯಕತೆ ಏನು ? ”

ವಿಜಯ ಬಾಬು ದೃಢತೆಯಿಂದ “ ಆವಶ್ಯಕತೆ ಇದೆ ಕೇಳಿದವರಿಗೆಲ್ಲಾ ದುಡ್ಡು ಕೊಡಕೂಡದೆಂದು ಆಜ್ಞೆಯಾಗಿದೆ” ಎಂದ

ಆಗ ಕಾಶೀನಾಥ ಕಮಲೆಯ ಬಳಿಗೆ ಬಂದು “ ಆ ಹೊಸಬನನ್ನು ತೆಗೆದು ಹಾಕು ! ”

“ ಯಾರನ್ನು ? ”

“ ಹೊಸ ಆಡಳಿತಗಾರನಾಗಿ ಬಂದಿಲ್ಲವೆ ? ಅವನನ್ನು ”

“ ಏಕೆ ? ಅವನೇನು ಅಪರಾಧ ಮಾಡಿದ ? ”

“ ನನ್ನೊಡನೆ ಸರಿಯಾಗಿ ವ್ಯವಹರಿಸಲಿಲ್ಲ ”

“ ಏಕೆ ? ಏನು ಮಾಡಿದ ? ”

“ ನಾನು ಹೇಳಿ ಕಳುಹಿಸಿದರೆ, ಈಗ ಪುರಸತ್ತಿಲ್ಲ, ಪುರಸತ್ತಾದಾಗ ಬರುವೆನು ಎಂದು ಹೇಳಿ ಕಳುಹಿಸಿದ ”

ಕಮಲೆ ನಗುತ್ತ “ ಬಹುಶಃ ಪುರಸತ್ತಿರಲಾರದು ಎಂದಮೇಲೆ ಬರುವನಾದರೂ ಹೇಗೆ ? ”

“ ಪುರಸತ್ತಿರಲಿಲ್ಲ, ಆದ್ದರಿಂದ ಬರಲಿಲ್ಲವೆಂದೇ ಭಾವಿಸೋಣ ! ಆದರೆ ನಾನೇ ಸ್ವತಃ ಹೋಗಿ ರೂಪಾಯಿಗಳನ್ನು ಕೇಳಿದರ ಕೊಡುವುದಕ್ಕೇನು ? ಯಜಮಾನಿಯವರ ಆಜ್ಞೆ ಇಲ್ಲದೆ ಕೊಡುವುದಿಲ್ಲ” ಎಂದು ಹೇಳಿದ

ಕಮಲೆ ಮತ್ತಷ್ಟೂ ಮಧುರ ಮಂದಹಾಸವನ್ನು ಬೀರುತ್ತ “ ಎಷ್ಟು ರೂಪಾಯಿಗಳನ್ನು ಕೇಳಿದಿರಿ ? ”

“ ಐನೂರು ”

“ ಕೊಡಲಿಲ್ಲವೇ ? ”

“ ಇಲ್ಲ ಅದಿರಲಿ, ನೀನು ನನಗೆ ರೂಪಾಯಿಗಳನ್ನು ಕೊಡಬಾರದೆಂದು ಆಜ್ಞೆ ಮಾಡಿರುವೆಯಾ ? ”

" ಹೌದು ಈ ರೀತಿ ರೂಪಾಯಿಗಳನ್ನು ಹಾಳುಮಾಡುವುದು ನನ-
ಗಿಷ್ಟವಿಲ್ಲ "

ಈ ಮಾತನ್ನು ಕೇಳಿ ಕಾಶೀನಾಥನಿಗೆ—ಕಲ್ಲುಹೃದಯದ ಕಾಶೀನಾಥ
ನಾದರೂ—ಬಹಳ ದುಃಖವಾಯಿತು ಕಮಲೆಯ ಈ ಪರಿಯ ವರ್ತನೆ
ಯನ್ನಾಗಲಿ, ಈ ರೀತಿಯ ಮಾತನ್ನಾಗಲಿ ಅವನು ಹಿಂದೆ ಎಂದೂ ಕೇಳಿರ
ಲಿಲ್ಲ ಅತ್ಯಂತ ವ್ಯಥಿತನಾಗಿ ಅವನು " ನನಗೆ ರೂಪಾಯಿಗಳನ್ನು ಕೊಟ್ಟರೆ
ಹಾಳು ಮಾಡಿದಂತಾಗುವುದೆ ? " ಎಂದು ಕೇಳಿದ

" ಯಾವ ರೀತಿಯಿಂದಲೇ ಆಗಲಿ ರೂಪಾಯಿಗಳನ್ನು ನಷ್ಟಮಾಡು-
ವುದಕ್ಕೇ ಹಾಳು ಮಾಡುವುದೆಂದು ಹೆಸರು "

" ಆವಶ್ಯಕತೆ ಇದ್ದು ಖರ್ಚುಮಾಡಿದರೆ, ಅದನ್ನು ಹಾಳುಮಾಡುವು-
ದೆಂದು ಹೇಗೆ ಹೇಳುವೆ ? "

" ಯಾವ ಆವಶ್ಯಕತೆ ? "

" ಯಾರಿಗೋ ಕೊಡಬೇಕು "

" ಕೊಡಬೇಕೆಂಬುದು ಸರಿಯೆ, ಆದರೆ ಸಿಗಬೇಕೆಲ್ಲಿಂದ ? ನಿಮ್ಮ
ಬಳಿಯಲ್ಲಿದ್ದರೆ ಧಾರಾಳವಾಗಿ ಕೊಡಿರಿ, ನಾನೇನೂ ಬೇಡವೆನ್ನುವುದಿಲ್ಲ "

ಕಾಶೀನಾಥ ಮತ್ತೇನೂ ಹೇಳದೆ ಸುಮ್ಮನಾಗಿ ಹೋದ ಕಮಲೆಯ
ಈ ಮಾತುಗಳು ಶೂಲದಂತೆ ಅವನ ಹೃದಯವನ್ನಿರಿದುವು ಅವನು ಆ ಕ್ಷಣ
ಹೊರಕ್ಕೆ ಹೋಗಿ, ತನ್ನ ಕೈಯಲ್ಲಿದ್ದ ಗಡಿಯಾರ-ಉಂಗುರಗಳನ್ನು ಮಾರಿ,
ಐನೂರು ರೂಪಾಯಿಗಳನ್ನು ವೈದ್ಯನಾಥಕ್ಕೆ ಕಳುಹಿಸಿಕೊಟ್ಟ, ಮತ್ತು ಮನಿ
ಆರ್ಡರ್ ಫಾರ್ಮಿನಲ್ಲಿ " ಇನ್ನು ನನ್ನನ್ನು ಕೇಳಬೇಡ ತಂಗಿ, ನನ್ನ ಬಳಿ
ಏನೂ ಉಳಿದಿಲ್ಲ ! " ಎಂದು ಬರೆದು ಬಿಟ್ಟ

ಅಂದಿನಿಂದ ಕಾಶೀನಾಥ ಪುನಃ ಒಳಕ್ಕೆ ಬರಲಿಲ್ಲ, ಕಮಲೆಯೂ
ಏತಕ್ಕೆಂದು ವಿಚಾರಿಸಲಿಲ್ಲ ಹೀಗೆಯೇ ಅನೇಕ ದಿನಗಳು ಕಳೆದುಹೋದುವು
ಒಂದು ದಿವಸ ಸೇವಕನು ಕಾಶೀನಾಥನ ಬಳಿಗೆ ಬಂದು " ಒಬ್ಬ ಬ್ರಾಹ್ಮ-
ಣರು ತಮ್ಮನ್ನು ಕಾಣಬೇಕೆಂದು ಬಂದಿರುವರು " ಎಂದು ಹೇಳಿದ

ಮರುಕ್ಷಣವೇ ಕಾಶೀನಾಥ ತಲೆಯೆತ್ತಿ ನೋಡಲಾಗಿ, ಜನಿವಾರವನ್ನು
ಕೈಯಲ್ಲಿ ಹಿಡಿದುಕೊಂಡು ಒಬ್ಬ ಬ್ರಾಹ್ಮಣನು ಎದುರಿಗೆ ನಿಂತಿದ್ದ ಕಾಶೀ
ನಾಥನಿಗೆ ಅಚ್ಚರಿಯಾಯಿತು ಆ ಬ್ರಾಹ್ಮಣನು " ಸ್ವಾಮಿ ! ತಾವು

ಮಹಾನುಭಾವರು ಬ್ರಾಹ್ಮಣನ ಸರ್ವಸ್ವವನ್ನೂ ಅಪಹರಿಸಬೇಡಿ!" ಎಂದ

ಕಾಶೀನಾಥ ಆಶ್ಚರ್ಯ-ಭಯಗಳಿಂದ ಕೂಡಿದ ಧ್ವನಿಯಲ್ಲಿ ಕೇಳಿದ- "ಏಕೆ? ಏನಾಯಿತು?"

ಆಗ ಆ ಬ್ರಾಹ್ಮಣನು "ಸ್ವಾಮೀ! ಪರಮಾತ್ಮನು ನಿಮಗೆ ಬೇಕಾದಷ್ಟು ಕೊಟ್ಟಿರುವನು ಅಷ್ಟು ಜಮೀನಿನ ಹೊರತು ನನ್ನ ಬಳಿ ಬೇರೆ ಏನೇನೂ ಇಲ್ಲ, ಅದನ್ನು ಕಿತ್ತುಕೊಳ್ಳಬೇಡಿ, ಮಹಾಸ್ವಾಮೀ!" ಎಂದು ಹೇಳುತ್ತ ಅಳಲಾರಂಭಿಸಿದ

ಕಾಶೀನಾಥ ದಿಗ್ಭ್ರಾಂತನಾದ ಆ ಬ್ರಾಹ್ಮಣನನ್ನು ಕೈಹಿಡಿದು, ಬಳಿಯಲ್ಲಿ ಕುಳ್ಳಿರಿಸಿಕೊಂಡು ಕೇಳಿದ—"ಎಲ್ಲ ಸಂಗತಿಯನ್ನೂ ಸ್ಪಷ್ಟವಾಗಿ ತಿಳಿಸಿ"

ಬ್ರಾಹ್ಮಣನು ಅಳುತ್ತಳುತ್ತ "ಎಷ್ಟೇ ಆಗಲಿ, ತಾವು ಧರ್ಮಾತ್ಮರು ಕ್ಷೇತ್ರಪಾಲದ ಜಮೀನು ನನ್ನದಲ್ಲವೆಂದು ಶಪಥ ಮಾಡಿ ಹೇಳಿಬಿಡಿರಿ!" ಎಂದ

"ನಿಮ್ಮದಲ್ಲವೆಂದು ಯಾರು ಹೇಳುವರು?"

"ಹಾಗಿದ್ದರೆ ವಿಜಯ ಬಾಬುಗಳು-ನಿಮ್ಮ ಹೊಸ ಆಡಳಿತಗಾರರು-ನನ್ನ ಮೇಲೆ ವ್ಯಾಜ್ಯಹೂಡಿದರೇಕೆ?"

"ವ್ಯಾಜ್ಯಹೂಡಿರುವರೇ? ನನಗೆ ಆ ವಿಷಯ ಗೊತ್ತಿಲ್ಲ"

ಸಮನ್ಸನ್ನು ತೋರಿಸಿ ಬ್ರಾಹ್ಮಣ ಹೇಳಿದ—"ನನ್ನ ಮೇಲೆ ಅವರು ಮೊಕದ್ದಮೆ ಹೂಡಿರುವಾಗ, ನಾನೂ ಅವರ ಮೇಲೆ ಮೊಕದ್ದಮೆ ಹೂಡುವೆನು, ಮತ್ತು ತಮ್ಮನ್ನು ಸಾಕ್ಷಿಯಾಗಿ ತಗದುಕೊಳ್ಳುವೆನು ನಾನು ಬಡವ, ತಮ್ಮೊಡನೆ ಜಗಳವಾಡುವುದು ನನಗೆ ಉಚಿತವಲ್ಲ, ಆದರೆ ನಾನು ಭಿಕ್ಷುಕನಿದ್ದೇನೆಂದು ನನ್ನ ಆಸ್ತಿಯ ಅಪಹರಣವನ್ನು ಸುಮ್ಮನಿದ್ದು ಸಹಿಸುವವನಲ್ಲ"

ಬ್ರಾಹ್ಮಣ ಕ್ರುದ್ಧನಾಗಿ ಅಲ್ಲಿಂದ ಎದ್ದು ಹೊರಟ ಅಷ್ಟರಲ್ಲಿ ಕಾಶೀನಾಥ ಎದ್ದು, ಅವನನ್ನು ಕೈ ಹಿಡಿದು ಕುಳ್ಳಿರಿಸಿ "ನಿಮಗೆ ಒಳ್ಳೆಯದನ್ನು ಮಾಡಲು ನಾನು ಪ್ರಯತ್ನಿಸುವೆನು ಅದಕ್ಕೂ ಮೇಲಾಗಿ ನಿಮಗಿಷ್ಟ ಬಂದಂತೆ ಮಾಡಿ!" ಎಂದ

ಕಾಶೀನಾಥ ಬ್ರಾಹ್ಮಣನನ್ನು ಕಳುಹಿಸಿದ ನಂತರ ವಿಜಯ ಬಾಬು ವನ್ನು ಕರೆದು "ಆ ಜಮೀನು ನಮ್ಮದಲ್ಲ, ಅಷ್ಟಾಗಿಯೂ ಆ ಬ್ರಾಹ್ಮಣ ನನ್ನು ವ್ಯರ್ಥವಾಗಿ ಕಾಡುತ್ತಿರುವಿರೇಕೆ?"

"ಯಜಮಾನಿಯವರ ಆಜ್ಞೆ!"

ಕಾಶೀನಾಥ ಕ್ರೋಧದಿಂದ "ಯಜಮಾನಿಯವರು ನಿಮಗೆ ಇತರರ ಸ್ವತ್ತು ಅಪಹರಿಸ ಹೇಳಿರುವರೆ?"

"ಅದು ನಮ್ಮ ಸ್ವತ್ತು"

"ಅಲ್ಲ, ನಮ್ಮದಲ್ಲ"

ವಿಜಯ ಬಾಬು ಸ್ವಲ್ಪಹೊತ್ತು ಸುಮ್ಮನಿದ್ದು, ಅನಂತರ "ನಾನು ಅವರ ಕೈಕೆಳಗಿನ ಸೇವಕ ಅವರ ಆಜ್ಞೆಯಾದಂತೆ ಮಾಡಿದೆನು, ಮಾಡು ವೆನು" ಎಂದ

ಈ ವಿಷಯವನ್ನು ಕಮಲೆಗೆ ತಿಳುಹಿಸಲು ಕಾಶೀನಾಥನಿಗೆ ಸಂಕೋಚ ವೆನಿಸುತ್ತಿತ್ತು ಅಷ್ಟಾದರೂ ಅವನು ಅವಳಿಗೆ "ಆ ಜಮೀನು ನಿನ್ನದಲ್ಲ. ಬ್ರಾಹ್ಮಣನ ಬ್ರಹ್ಮಸ್ವವನ್ನು ಅಪಹರಿಸಬೇಡ!" ಎಂದ

"ಅಪಹರಿಸುವೆನೆಂದು ಯಾರು ಹೇಳಿದರು?"

"ಯಾರು ಹೇಳಿದರೇನು? ಅಂತೂ ಆ ಜಮೀನು ನಮ್ಮದಲ್ಲ ಸುಳ್ಳು-ಸುಳ್ಳು ವ್ಯಾಜ್ಯ ಹೂಡಬೇಡವೆಂದು ವಿಜಯ ಬಾಬುವಿಗೆ ತಿಳಿಸು!"

ಕಮಲೆ ಅಸಮಾಧಾನಪಟ್ಟು "ವಿಜಯ ಬಾಬು ಕಾರ್ಯಜ್ಞ. ಅವರಿಗೆ ತಮ್ಮ ಕೆಲಸ ಗೊತ್ತು ಅವರ ಕೆಲಸದಲ್ಲಿ ನೀವು ಅಡ್ಡಿ ಬರಬೇಕಾದ ಅವಶ್ಯಕತೆ ಇಲ್ಲ" ಎಂದಳು

ಅನೇಕ ದಿನಗಳ ಬಳಿಕ, ಮೊಕದ್ದಮೆಯು ನ್ಯಾಯಾಧಿಪತಿಯ ಮುಂದೆ ಬಂತು ಕಾಶೀನಾಥನು ಸಾಕ್ಷಿಯ ಸ್ಥಾನದಲ್ಲಿ ನಿಂತು, 'ನಮ್ಮ ಮಾವಂದಿರಾದ ಸ್ವರ್ಗೀಯ ಪ್ರಿಯನಾಥ ಬಾಬುಗಳ ಕಾಲದಿಂದಲೂ ನಾನು ಜಮೀನು ದಾರಿಯ ಕೆಲಸವನ್ನು ನೋಡಿಕೊಳ್ಳುತ್ತ ಬಂದಿದ್ದೇನೆ ಅವರು ತೀರಿಹೋದ ಬಳಿಕಲೂ ಎಷ್ಟೋ ದಿನಗಳವರೆಗೆ ಕಾರ್ಯವನ್ನು ನಿರ್ವಹಿಸಿದ್ದೇನೆ ಆದ್ದರಿಂದ ಆ ಜಮೀನು ಕಮಲಾದೇವಿಯದಲ್ಲವೆಂಬುದನ್ನು ನಾನು ಚೆನ್ನಾಗಿ ಬಲ್ಲೆ!" ಎಂದು ಹೇಳಿದ

ವಿಜಯ ಬಾಬು ಮೊಕದ್ದಮೆಯಲ್ಲಿ ಸೋತು, ಪೆಚ್ಚುಮೋರೆ ಹಾಕಿ

ಕೊಂಡು ಮನೆಗೆ ಬಂದ ಅತ್ತ ಪ್ರತಿವಾದಿ ತನ್ನ ಎರಡೂ ಕೈಗಳನ್ನೆತ್ತಿ ಕಾಶೀನಾಥನನ್ನು ಆಶೀರ್ವದಿಸಿ ಮನೆಗೆ ಹೊರಟ

೬

ವಿಜಯ ಬಾಬು ತೆರೆಯ ಎದುರಿನಲ್ಲಿ ನಿಂತು, ವ್ಯಾಜ್ಯದ ತೀರ್ಪನ್ನು ವಿಶದವಾಗಿ ವಿವರಿಸಿದ ಕಡೆಗೆ ಆ ವಿಚಾರವಾಗಿ ತನ್ನ ಟೀಕೆ-ಟಿಪ್ಪಣಿ ಹಾಗೂ ಅಭಿಪ್ರಾಯವನ್ನು ವ್ಯಕ್ತಗೊಳಿಸುತ್ತ ಹೇಳಿದ — "ಕೇವಲ ಕುಮಾರ ಸಾಹೇಬರ ಕಾರಣದಿಂದ ನಮಗೆ ಸೋಲಾಯಿತು " ಇದನ್ನು ಕೇಳಿ ಕಮಲೆಗೆ ಸಿಟ್ಟು ತಡೆಯಲಾಗಲಿಲ್ಲ ಬಹಳ ಹೊತ್ತಿನ ನಂತರ ಕಮಲೆ ತೆರೆಯ ಒಳಗಿಂದಲೇ "ನೀವು ಒಳಕ್ಕೆ ಬನ್ನಿ ಸ್ವಲ್ಪ ಮಾತನಾಡಬೇಕಾಗಿದೆ" ಎಂದು ಕರೆದಳು ವಿಜಯ ಬಾಬು ಒಳಕ್ಕೆ ಪ್ರವೇಶಿಸಿದ ಇಬ್ಬರೂ ಬಹಳ ಹೊತ್ತಿನ ವರೆಗೆ ಏನೋ ಮೆಲ್ಲಮೆಲ್ಲನೆ ಮಾತನಾಡುತ್ತಿದ್ದರು ಆ ಬಳಿಕ ವಿಜಯ ಬಾಬು ಹೊರಕ್ಕೆ ಬಂದ

ಇಂದು—ಎಷ್ಟೋ ದಿನಗಳ ನಂತರ— ಕಾಶೀನಾಥನ ಊಟದ ಸಮಯದಲ್ಲಿ ಕಮಲ ಅವನ ಬಳಿ ಬಂದು ಕುಳಿತಳು ಈಗ ಅವಳು ಮೊದಲಿನಂತೆ ಉಗ್ರಮೂರ್ತಿಯಾಗಿರಲಿಲ್ಲ, ಅತ್ಯಂತ ಶಾಂತ ಹಾಗೂ ಸ್ತಬ್ಧಳಾಗಿದ್ದಳು ಸ್ವಲ್ಪ ಹೊತ್ತಿನ ನಂತರ ಕಮಲೆ "ಬಂಧುದ್ರೋಹಿ ವಿಭೀಷಣನ ಕಾರಣದಿಂದ ಚಿನ್ನದಂತಹ ಲಂಕೆಯೂ ಭಸ್ಮವಾಗಿ ಹೋಯಿತು ಗೊತ್ತೇ?" ಎಂದು ಕೇಳಿದಳು ಊಟ ಮಾಡುತ್ತಿದ್ದಂತೆಯೇ ಕಾಶೀನಾಥ "ಗೊತ್ತು!" ಎಂದ

"ಪಾಪ! ಹೇಗೆ ಗೊತ್ತಿಲ್ಲದೆ ಇರಬೇಕು? ಅವನೂ ಪರಾನ್ನವನ್ನುಂಡೇ ಬೆಳೆದವನಲ್ಲವೇ ? "

ಕಾಶೀನಾಥ ಏನೂ ಉತ್ತರ ಕೊಡದೆ ಸುಮ್ಮನಿದ್ದ.

ಕಮಲೆ ತುಸು ಹೊತ್ತು ಮೌನದಿಂದಿದ್ದು, ಬಳಿಕ ಹೇಳಿದಳು— "ಪರಾನ್ನವನ್ನುಂಡು ಇಷ್ಟು ದೊಡ್ಡವರಾಗಿರುವವರಿಗೆ, ಪರಾನ್ನವಿಲ್ಲದಿದ್ದರೆ ಉಪವಾಸಬಿದ್ದೇ ಸಾಯಬೇಕಾದ ಗತಿ ಬಂದಿರುವವರಿಗೆ, ಸತ್ಯವನ್ನೇ ನುಡಿಯಬೇಕೆಂಬ ಹುಮ್ಮಸ್ಸು ಏಕೆ? ಇಷ್ಟು ಅಹಂಕಾರ ಯಾವ ಭಾಗ್ಯಕ್ಕೆ?"

ಕಾಶೀನಾಥ ಏನೂ ಹೇಳದೆ, ಒಂದಾದ ಬಳಿಕ ಮತ್ತೊಂದು ತುತ್ತನ್ನು ಸುಮ್ಮನೆ ತಿನ್ನುತ್ತ ಹೋದ

"ಕಟುಕನು ಕೂಡ ಉಂಡ ಮನೆಗೆ ಎರಡು ಬಗೆಯಲು ಹಿಂಜರಿಯುತ್ತಾನೆ"

"ಕಮಲಾ!"

"ಹೆಂಡತಿಯ ದುಡ್ಡಿನಿಂದ ಹೊಟ್ಟೆ ಹೊರೆಯುತ್ತಿರುವವರಿಗೆ ಇಷ್ಟೊಂದು ಅಹಂಕಾರ ಒಪ್ಪುವದಿಲ್ಲ ಒಂದು ವೇಳೆ ನಾನು ನಿಷ್ಠುರಳಾಗಿದ್ದರೆ— ನಿತ್ಯ ನಡೆಯುತ್ತಿರುವ ನಿಮ್ಮ ಇಂತಹ ವ್ಯವಹಾರವನ್ನು ನೋಡಿ"

ಕಾಶೀನಾಥ ನಗುತ್ತ "ಮನೆಯಿಂದ ಹೊರಗಟ್ಟಿ ಬಿಡುತ್ತಿದ್ದೆಯಾ?"

"ಹೌದು! ಹಾಗೆಯೇ ಮಾಡುತ್ತಿದ್ದೆ"

ಅರ್ಧ ಉಂಡಿದ್ದ ತಟ್ಟೆಯನ್ನು ಒಂದು ಪಕ್ಕಕ್ಕೆ ಸರಿಸಿ, ಕಾಶೀನಾಥ ಕಮಲೆಯನ್ನೇ ಎವೆಯಿಕ್ಕದೆ ನೋಡುತ್ತ "ಕಮಲಾ! ನಾನು ಇದುವರೆಗೆ ಎಂದೂ ನಿನ್ನ ಮೇಲೆ ಕೋಪಮಾಡಿಲ್ಲ, ಯಾವುದೊಂದು ಕಟುವಾಕ್ಯವನ್ನು ಸಹ ಆಡಿಲ್ಲ, ಆದರೆ ಈ ದಿವಸ ನೀನು ಆಡಿದಂತಹ ಮಾತನ್ನು ಇದುವರೆಗೆ ಯಾರೂ ಎಂದೂ ನನಗೆ ಆಡಿಲ್ಲ! ಇಂದಿನಿಂದ ನಾನು ನಿನ್ನ ಅನ್ನವನ್ನು ಉಣ್ಣುವುದಿಲ್ಲ ಇದರಿಂದ ನಿನಗೆ ಸುಖ ಸಿಗುವುದಾದರೆ ಸಿಗಲಿ!" ಎಂದು ಎದ್ದು ನಿಂತ ಕಮಲೆಯೂ ಎದ್ದು ನಿಂತು ಗರ್ವದಿಂದ "ನೀವು ನಿಜವಾಗಿಯೂ ಸತ್ಯವಾದಿಯಾಗಿದ್ದರೆ, ನಿಮ್ಮ ಪ್ರತಿಜ್ಞೆಯನ್ನು ಪೂರ್ತಿಮಾಡಿರಿ" ಎಂದಳು

"ಅಗತ್ಯವಾಗಿ ಪೂರ್ತಿ ಮಾಡುವೆನು! ಆದರೆ ನೀನು ಆಡಿದ ಮಾತು ನಿನಗೇ ಚಿರ-ಶತ್ರುವಾಗುವುದು ಎಂಬುದನ್ನು ಗಮನದಲ್ಲಿಟ್ಟುಕೋ! ನಾನೇನೋ ನಿನ್ನನ್ನು ಕ್ಷಮಿಸಿದ್ದೇನೆ, ಆದರೆ ಆ ಜಗದೀಶ್ವರನು ನಿನ್ನನ್ನು ಕ್ಷಮಿಸುವನೇ?"

ಕಮಲೆಗೆ ಮತ್ತಷ್ಟು ಕೋಪಬಂದಿತು "ನಿಮ್ಮ ಶಾಪ ನನ್ನನ್ನೇನೂ ಮಾಡಲಾರದು" ಎಂದಳು

"ಹಾಗೆಯೇ ಆಗಲಿ ನಾನು ನಿನಗ ಶಾಪಕೊಡಲಿಲ್ಲವೆಂಬುದು ಆ ಪರಮಾತ್ಮನಿಗೆ ಗೊತ್ತು ಧರ್ಮದಲ್ಲಿ ದೃಷ್ಟಿಯಿಟ್ಟು, ಸುಖದಿಂದ ಬಾಳೆಂದು ಆಶೀರ್ವಾದ ಮಾಡುವೆನು"

ಹೊರಗ ಬಂದು ಕಾಶೀನಾಥ ತನ್ನ ವ್ಯಾಕರಣ, ಸಾಹಿತ್ಯ, ದರ್ಶನ, ಸ್ಮೃತಿ ಎಲ್ಲವನ್ನೂ ಒಂದೊಂದಾಗಿ ಹರಿದು ಬಿಸುಟ ಸೇವಕರನ್ನು ಕರೆದು,

ತನ್ನ ಒಡವೆಗಳೆಲ್ಲವನ್ನೂ ಎಲ್ಲರಿಗೂ ಹಂಚಿಬಿಟ್ಟ ಬಳಿಕ, ರಾತ್ರೆ ಕಮಲೆಯ ಕೋಣೆಯ ಬಳಿ ಬಂದು ಬಾಗಿಲನ್ನು ತಟ್ಟಿ— "ಕಮಲಾ" ಎಂದು ಕೂಗಿದ ಕಮಲೆ ಎಚ್ಚತ್ತೇ ಇದ್ದಳು ಆದರೆ ಏನೂ ಮಾತನಾಡಲಿಲ್ಲ ಬಾಗಿಲು ತೆರೆದಿತ್ತು ಕಾಶೀನಾಥ ಬಾಗಿಲನ್ನು ತಳ್ಳಿ ಒಳಗಡೆ ಪ್ರವೇಶಿಸಿದ ಕಮಲೆ ಕಣ್ಣು ಮುಚ್ಚಿಕೊಂಡು ಮಂಚದ ಮೇಲೆ ಮಲಗಿದ್ದಳು ಕಾಶೀನಾಥ ಅವಳ ಬಳಿ ಕುಳಿತು, ತಲೆಯ ಮೇಲೆ ಕೈಯಾಡಿಸುತ್ತ "ಕಮಲಾ!' ಎಂದ ಕಮಲೆಯಿಂದ ಏನೂ ಉತ್ತರವಿಲ್ಲ "ಹೋಗುವಾಗ ನಿನಗೊಮ್ಮೆ ಆಶೀರ್ವಾದ ಮಾಡಿ ಹೋಗುವೆ, ಕಮಲಾ!" ಎನ್ನುತ್ತ ಅಲ್ಲಿಂದ ಹೊರಟು ಹೋದ

ಕಾಶೀನಾಥ ಹೊರಟು ಹೋದ ಬಳಿಕ ಕಮಲೆ ಹಾಸಿಗೆಯಿಂದೆದ್ದು, ಕಿಟಿಕೆಯ ಬಳಿ ಬಂದು ಕುಳಿತಳು ಕುಳಿತಿದ್ದಂತೆಯೆ ಬೆಳಗಾಗುತ್ತಿರುವುದನ್ನು ಕಂಡು, ಪುನಃ ಹಾಸಿಗೆಯ ಮೇಲೆ ಬಂದು ಮಲಗಿಕೊಂಡಳು ಎಚ್ಚರವಾದಾಗ ನೋಡಲಾಗಿ, ಬಹಳ ಬಿಸಿಲೇರಿ ಬಂದಿತ್ತು ಮನೆಯಲ್ಲೆಲ್ಲಾ ಗಲಿಬಿಲಿ ಅವಳಿಗಿನ್ನೂ ಪೂರ್ತಿಯಾಗಿ ಎಚ್ಚರ ಸಹ ಆಗಿರಲಿಲ್ಲ, ಅಷ್ಟರಲ್ಲಿ ಒಬ್ಬ ಸೇವಕಿ ಓಡಿ ಬಂದು, ಗಾಬರಿಯಿಂದ ಕೂಗಿ ಹೇಳಿದಳು— "ಅನರ್ಥವಾಗಿ ಹೋಯಿತು! ಅನರ್ಥವಾಗಿ ಹೋಯಿತು! ಕುಮಾರಜೀಯವರನ್ನು ಯಾರೋ ಕೊಲೆ ಮಾಡಿಬಿಟ್ಟರು!" ಕಡಾಯಿ ತುಂಬ ಕುದಿಯುತ್ತಿರುವ ಎಣ್ಣೆಯನ್ನು ಮೇಲೆ ಸುರಿದರೆ ಹೇಗಾಗುವುದೋ, ಹಾಗಾಯಿತು ಕಮಲೆಯ ಸ್ಥಿತಿ! ಬಹಳವಾಗಿ ಮರುಗುತ್ತ ಅವಳು ಕೆಳಗಿಳಿದು ಬಂದು "ಕೊಲೆಯನ್ನು ಮಾಡಿಬಿಟ್ಟರೇ?" ಎಂದು ಕೇಳಿದಳು

"ಹೌದು, ಕೊಲೆ ಮಾಡಿಬಿಟ್ಟರು" ಎಂದರು ಯಾರೋ ಹೆಚ್ಚು ಕಡಿಮೆ ವಸ್ತ್ರಹೀನ ಅವಸ್ಥೆಯಲ್ಲಿಯ ಅವಳು ಹೊರಗಿನ ಕೋಣೆಗ ಬಂದಳು ಅಲ್ಲಿ ಕಾಶೀನಾಥ ಚೇತನಾ-ವಿಹೀನನಾಗಿ ಹಾಸಿಗಯ ಮೇಲ ಬಿದ್ದಿದ್ದ, ಅವನ ಶರೀರವೆಲ್ಲಾ ರಕ್ತದಿಂದ ತೊಯ್ದು ಹೋಗಿತ್ತು ಮೇಲೆಲ್ಲಾ ಮಣ್ಣು ಮುಚ್ಚಿಕೊಂಡಿತ್ತು ಕಣ್ಣು-ಮೂಗು-ಬಾಯಿಗಳಿಂದ ರಕ್ತ ಹರಿದು-ಹರಿದು ಅಲ್ಲಿಂದಲ್ಲೇ ಒಣಗಿತ್ತು ಕಮಲೆ ಚಿಟ್ಟನೆ ಚೀರಿಕೊಂಡು, ಮೂರ್ಛಿತಳಾಗಿ ಅಲ್ಲೇ ಕೆಳಕ್ಕೆ ಬಿದ್ದುಬಿಟ್ಟಳು

ಜಮೀನುದಾರರ ಅಳಿಯಂದಿರು ಕಗ್ಗತ್ತಲಯ ರಾತ್ರಿಯಲ್ಲಿ ಎತ್ತಲೋ

ಹೋಗುತ್ತಿದ್ದರು, ಯಾರೋ ಅವರನ್ನು ಕೊಲೆ ಮಾಡಿಬಿಟ್ಟರು,— ಎಂದು ಊರಲ್ಲೆಲ್ಲ ಸುದ್ದಿ ಹಬ್ಬಿಹೋಯಿತು

ಎರಡು ದಿನಗಳಬಳಿಕ ಕಾಶೀನಾಥನಿಗೆ ಸ್ವಲ್ಪ ಪ್ರಜ್ಞೆಯುಂಟಾದಾಗ, ಪೋಲೀಸ್ ಅಧಿಕಾರಿ ಅವನನ್ನು ಕುರಿತು— " ಬಾಬೂ ! ನಿಮಗೆ ಈ ಗತಿ ಮಾಡಿದವರಾರು ? " ಎಂದು ಕೇಳಿದ ಕಾಶೀನಾಥ ಮೇಲುಗಡೆ ಕೈತೋರಿ ಸುತ್ತ " ಅವರು " ಎಂದ ವೃದ್ಧ ನಾಯಬ್ ಸಾಹೇಬರು ಅಲ್ಲೇ ನಿಂತಿದ್ದರು ಅವರ ಕಣ್ಣುಗಳಿಂದಲೂ ಕಂಬನಿಗಳುದುರಿದುವು ಅಧಿಕಾರಿ ಪುನಃ ಕೇಳಿದ— " ಬಾಬೂ ! ಅವರನ್ನು ನೀವು ಗುರುತಿಸಲಾಗಲಿಲ್ಲವೇ ? "

ಕಾಶೀನಾಥ ಅಸ್ಪಷ್ಟ ಸ್ವರದಿಂದ " ಗುರುತಿಸಿದೆ " ಎಂದ ಅಧಿಕಾರಿ ಆತುರದಿಂದ " ಅವರು ಯಾರು ? " ಎಂದು ಕೇಳಿದ

ಕಾಶೀನಾಥ ಸ್ವಲ್ಪ ಹೊತ್ತು ಸುಮ್ಮನಿದ್ದು " ಇಲ್ಲ ಇಲ್ಲ ನಾನು ತಪ್ಪು ಹೇಳಿದೆ ನಾನವರನ್ನು ಗುರ್ತಿಸಲಿಲ್ಲ " ಎಂದ

ಅಧಿಕಾರಿ ಇನ್ನೂ ಹಲವಾರು ಸಲ ಕೇಳಿದ ಆದರೆ ಪ್ರಯೋಜನವೇನೂ ಆಗಲಿಲ್ಲ ಕಾಶೀನಾಥ ಅದೊಂದರ ವಿನಃ ಬೇರೆ ಮಾತನ್ನೇ ಆಡಲಿಲ್ಲ ಮರುದಿನ ಅವನು ನಾಯಬ್ ಸಾಹೇಬರನ್ನು ಕರೆಸಿ, " ವೈದ್ಯನಾಥದಲ್ಲಿ ನನ್ನ ತಂಗಿ ಬಿಂದುವಾಸಿನಿ ಇದ್ದಾಳೆ ಒಮ್ಮೆ ಅವಳನ್ನು ನೋಡಬೇಕೆಂದು ಆಸೆಯಾಗುತ್ತಿದೆ ಆದ್ದರಿಂದ ತಾವು ಯಾರನ್ನಾದರೂ ಕಳುಹಿಸಿ, ಅವಳನ್ನು ಕರೆಸಬೇಕು " ಎಂದು ಹೇಳಿದ

ಮೂರು ದಿನಗಳ ಬಳಿಕ ಬಿಂದುವಾಸಿನಿಯೂ, ಯೋಗೇಶಬಾಬುವೂ ಇಬ್ಬರೂ ಬಂದರು ಬಿಂದು ಸ್ವಲ್ಪ ಗಟ್ಟಿ ಮನಸ್ಸಿನ ಹೆಂಗಸು, ಕಮಲ ಯಂತಲ್ಲ ಆದ್ದರಿಂದಲೇ ಅವಳು ಚಿಟ್ಟನೆ ಚೀರಿಕೊಳ್ಳಲೂ ಇಲ್ಲ, ಮೂರ್ಛಿತಳಾಗಲೂ ಇಲ್ಲ ಕೇವಲ ಕಣ್ಣೀರು ಸುರಿಸಿ, ಬಿಗಿದ ಕಂಠದಿಂದ " ಕಾಶೀ ಅಣ್ಣ ! ನಿನಗಾರು ಈ ಗತಿ ಮಾಡಿದರು ? " ಎಂದು ಕೇಳಿದಳು

" ಹೇಗ ಗೊತ್ತಾಗಬೇಕು ? "

" ಯಾರ ಮೇಲಾದರೂ ಸಂಶಯವಿದೆಯೋ ? "

" ಆ ಮಾತನ್ನು ಕೇಳಬೇಡ, ತಂಗೀ ! "

ಬಿಂದು ಮಾತನಾಡದೆ ಕಾಶೀನಾಥನ ಮುಖವನ್ನೇ ನೋಡುತ್ತಿದ್ದಳು

ಇಂತಹ ದೊಡ್ಡ ಆಘಾತವನ್ನು ಸಹಿಸಿಕೊಂಡು ಕಾಶೀನಾಥ ಬದು-ಕುವುದಿಲ್ಲವೆಂದೇ ಎಲ್ಲರೂ ಭಾವಿಸಿದರು ಮೃತ್ಯು ಸಮೀಪಿಸುತ್ತ ಬಂದಿತೆಂದೇ ಎಲ್ಲರೂ ತಿಳಿದುಕೊಂಡರು ಒಂದು ದಿನ ಅರ್ಧ ರಾತ್ರಿಯ ಸಮಯದಲ್ಲಿ ಕಾಶೀನಾಥ ಜ್ವರದ ವೇಗದಿಂದ ಚಡಪಡಿಸುತ್ತ ಜೋರಾಗಿ ಕೂಗಿಕೊಂಡ— “ ನಿಜವಾಗಿ ಹೇಳು ಕಮಲಾ ! ಈ ಕೆಲಸವನ್ನು ನೀನು ಮಾಡಲಿಲ್ಲವಷ್ಟೆ ? ” ಬಿಂದು ಅಣ್ಣನ ಮುಖದ ಬಳಿ ತನ್ನ ಮುಖವನ್ನು ಸರಿಸಿ, “ ಇದೇನು ಹೇಳುತ್ತಿರುವೆ, ಅಣ್ಣಾ ! ” ಎಂದು ಕೇಳಿದಳು

ಕಾಶೀನಾಥ ಭ್ರಮೆಯಲ್ಲಿ— ಬಿಂದುವನ್ನು ಕಮಲೆಯೆಂದು ತಿಳಿದು–ಅವಳ ಕುತ್ತಿಗಯನ್ನು ತನ್ನ ಬಾಹುಗಳಿಂದಪ್ಪಿ, ಕರುಣಾ–ಸ್ವರದಿಂದ “ ಕಮಲಾ ! ಸತ್ತರೂ ನಾನು ಸುಖಿಯಾಗಲಾರೆ ! ಈ ಕೆಲಸವನ್ನು ನೀನು ಮಾಡಲಿಲ್ಲವೆಂದು ಒಮ್ಮೆ ಹೇಳಿಬಿಡು ” ಎಂದ

## ೧೦

ಪ್ರಜ್ಞೆ-ಮೂರ್ಛೆ, ನಿದ್ರೆ-ಅರೆನಿದ್ರೆ-- ಹೀಗೆ ಕಮಲೆಯ ಎರಡು ದಿನಗಳು ಕಳೆದುವು ಅವಳ ವಿಷಯದಲ್ಲಿ ಡಾಕ್ಟರರಿಗೆ ಸಹ ಮನಸಿನಲ್ಲೇ ಸಂಶಯವುಂಟಾಯಿತು, ಆದ್ದರಿಂದ ಎಲ್ಲರೂ ಬಹಳ ಎಚ್ಚರಿಕೆಯಿಂದ ಅವಳ ಬಳಿಯಲ್ಲೇ ಇರುತ್ತಿದ್ದರು ಎರಡು ದಿನಗಳ ಸೇವೆ-ಶುಶ್ರೂಷೆಯ ನಂತರ ಇಂದು ಅವಳಿಗೆ ಪ್ರಜ್ಞೆಯುಂಟಾಯಿತು, ಅವಳನ್ನು ಎಬ್ಬಿಸಿ ಕುಳ್ಳಿರಿಸಲಾಯಿತು

ಕಮಲ ಕಣ್ತೆರೆದು ಸುತ್ತಲೂ ಚೆನ್ನಾಗಿ ನೋಡಿದಳು ಇದುವರೆಗೆ ತನ್ನ ತಲೆಯನ್ನು ತೊಡೆಯ ಮೇಲಿರಿಸಿಕೊಂಡು ಕುಳಿತಿದ್ದವಳ ಪರಿಚಯವೇ ಅವಳಿಗಿರಲಿಲ್ಲ “ ನೀವು ಯಾರು ? ” ಎಂದು ಕೇಳಿದಳು

ಅದಕ್ಕವಳು “ ನಾನು ಬಿಂದುವಾಸಿನಿ ನಿಮ್ಮ ಪತಿಯ ತಂಗಿ ” ಎಂದಳು

ಕಮಲೆ ಬಹಳ ಹೊತ್ತಿನ ವರೆಗೆ ಅವಳ ಮುಖವನ್ನೇ ನೋಡುತ್ತ ಕುಳಿತಿದ್ದಳು ಬಳಿಕ ಕೈಸನ್ನೆಯಿಂದ—ಕೋಣೆಯಲ್ಲಿ ಕುಳಿತಿದ್ದ ಇತರರೆಲ್ಲರನ್ನೂ

ಹೊರಕ್ಕೆ ಹೋಗುವಂತೆ ಹೇಳಿದಳು ಆಮೇಲೆ ಬಿಂದುವನ್ನು ಕುರಿತು ಮೆಲುದನಿಯಲ್ಲಿ "ಅತ್ತಿಗೆ! ನಾನು ಹೀಗೆ ಪ್ರಜ್ಞಾ-ಶೂನ್ಯಳಾಗಿ ಬಿದ್ದು ಎಷ್ಟು ಹೊತ್ತಾಯಿತು?" ಎಂದು ಕೇಳಿದಳು

"ಮೊನ್ನೆಯ ದಿನ ಬೆಳಿಗ್ಗೆ ಜ್ಞಾನತಪ್ಪಿ ಬಿದ್ದಿರಿ, ಆಮೇಲೆ ಪುನಃ ಪ್ರಜ್ಞೆಯೇ ಬಂದಿಲ್ಲ"

ಕಮಲೆ ಗಾಬರಿಯಿಂದ "ಮೊನ್ನೆಯೇ!" ಎಂದು ಕೇಳಿದಳು ಬಳಿಕ ತುಸುಹೊತ್ತು ಸುಮ್ಮನೆ ತಲೆತಗ್ಗಿಸಿ, ಸ್ತಬ್ಧಳಾಗಿ ಕುಳಿತುಬಿಟ್ಟಳು. ಬಹಳ ಹೊತ್ತಿನ ವರೆಗೆ ಅವಳು ಈ ರೀತಿ ಚೇತನಾ-ವಿಹೀನಳಾಗಿದ್ದುದನ್ನು ಕಂಡು ಬಿಂದುವಿಗೆ ಸಂಶಯ, ಗಾಬರಿ ಅವಳ ಬಲಗೈಯನ್ನು ತನ್ನ ಕೈಯಿಂದ ಹಿಡಿದುಕೊಂಡು "ಅತ್ತಿಗೆ!" ಎಂದು ಕೂಗಿದಳು ಬಿಂದು

ಕಮಲೆ ತಲೆ ಎತ್ತಲಿಲ್ಲ, ಆದರೆ ಉತ್ತರ ಮಾತ್ರ ಕೊಟ್ಟಳು— "ಹೆದರಿಕೆ ಏನೂ ಇಲ್ಲ ಅತ್ತಿಗೆ, ಇನ್ನು ಸ್ಮೃತಿ ತಪ್ಪಲಾರದು"

ಕಮಲೆ ಪ್ರಜ್ಞೆಯಿಂದಿರಲು ಮನಃಪೂರ್ವಕವಾಗಿ ಪ್ರಯತ್ನಿಸುತ್ತಿರುವಳೆಂಬುದನ್ನು ಬಿಂದು ಅರಿತುಕೊಂಡಳು ಆದ್ದರಿಂದಲೇ ಅವಳು ಧೈರ್ಯ ಮಾಡಿಕೊಂಡು ಸುಮ್ಮನೆ ಕುಳಿತುಬಿಟ್ಟಳು ಮತ್ತಷ್ಟು ಹೊತ್ತು ಹಾಗೆಯೇ ಕುಳಿತಿದ್ದನಂತರ ಕಮಲೆಯೇ ಮಾತನಾಡಲಾರಂಭಿಸಿದಳು— "ಅತ್ತಿಗೆ! ನೀವು ಎರಡು ದಿವಸಗಳಿಂದಲೂ ನನ್ನನ್ನು ತೊಡೆಯ ಮೇಲಿರಿಸಿಕೊಂಡು ಹೀಗೆಯೇ ಕುಳಿತಿರುವಿರಿ ನನ್ನ ಸೇವೆ ಮಾಡಬೇಕೆಂಬ ಮನಸ್ಸು ನಿಮಗೆ ಹೇಗಾಯಿತು? ನನಗ ಮಾತ್ರ ಹಾಗೆ ಮಾಡಲು ಮನಸ್ಸೇ ಆಗುವದಿಲ್ಲವಲ್ಲಾ?" ಎಂದಳು

ಬಿಂದುವಿಗೆ ಅವಳ ಮಾತು ಸರಿಯಾಗಿ ತಿಳಿಯಲಿಲ್ಲ ಅವಳು "ಏಕೆ? ಮನಸ್ಸೇಕಾಗುವುದಿಲ್ಲ, ಅತ್ತಿಗೆ? ನೀವೇನು ಪರಕೀಯರೇ? ನಮ್ಮಿಬ್ಬರಿಗೂ ಈ ವರೆಗೆ ಪರಿಚಯವಿರಲಿಲ್ಲ, ಆದರೂ ಅಣ್ಣನಂತೆ ನೀವೂ ನಮ್ಮವರೇ ಅಲ್ಲವೇ? ಅವರ ಸೇವೆ ಮಾಡುವಂತೆಯೇ ನಿಮ್ಮ ಸೇವೆ ಮಾಡುವುದೂ ನನ್ನ ಕರ್ತವ್ಯ ಅತ್ತಿಗ, ನಿಮಗ ಗೊತ್ತಿಲ್ಲ— ನಾನು ಬಂದಾಗಿನಿಂದ ಈ ಎರಡು ದಿವಸಗಳನ್ನು ಹೇಗ ಕಳೆದಿರುವನೋ, ಆ ಪರಮಾತ್ಮನೇ ಬಲ್ಲ! ಒಮ್ಮೆ ಅಣ್ಣನ ಕೋಣೆಗೆ ಹೋಗುವುದು, ಒಮ್ಮೆ ನಿಮ್ಮ ಕೋಣೆಗೆ ಬರುವುದು ಅಣ್ಣನ ಕೋಣೆಗೆ ಹೋದರ, ನಿಮ್ಮ ವಿಚಾರವಾಗಿ ಗಾಬರಿ ನಿಮ್ಮ

ಕೋಣೆಗೆ ಬಂದರೆ ಅಣ್ಣನು ಹೇಗಿರುವನೋ ಎಂದು ಕಾತರ ಸಂಜೆಯಿಂದ ಅಣ್ಣನ ದೇಹಸ್ಥಿತಿ ಸ್ವಲ್ಪ ಸುಧಾರಿಸಿದೆ ಅವನು ಸ್ವಲ್ಪ ಸುಖವಾಗಿ ನಿದ್ರಿ-ಸುತ್ತಿದ್ದಾನೆ ಆದ್ದರಿಂದಲೇ ಈಗ ನಿಮ್ಮ ಬಳಿ ಸ್ವಲ್ಪ ಧೈರ್ಯದಿಂದ ಕುಳಿತಿದ್ದೇನೆ. ಈಸಲ ಅವನು ಬದುಕುವನೆಂದು ಯಾರಿಗಾದರೂ ಭರವಸೆ ಇತ್ತೆ ಅತ್ತಿಗೆ ! '' ಎಂದಳು

" ಬದುಕಿಕೊಂಡರೇ ? " ಎಂದು ಕೇಳಿದಳು ಕಮಲಾ

ಬಿಂದು ತಲೆಯಲ್ಲಾಡಿಸುತ್ತ " ಹೌದು, ಬದುಕಿಕೊಂಡರು ! ಡಾಕ್ಟರರು ' ಜ್ವರ ಇಳಿದು ಹೋಗಿದೆ, ಇನ್ನೇನೂ ಹೆದರಿಕೆಯಿಲ್ಲ ' ಎಂದು ಹೇಳಿರುವರು " ಎಂದಳು

ಕಮಲೆಯ ಮುಖದಲ್ಲಿ ಅಕಸ್ಮಾತ್ತಾಗಿ ಒಂದು ತೇಜಸ್ಸುಂಟಾಯಿತು; ಮರುಕ್ಷಣವೇ ಪುನಃ ಶವದ ಮುಖದಂತೆ ಕಳೆಗುಂದಿತು ಒಮ್ಮೆ ತಲೆಯಿಂದ ಕಾಲವರೆಗೆ ಅವಳ ಶರೀರವೆಲ್ಲಾ ಕಂಪಿಸಿತು, ಒಡನೆ ಅವಳು ಪ್ರಜ್ಞೆ ತಪ್ಪಿ ಬಿಂದುವಿನ ತೊಡೆಯ ಮೇಲೆ ಬಿದ್ದುಬಿಟ್ಟಳು.

ಬಿಂದು ಗಟ್ಟಿಯಾಗಿ ಚೀರಿಕೊಳ್ಳಲೂ ಇಲ್ಲ, ಬೊಬ್ಬೆ ಹಾಕಲೂ ಇಲ್ಲ, ಯಾರನ್ನೂ ಕರೆಯಲೂ ಇಲ್ಲ ಅವಳ ತಲೆಯನ್ನು ತನ್ನ ತೊಡೆಯ ಮೇಲಿರಿಸಿಕೊಂಡು, ಸುಮ್ಮನೆ ಗಾಳಿ ಹಾಕತೊಡಗಿದಳು ಈ ಸ್ತ್ರೀಯಲ್ಲಿ ಸ್ವಾಭಾವಿಕ ಧೈರ್ಯವೆಷ್ಟು ಹೆಚ್ಚಾಗಿದೆಯೆಂಬುದು ಇವಳ ಪತಿಯ ಬೇನೆಯಲ್ಲೇ ಎಲ್ಲರಿಗೂ ತಿಳಿದಿತ್ತು ಮೃತ್ಯುವು ಪತಿಯ ತಲೆಯ ಬಳಿ ಬಂದು ಕುಳಿತಿದ್ದರೂ ಅವಳು ಧೈರ್ಯಗೆಡಲಿಲ್ಲ ಅದೇ ಬಿಂದು ಈಗ ಕಮಲೆಗಾಗಿ ಏಕೆ ಎದೆಗೆಡಬೇಕು ? ಸ್ವಲ್ಪ ಹೊತ್ತಿನನಂತರ ಕಮಲೆ ಕಣ್ತೆರೆದು, ತಾನೆಲ್ಲಿರುವೆನೆಂದು ಸುತ್ತಲೂ ನೋಡಿದಳು ಪುನಃ ಬಿಂದುವಿನ ತೊಡೆಯಲ್ಲಿ ಮುಖ ಮುಚ್ಚಿಕೊಂಡು ಮಲಗಿ, ಬಹಳವಾಗಿ ದುಃಖಿಸುತ್ತ ಅಳತೊಡಗಿದಳು.

ಅವಳ ಆ ಗಾಢ ಕ್ರಂದನ ಮತ್ತು ಕಣ್ಣೀರು ಬಿಂದುವಿನ ಮಡಿಲಲ್ಲೇ ಒಣಗಿ ಹೋಯಿತು ! ಆ ಕ್ರಂದನದ ಸಣ್ಣದೊಂದು ತರಂಗವು ಸಹ ಹೊರಗೆ ಯಾರಿಗೂ ಕೇಳಬರಲಿಲ್ಲ ಹೊರಗೆ ನಿರ್ಜನ ರಾತ್ರಿಯ ಅಂಧಕಾರ ಗಾಢವಾಗುತ್ತಲಿತ್ತು. ಒಳಗೆ ಈ ಸಣ್ಣ ಕೋಣೆಯಲ್ಲಿ ಇಬ್ಬರು ತರುಣಿಯರು; ಅವರಲ್ಲಿ ಒಬ್ಬಳು ತನ್ನ ವಿದೀರ್ಣ ವಕ್ಷಸ್ಥಳದ ಸಂಪೂರ್ಣ ಜ್ವಾಲೆಯನ್ನು ಮತ್ತೊಬ್ಬಳ ಗಂಭೀರ-ಶಾಂತ ಮಡಿಲಲ್ಲಿ ತುಂಬುತ್ತಿದ್ದಳು !

ಸ್ವಲ್ಪ ಶಾಂತವಾದ ನಂತರ ಕಮಲೆ ತನ್ನ ಪತಿಯ ವಿಚಾರವಾಗಿ ಅನೇಕ ವಿಷಯಗಳನ್ನು ಕೇಳಿದಳು. ಆದರೆ ತಾನೇ ಹೋಗಿ ಅವರನ್ನು ನೋಡಿಕೊಂಡು ಬರುವೆನೆಂಬ ಇಚ್ಛೆಯನ್ನು ಮಾತ್ರ ಏಕೆ ತೋರಿಸಲಿಲ್ಲ ಎಂಬುದು ಬಿಂದುವಿಗೆ ಎಷ್ಟು ಯೋಚಿಸಿದರೂ ಹೊಳೆಯಲಿಲ್ಲ ಒಂದೊಂದು ಸಲ ಅವಳು 'ದೊಡ್ಡವರ ಮನೆಯ ಶಿಕ್ಷಣ-ಸಂಸ್ಕೃತಿ, ರೀತಿ-ನೀತಿಗಳೇ ಹೀಗೋ!' ಎಂದು ಯೋಚಿಸಿಕೊಳ್ಳುವಳು. ಸೇವೆ-ಶುಶ್ರೂಷೆಯ ಭಾರ ವನ್ನೆಲ್ಲಾ ಸೇವಕ-ಸೇವಕಿಯರಿಗೆ ವಹಿಸಿ ಬಿಟ್ಟು, ಹೊರಗಿನಿಂದಲೇ ದೇಹ ಸ್ಥಿತಿಯನ್ನು ವಿಚಾರಿಸಿಕೊಳ್ಳುವುದೇ ಇವರ ಪದ್ಧತಿಯಿರಬಹುದು-- ಎಂದು ಕೊಳ್ಳುವಳು. ಇದ್ದಕ್ಕಿದ್ದಂತೆ ಕಮಲೆ "ಅತ್ತಿಗೆ! ನಿಮ್ಮ ಅಣ್ಣನವರಿಗೆ ಪ್ರಜ್ಞೆ ಬಂದನಂತರ ನನ್ನ ವಿಚಾರವಾಗಿ ಏನಾದರೂ ಒಂದಾವರ್ತಿ ಕೇಳಿದ್ದರೇ?"

"ಒಂದಾವರ್ತಿ ಕೇಳಿದ್ದರು" ಎಂದು ಹೇಳಿ ಬಿಂದುವು ಸುಮ್ಮನಾಗಿ ಹೋದಳು. ಕಮಲೆ ಅದೇನಿರಬಹುದೆಂದು ಗ್ರಹಿಸಿಕೊಂಡಳು, ಆದರೆ ಏನೂ ಪ್ರಶ್ನಿಸಲಿಲ್ಲ ಸುಮ್ಮನೆ ಬಿಂದುವಿನ ಮುಖದ ಕಡೆಗೆ ಉತ್ಸುಕ ವ್ಯಾಕುಲ ದೃಷ್ಟಿಯಿಂದ ನೋಡತೊಡಗಿದಳು

ಬಿಂದು ತುಸು ಹೊತ್ತು ಸುಮ್ಮನಿದ್ದು ನಂತರ ಹೇಳಿದಳು-- "ಅಣ್ಣನು ನನ್ನನ್ನು ನೀವೆಂದು ತಿಳಿದುಕೊಂಡು, ನನ್ನ ಕಂಠವನ್ನು ತನ್ನ ಬಾಹುಗಳಿಂದ ಬಿಗಿದಪ್ಪಿ, ಗಟ್ಟಿಯಾಗಿ ಕೂಗುತ್ತ— ಕಮಲಾ! ನಿಜವಾಗಿ ಹೇಳು ಈ ಕೆಲಸವನ್ನು ನೀನು ಮಾಡಲಿಲ್ಲವಷ್ಟೆ?-- ಎಂದು ಕೇಳಿದರು."

ಕಮಲೆ ಅತ್ಯಂತ ಗಾಬರಿಯಿಂದ "ಆಮೇಲೆ!"

ಬಿಂದು ಹೇಳಿದಳು– "ಕಮಲಾ! ನಾನು ಸತ್ತರೂ ಸುಖಿಯಾಗಲಾರೆ ಈ ಕೆಲಸ ನಿನ್ನಿಂದ ಆಗಲಿಲ್ಲವೆಂದು ಒಮ್ಮೆ ಹೇಳಿ ಬಿಡು! ಎಂದ"

ಆಗ ಕಮಲೆ ಮತ್ತಷ್ಟು ಗಾಬರಿಯಿಂದ "ಆಮೇಲೆ!"

"ಯಾವ ಕೆಲಸವನ್ನು ಅವರು ಕೇಳಿದರೆಂಬುದು ನನಗೆ ಗೊತ್ತಿಲ್ಲ, ಅತ್ತಿಗೆ!" ಎಂದಳು ಬಿಂದು

"ಅವರು ಏನು ಕೇಳಿದರೆಂಬುದು ನನಗೆ ಗೊತ್ತು, ಅತ್ತಿಗೆ!" ಎನ್ನುತ್ತ, ಕಮಲೆಯು ಒಮ್ಮೆಗೇ ನೆಟ್ಟಗೆ ಎದ್ದು ಕುಳಿತಳು

ಬಿಂದುವು ಕಮಲೆಯ ಕೈಹಿಡಿದುಕೊಂಡು "ಅತ್ತಿಗೆ! ನೀವು ಆ ಕೋಣೆಗೆ ಹೋಗಬೇಡಿ" ಎಂದು ತಡೆದಳು

"ಏಕೆ? ಏಕೆ ಹೋಗಬಾರದು?"

"ನೀವು ಹೋಗುವುದರಿಂದ ಏನಾದರೂ ಕೆಡಕಾಗಬಹುದೆಂದು ತಿಳಿದು ಡಾಕ್ಟರು ಬೇಡವೆಂದಿರುವರು"

"ನನ್ನ ಹಾನಿಯನ್ನು ನನಗಿಂತ ಹೆಚ್ಚಾಗಿ ಡಾಕ್ಟರು ತಿಳಿದಿರುವರೇ? ನಾನು ಅವರ ಬಳಿಗೇ ಹೋಗುವೆನು ನಿದ್ರೆಯಿಂದೆಚ್ಚೆತ್ತ ಮೇಲೆ ಅವರು ಪುನಃ ಅದೇ ಪ್ರಶ್ನೆಯನ್ನು ಕೇಳಿದರೆ, ನಾನೇ ಅದಕ್ಕುತ್ತರ ಕೊಡಬೇಕಲ್ಲದೆ ಮತ್ತಾರು ಕೊಡುವರು?" ಎನ್ನುತ್ತ ಕಮಲೆ ಬಿಂದುವಿನ ಕೈಹಿಡಿದುಕೊಂಡು ವಿನೀತ-ಸ್ವರದಿಂದ ಹೇಳಿದಳು— "ಅತ್ತಿಗೆ! ಈ ಜೀವವಿರುವವರೆಗೂ ಇನ್ನು ನಾನು ತಲೆಯೆತ್ತಿ ನಡೆಯಲಾರೆ! ದಯವಿಟ್ಟು ಒಮ್ಮೆ ನನ್ನನ್ನು ಅವರ ಬಳಿಗೆ ಕರೆದುಕೊಂಡು ಹೋಗಿ"

ಆ ಬಳಿಕ ಮನಸ್ಸಿನಲ್ಲೇ ಭಗವಂತನನ್ನು ಪ್ರಾರ್ಥಿಸಿಕೊಂಡಳು— "ಹೇ ಪರಮಾತ್ಮಾ! ಇದು ವರೆಗೆ ಉಳಿಸಿ ಕೊಟ್ಟಿದ್ದ ಈ ಮಂಗಲಸೂತ್ರ ವನ್ನು ಇನ್ನು ಕಿತ್ತುಕೊಳ್ಳಬೇಡ, ಪ್ರಭು! ನನ್ನ ದಂಡನೆ ಇನ್ನೂ ಮುಗಿ ದಿಲ್ಲ, ಹಾಗೆಯೇ ಉಳಿದಿದೆ, ದೇವಾ! ನಿನ್ನ ಸಮಸ್ತ ಕಠೋರ ದಂಡನೆ ಯನ್ನೂ ನಗುನಗುತ್ತ ಸಹಿಸಿಕೊಳ್ಳುವಷ್ಟು ಸಾಹಸವನ್ನು ದಯಪಾಲಿಸು, ಆದರೆ ಮಾತ್ರ ನನಗಿರುವ ಆ ಒಂದೇ ಒಂದು ಮಾರ್ಗವನ್ನು ಮುಚ್ಚಿ ಬಿಡ ಬೇಡ, ಸ್ವಾಮಿ!"

ಕಮಲೆ ಪತಿಯ ಕೋಣೆಯಲ್ಲಿ ಕಾಲಿಟ್ಟಳೋ ಇಲ್ಲವೋ— ಅವಳಿಗೆ ಸರಿಯಾಗಿ ನಿಲ್ಲಲಾಗಲಿಲ್ಲ ಎರಡು ದಿನಗಳಿಂದ ಉಪವಾಸ ಮಾಡಿ, ಅವಳ ಶರೀರವೆಲ್ಲಾ ಕ್ಷೀಣವಾಗಿ ಹೋಗಿತ್ತು ಒಡನೆಯೇ ತಲೆಸುತ್ತಿ, ಅವಳು ಪತಿಯ ಪಾದಗಳ ಮೇಲೆ ಬಿದ್ದುಬಿಟ್ಟಳು.

ಕಾಶೀನಾಥನಿಗೆ ಎಚ್ಚರವಿತ್ತು ಯಾರೋ ಅವನ ಕಾಲಬಳಿಯಲ್ಲಿ, ಹಾಸಿಗೆಯಮೇಲೆ ಬಂದು ಕುಳಿತಂತೆ ಎನಿಸಿತು ಆದರೆ ತಲೆಯೆತ್ತಿ ನೋಡು ವಷ್ಟು ಶಕ್ತಿ ಅವನಲ್ಲಿರಲಿಲ್ಲ ಆದುದರಿಂದ ಅವನು ಮಲಗಿಕೊಂಡೇ "ಯಾರು, ಬಿಂದು ಏನು?" ಎಂದು ಕೇಳಿದ.

ಬಿಂದು ಎಂದಳು "ಅಲ್ಲಣ್ಣ, ಅತ್ತಿಗೆ"

" ಕಮಲಾ? ನೀನು ಇಲ್ಲಿಗೇತಕ್ಕೆ ಬಂದೆ? "

ಬಿಂದು ತಲೆದಿಂಬಿನ ಬಳಿ ಕುಳಿತು ಮೃದು ಸ್ವರದಿಂದ " ಇವಳಿಂದ ತಡೆದುಕೊಳ್ಳಲಾಗಲಿಲ್ಲ ತಲೆತಿರುಗಿ ಬಿದ್ದಿದ್ದಾಳೆ ಅಣ್ಣ"ಎಂದು ನುಡಿದಳು

ಕಾಶೀನಾಥ ಸುಮ್ಮನಿದ್ದ. ಬಿಂದು ಪುನಃ " ನಾನು ಈದಿನ ರಾತ್ರಿ ಇಲ್ಲಿ ಬರಲು ಬೇಡವೆಂದಿದ್ದೆ. ಎರಡು ದಿನಗಳ ಬಳಿಕ ಸ್ಮೃತಿ ಬಂದವಳು ಈ ಕೋಣೆಗೆ ಬಂದರೆ ತನ್ನನ್ನು ಸಂಬಾಳಿಸಿಕೊಳ್ಳಲಾರಳೆಂದು ನಾನು ಅರಿತಿದ್ದೆ " ಎಂದು ನುಡಿದಳು.

ಪತಿಯ ಪಾದಗಳ ನಡುವೆ ಕಮಲೆ ಮೊದಲಿನಂತೆಯೇ ಮುಖವನ್ನು ಮುಚ್ಚಿಕೊಂಡು ಬಿದ್ದಿದ್ದಳು ಕಾಶೀನಾಥನ ತಣ್ಣಗಿನ ಪಾದಗಳಿಗೆ ಅವಳ ಬಿಸಿ ಕಂಬನಿಗಳ ಸಂತತ ಧಾರೆಯ ಅನುಭವವಾಗಿತ್ತಿತ್ತು ಆದುದರಿಂದಲೆ ಅವನು ಮೆಲ್ಲಮೆಲ್ಲನೆ " ಹೌದು ತಂಗೀ, ಇಲ್ಲಿಗೆ ಈಕೆ ಬರದಿದ್ದರೆ ಒಳಿತಾಗಿರುತ್ತಿತ್ತು " ಎಂದ.

ಕಮಲೆಯ ಕಡೆಗೆ ನೋಡಿ ನೋಡಿ ಬಿಂದುವಿನ ಕಣ್ಣು ತುಂಬಿ ಬಂದಿದ್ದುವು ಕಣ್ಣೊರೆಸಿಕೊಳ್ಳುತ್ತ ಅವಳೆಂದಳು–"ಒಳಿತಾಗಿ ಏನೋ ಇರುತ್ತಿತ್ತು, ಆದರೆ ಅಂಥ ಒಳಿತನ್ನು ಯಾರಾದರೂ ಮಾಡಬಲ್ಲರೇನು ಅಣ್ಣ? ನಿನಗೆ ಗುಣವಾಗಲಿ– ಈ ಎರಡು ದಿನಗಳನ್ನು ಅತ್ತಿಗೆ ಹೇಗೆ ಕಳೆದಿರುವಳೆಂಬುದು ನನಗೆ ಗೊತ್ತು, ಪರಮಾತ್ಮನಿಗೇ ಗೊತ್ತು ಅವಳಿಗೂ ಗೊತ್ತಿರುವುದು ಸಂಶಯ "

ಪರಮಾತ್ಮನ ಹೆಸರೆತ್ತಿದ ಕೂಡಲೇ ಕಾಶೀನಾಥ ಕಣ್ಣುಗಳನ್ನು ಮುಚ್ಚಿಕೊಂಡು ತನ್ನ ಬಾಹ್ಯದೃಷ್ಟಿಯನ್ನು ಒಂದು ಕ್ಷಣ ಅಂತರ್ಮುಖ ಮಾಡಿದ ಅಲ್ಲಿ ಸಮಸ್ತ ವಿಶ್ವದ ನರನಾರಿಯರ ಅಂತರಾತ್ಮನು ಚಿರಕಾಲದಿಂದ ವಸತಿ ಮಾಡಿದ್ದುದನ್ನು ಕಂಡ ಅವನ ಶ್ರೀಚರಣದಲ್ಲಿ ಈ ಪ್ರಶ್ನೆಯನ್ನಿಟ್ಟು ಒಂದು ನಿಮಿಷಕಾಲ ಉತ್ತರವನ್ನು ನಿರೀಕ್ಷಿಸುವವನಂತೆ ಇದ್ದು ಮತ್ತೆ ಕಣ್ಣುತೆರೆದು, ಕಾಶೀನಾಥ ಹೀಗೆ ಹೇಳಿದ— " ಇನ್ನು ನನಗೆ ಪ್ರಾಣಭಯವಿಲ್ಲ ಎದ್ದು ಕುಳಿತುಕೋ ಕಮಲಾ "

ಬಿಂದು " ಅಣ್ಣ, ನೀನು ನನಗೆ ಯಾವ ಪ್ರಶ್ನೆಯನ್ನು ಕೇಳುತ್ತಿದ್ದೆಯೋ ಅದಕ್ಕೆ ಉತ್ತರವೀಯಲು ಅತ್ತಿಗೆಯೇ ಬಂದಿರುವಳು ನಿನ್ನ ಬಳಿಗೆ " ಎಂದಳು.

ಕಾಶೀನಾಥನ ಕಳೆಗುಂದಿದ ತುಟಿಗಳ ಮೇಲೆ ಮುಗುಳುನಗೆ ತೇಲಿತು. ಅವನೆಂದ—" ಇನ್ನು ನನಗೆ ಯಾರೂ ಯಾವ ಉತ್ತರವನ್ನೂ ಕೊಡ ಬೇಕಾದುದಿಲ್ಲ, ಬಿಂದೂ ಈಗೆರಡು ದಿನಗಳ ಇವಳ ಮೂರ್ಛಿತಾವಸ್ಥೆ ಯಿಂದಲೇ ನನಗೆ ಪೂರ್ಣ ಉತ್ತರ ದೊರಕಿದೆ " ಇಷ್ಟು ಹೇಳಿ, ಅವನು ಎಡಗೈಯ ಮೇಲೆ ಭಾರವಿತ್ತು ಎದ್ದು ಕುಳಿತು ಬಲಗೈಯಿಂದ ಕಮಲೆಯ ಮುಖವನ್ನು ಬಲುಮೆಯಿಂದ ಎತ್ತಲು ಪ್ರಯತ್ನಿಸುತ್ತ " ಕಮಲಾ ! " ಎಂದು ಕರೆದ

ಕಮಲೆ ಯಾವ ಉತ್ತರವನ್ನೂ ಕೊಡಲಿಲ್ಲ ಮೊದಲಿನಂತೆಯೆ ಅವಳು ಪಾದಗಳ ಮಧ್ಯದಲ್ಲಿ ಮುಖವನ್ನು ಮುಚ್ಚಿಕೊಂಡು ಬಿದ್ದಿದ್ದಳು ಅವಳ ಕಣ್ಣುಗಳಿಂದ ಅದೇ ರೀತಿಯಾಗಿ ಅಶ್ರುಧಾರೆ ಹರಿಯುತ್ತಿದ್ದಿತು

ಬಿಂದು ಸ್ವಲ್ಪ ವ್ಯಸ್ತಳಾಗಿ " ನೀನು ಏಳಬೇಡ ಅಣ್ಣ, ಡಾಕ್ಟರರು ಹೇಳಿ ಹೋಗಿದ್ದಾರೆ ಎಲ್ಲಿಯಾದರೂ ಮತ್ತೆ " ಎಂದಳು ಕಾಶೀ ನಾಥ ನಗುನಗುತ್ತ " ಡಾಕ್ಟರರು ಏನೇ ಹೇಳಲಿ ತಂಗೀ, ಇನ್ನು ಭಯ ಪಡಬೇಕಾದುದೇನೂ ಇಲ್ಲ ಈ ಸಂಕಟದಿಂದ ನೀವು ನನ್ನನ್ನು ಉಳಿಸಿ-ಕೊಂಡಿರುವಿರಿ " ಎಂದ

ಬಳಿಕ ಕಾಶೀನಾಥ ಕಮಲೆಯ ಹರಡಿದ ಒಣ ಕೂದಲುಗಳನ್ನು ಬೆರಳುಗಳಿಂದ ಸ್ವಲ್ಪ ಹೊತ್ತು ತೀಡಿ ಮತ್ತೆ ಒರಗಿಕೊಂಡ



# ವೃಂದಾವನ

## ೧

ಕುಂಜ ವೈಷ್ಣವನ ತಂಗಿ ಕುಸುಮೆಯ ಚಿಕ್ಕಂದಿನ ಇತಿಹಾಸ ಬಹಳ ಲಜ್ಜಾಜನಕವಾಗಿತ್ತು ಅದನ್ನು ನೆನಸಿಕೊಂಡರೆ ಸಾಕು, ಭೂಮಿಯಲ್ಲಿ ಕುಸಿದು ಹೋಗಲೇ ಎನಿಸುತ್ತಿತ್ತು ಆಕೆಗೆ ಎರಡು ವರ್ಷ ತುಂಬಿದಾಗಲೆ ತಂದೆಯು ತೀರಿಕೊಂಡಿದ್ದರಿಂದ ಆಕೆಯ ತಾಯಿಯೆ ಮಗಳ ಮತ್ತು ಮಗನ ಜೋಪಾನ ಮಾಡಿದಳು ಕುಸುಮೆ ಅತ್ಯಂತ ರೂಪವತಿಯಾದ ಹುಡಿಗ ಆಕೆಯನ್ನು ಬಾಡಾಲ ಗ್ರಾಮದ ಜಮೀನುದಾರರಾದ ಗೌರದಾಸ ಅಧಿಕಾರಿಗಳು ನೋಡಿ, ಇಂಥ ಹುಡಿಗೆ ದೊರೆಯಲಿಕ್ಕಿಲ್ಲವೆಂದು ತಿಳಿದು, ತನ್ನ ಮಗ ವೃಂದಾವನನಿಗೆ ತೆಗೆದುಕೊಂಡು ಮದುವೆ ಮಾಡಿಬಿಟ್ಟರು ಕುಸುಮೆಗೆ ಆಗ ಐದು ವರ್ಷಗಳು ತುಂಬಿದ್ದುವು ಮಾತ್ರ ಮದುವೆಯಾದ ಸ್ವಲ್ಪ ದಿನಗಳಲ್ಲಿಯೆ ಕುಸುಮೆಯ ತಾಯಿಯ ವಿಚಾಗವಾಗಿ ಜನರು ಅಲ್ಲದ ಸಲ್ಲದ ಸೊಲ್ಲನ್ನು ಆಡತೊಡಗಿದರು ಆದುದರಿಂದ ಗೌರದಾಸರು ಕುಸುಮೆಯನ್ನು ಬಿಟ್ಟು, ತನ್ನ ಮಗ ವೃಂದಾವನನಿಗೆ ಬೇರೊಂದು ಮದುವೆಯನ್ನು ಮಾಡಿದರು

ಕುಸುಮೆಯ ತಾಯಿ ಬಡವೆ, ದುಃಖಿನಿ ಆದರೂ ಬಹಳ ಅಭಿಮಾನಿನಿ ಅವಳೂ ತನ್ನ ಮಗಳನ್ನು ಕೋಪದಿಂದ ಬೇರೊಂದೂರಿಗೆ ಕರೆದೊಯ್ದು ಒಬ್ಬ ಶುದ್ಧ ಬೈರಾಗಿಯೊಡನೆ ಅವಳ ಮದುವೆ ಮಾಡಿಸಿಬಿಟ್ಟಳು,

ಎಂದರೆ ಅವನಿಂದ ಆಕೆಯ ಮಂಗಲಸೂತ್ರವನ್ನು ಬದಲಾಯಿಸಿದಳು. ಆದರೆ ಆರು ತಿಂಗಳಲ್ಲಿಯೆ ಆ ಬೈರಾಗಿ ರಾಮನೂ ಪರಂಧಾಮಕ್ಕೆ ಹೊರಟು ಹೋದ ಬೈರಾಗಿ ರಾಮನು ಯಾರೆಂಬುದು ಕುಸುಮೆಯ ತಾಯಿಯ ಹೊರತು ಯಾರಿಗೂ ತಿಳಿದಿರಲಿಲ್ಲ ಕುಂಜ ವೈಷ್ಣವನಿಗೂ ಗೊತ್ತಿರಲಿಲ್ಲ. ಆಕೆಯ ತಾಯಿ ಮದುವೆಗೆ ಯಾರನ್ನೂ ಕರೆದುಕೊಂಡು ಹೋಗಿರಲಿಲ್ಲ. ನಿಜವಾಗಿ ಬೈರಾಗಿರಾಮನು ಕುಸುಮೆಗೆ ಮಂಗಲಸೂತ್ರವನ್ನು ಕಟ್ಟಿದ್ದನೋ ಅಥವಾ ಅದು ಜನರ ಹೇಳಿಕೆ ಮಾತ್ರವೊ ಎಂಬುದನ್ನು ದೃಢವಾಗಿ ಹೇಳುವುದು ದುಸ್ತರ ಇಷ್ಟೆಲ್ಲ ನಡೆದುದು ಕುಸುಮೆಗೆ ಏಳು ವರ್ಷ ಆಗುವುದರೊಳಗಾಗಿಯೆ ಅಂದಿನಿಂದ ಕುಸುಮೆ ವಿಧವೆ ಇದಿಷ್ಟು ಕುಸುಮೆಯ ಬಾಲ್ಯದ ಸಂಕ್ಷಿಪ್ತ ಇತಿಹಾಸ ಈಗ ಆಕೆ ಹದಿನಾರು ವರ್ಷದ ಯುವತಿ ಆಕೆಯ ಅಂಗಾಂಗಗಳಿಂದ ರೂಪ-ಲಾವಣ್ಯಗಳು ಹೊರ-ಹೊಮ್ಮುತ್ತಿವೆ ಸುರೂಪದಂತೆ ಸುಗುಣಗಳೂ ಆಕೆಯಲ್ಲಿ ಮನೆಮಾಡಿಕೊಂಡಿವೆ ಮನೆಯ ಕೆಲಸದಲ್ಲಿಯೂ ಅವಳು ಬಲು ಚೆದುರೆ ಅಲ್ಲದೆ ಓದು-ಬರೆಹದಲ್ಲಿಯೂ ಜಾಣೆ ದೊಡ್ಡವರ ಮನೆತನಕ್ಕೆ ಒಪ್ಪತಕ್ಕಂತಹ ರೂಪ, ನಡತೆ ಅವಳದು ಎಂದರೆ, ಅಯೋಗ್ಯವೆನಿಸದು

ಇತ್ತ ವೃಂದಾವನನ ತಂದೆಯವರು ತೀರಿಕೊಂಡರು, ಅವನ ಹೆಂಡತಿಯೂ ಕೈವಲ್ಯಕ್ಕೆ ಹೋದಳು ಅವನ ವಯಸ್ಸೇನೂ ಇಪ್ಪತ್ತೈದು–ಇಪ್ಪತ್ತಾರಕ್ಕೆ ಮಿಕ್ಕಿಲ್ಲ ಈಗ ಪುನಃ ಕುಸುಮೆಯ ಕೈಹಿಡಿಯಬೇಕೆಂಬ ಆಸೆ ಅವನಿಗೆ. ಆದ್ದರಿಂದ ಕುಸುಮೆಗೆ ಐವತ್ತು ರೂಪಾಯಿ, ಐದು ಜೊತೆ ಸೀರೆ-ಕುಪ್ಪುಸ, ಐದು ತೊಲೆ ಚಿನ್ನ ಮತ್ತು ನೂರು ತೊಲೆ ಬೆಳ್ಳಿಯ ಒಡವೆ ಕೊಡಲು ಸಿದ್ಧನಿರುವ ಕುಂಜ ವೈಷ್ಣವನಿಗೂ ತಂಗಿಯನ್ನು ವೃಂದಾವನನಿಗೆ ಕೊಡುವ ಆಸೆಯುಂಟಾಗಿದೆ ಕುಸುಮೆ ಈ ವಿವಾಹಕ್ಕೆ ಒಪ್ಪಬೇಕೆಂದು ಅವನ ಬಯಕೆ, ಆದರೆ ಅವಳು ಮಾತ್ರ ಅತ್ತ ಗಮನವನ್ನೇ ಕೊಡುತ್ತಿಲ್ಲ. ಈರ್ವರಿಗೂ ತಂದೆ-ತಾಯಿಯರಿಲ್ಲ ತಂಗಿ, ಅಣ್ಣ ಈರ್ವರೂ ವಾಸಿಸುತ್ತಿರುವದು ಒಂದು ಗುಡಿಸಲಿನಲ್ಲಿ ಗುಡಿಸಲು ಬ್ರಾಹ್ಮಣರ ಬೀದಿಯಲ್ಲೇ ಇರುವುದು ಆದ್ದರಿಂದ ಕುಸುಮೆಗೆ ಆಟಕ್ಕೆ ಬಾಲ್ಯದಿಂದ ಬ್ರಾಹ್ಮಣ ಹುಡಿಗೆಯರೇ ಜೊತೆಗಾತಿಯರು ಈಗ ದೊಡ್ಡವಳಾಗಿದ್ದರೂ ಅವಳಿಗೆ ಅವರ ಜೊತೆ ತಪ್ಪಲಿಲ್ಲ. ಅವರೊಡನೆಯೇ ಹರಿಪಂಡಿತರ ಪಾಠಶಾಲೆಯಲ್ಲಿ ಅಧ್ಯ

ಯನವೂ ಆಯಿತು ಇವೊತ್ತಿಗೂ ಆಕೆಯ ಗೆಳತಿಯರು ಬ್ರಾಹ್ಮಣ ಹುಡಿಗೆ ಯರು ಆದುದರಿಂದ ಹಿಂದಿನ ಮಾತುಗಳೆಲ್ಲ ನೆನಪಿಗೆ ಬಂದಕೂಡಲೆ ಆಕೆಗೆ ಅತ್ಯಂತ ದುಃಖವಾಗುವುದು ಆಕೆಯ ಶರೀರ ನಾಚಿಕೆಯಿಂದಲೂ ಜುಗುಪ್ಸೆ ಯಿಂದಲೂ ನಡುಗತೊಡಗುವುದು ಬಂಗಾಲದಲ್ಲಿ ಮಲೆಜ್ವರ ಮತ್ತು ಮಾರೀ ಬೇನೆಗಳ ಪ್ರಕೋಪದಿಂದ ಸ್ತ್ರೀಯರಿಗೆ ವಿಧವೆಯರಾಗಲು ಬ ಹು ಕಾ ಲ ಬೇಕಾಗುವುದಿಲ್ಲ ಆಕೆಯ ಬಾಲ್ಯದ ಅನೇಕ ಗೆ ಳ ತಿ ಯ ರು ತಮ್ಮ ಬಳೆ-ಗಳನ್ನು ಒಡೆದುಕೊಂಡು, ಕುಂಕುಮವನ್ನು ಅಳಿಸಿಕೊಂಡು, ತಮ್ಮ ಜನ್ಮ-ಸ್ಥಾನಕ್ಕೆ ಹಿಂದಿರುಗಿದ್ದಾರೆ * ಮಕರ-ಗಂಗಾಜಲ, ಮಹಾಪ್ರಸಾದ ನಾಮಕ ಗೆಳತಿಯರೂ ಇಂತಹರೊಳಗಿನವರೇ

ಛಿಃ! ಛಿಃ! ಅಣ್ಣನ ಮಾತನ್ನು ಒಪ್ಪಿಕೊಂಡರೆ ನಾನು ಇಡಿಯ ಜೀವ ಮಾನದಲ್ಲಿ ಈ ಊರಲ್ಲಿ ಯಾರಿಗಾದರೂ ಮುಖ ತೋರಿಸುವುದು ಸಾಧ್ಯವೆ!

ಕುಂಜನೆಂದ— " ತಂಗೀ, ನೀನು ಈ ಮಾತಿಗೆ ಒಪ್ಪಿಕೋ ಹಾಗೆ ಕೇಳಿದರೆ ವೃಂದಾವನನೇ ನಿನ್ನ ನಿಜವಾದ ಗಂಡ "

ಕುಸುಮೆ ಕೋಪದಿಂದ— " ಅಣ್ಣಾ, ನನಗೆ ನಿಜ-ಸುಳ್ಳು ಗೊತ್ತಿಲ್ಲ. ನಾನು ವಿಧವೆಯೆಂಬುದು ಮಾತ್ರ ನನಗೆ ಗೊತ್ತು ನಾ ನೇ ನು ನಾಯಿ, ಬೆಕ್ಕು ಎಂದು ತಿಳಿದುಕೊಂಡೆಯಾ— ಮನಬಂದಾಗ ಮನಬಂದುದನ್ನು ಮಾಡಲು ? ಅತ್ತ ಮದುವೆ—ಇತ್ತ ಮಂಗಲಸೂತ್ರ ಬದಲಾವಣೆ ! ಈಗ ಮತ್ತೆ ಮದುವೆ—ಮತ್ತೆ ಮಂಗಲಸೂತ್ರ ಬದಲಾವಣೆ ! ಹೋಗು, ನನ್ನೆ ದುರಿಗೆ ಇಂಥ ಮಾತನ್ನಾಡಬೇಡ ಬಾ ಡಾ ಲ ಗ್ರಾಮದವರು ನನಗೇನೂ ಆಗಬೇಕಾಗಿಲ್ಲ ನನ್ನ ಪತಿದೇವರು ದೈವಾಧೀನರಾಗಿರುವರು, ಈಗ ನಾನು ವಿಧವೆ" ಎಂದು ಉತ್ತರವಿತ್ತಳು

ಕುಂಜನ ಬಾಯಿ ಕಟ್ಟಿತು. ಸುಶಿಕ್ಷಿತಳಾದ ತೇಜಸ್ವಿನಿಯಾದ ತನ್ನ ತಂಗಿಯ ಎದುರಿನಲ್ಲಿ ಅವನು ಬೆದರುವನು ಆದರೂ ತನ್ನ ದೃಷ್ಟಿಯಿಂದಲೇ ವಿಚಾರಮಾಡುವನು ಅವನು ಬಹಳ ಸಾಧು ಪ್ರಾಣಿ, ಬ ಡ ವ ಅವನಿಗೆ ಎರಡು ಗುಡಿಸಲು, ಮಾವು ಹಲಸಿನ ಒಂದು ಚಿಕ್ಕ ತೋಪಿನ ಹೊರತಾಗಿ

---

* ಸಖಿಯರಿಗೆ ಪ್ರೀತಿಯಿಂದ ಇಟ್ಟ ಹೆಸರುಗಳು ಹೆಚ್ಚು ಪ್ರೀತಿಯಿದ್ದಲ್ಲಿ ಹುಡಿಗೆಯರು ತಮ್ಮ ಗೆಳತಿಯರಿಗೆ ಈ ರೀತಿ ಒಂದು ತಮಾಷೆಯಾದ ಹೆಸರನ್ನಿಟ್ಟು ಕರೆಯುವ ರೂಢಿ ಬಂಗಾಲದಲ್ಲಿದೆ

ಏನೂ ಇಲ್ಲ ಆದುದರಿಂದ, ಅವನಿಗೆ ತಂಗಿಯ ಸಲುವಾಗಿ ಸಿಗುವ ರೂಪಾಯಿ, ಬಟ್ಟೆ-ಬರೆ ಕಡಮೆಯೆನಿಸಲಿಲ್ಲ ಈ ಆಸೆಯನ್ನು ಒಂದು ಬದಿಗಿರಿಸಿದರೂ ಅವನು ತನ್ನ ಸ್ನೇಹದ ಏಕಮಾತ್ರ ಸಾಮಗ್ರಿಯಾದ ತಂಗಿಯನ್ನು ಒಂದು ಸುಖಸ್ಥಾನದಲ್ಲಿ ಕುಳ್ಳಿರಿಸಿ, ಆಕೆ ಸುಖಿಯಾಗಿರುವುದನ್ನು ಕಂಡು ತಾನೂ ಸುಖಿಯಾಗಬಯಸುವನು

ಅವರ ಸಮಾಜದಲ್ಲಿ ಮಂಗಲಸೂತ್ರ ಬದಲಾಯಿಸುವ ಪದ್ಧತಿಯಿದೆ. ಆದುದರಿಂದಲೆ ಅವನ ತಾಯಿ ಆ ಸಂಸ್ಕಾರವನ್ನು ಮಾಡಿಸಿದ್ದಳು ಆದರೆ ಅವನ ತಾಯಿ ಈಗ ಇಲ್ಲ ಕುಸುಮೆಯ ಸ್ವಾಮಿ ವೃಂದಾವನನು ಪುನಃ ಆಕೆಯನ್ನು ಪಡೆಯಲು ಇಷ್ಟು ತವಕಪಡುತ್ತಿರುವನು ಆದರೂ ಕುಸುಮೆ ಇಂಥ ಸುಯೋಗ ಕಳೆದುಕೊಳ್ಳುತ್ತಿರುವಳು ಅವಳೇಕೆ ಅವನ ಕಡೆಗೆ ಗಮನವೀಯುತ್ತಿಲ್ಲವೊ ಕುಂಜನಿಗೆ ತಿಳಿಯಲಿಲ್ಲ ಕೇವಲ ಸಮಾಜದ ಫೌಜದಾರರ, ಓಲೆಕಾರರ ಸಮ್ಮತಿ ಪಡೆದುಕೊಂಡು, ದೇವರಿಗೆ ಅವಲಕ್ಕಿ ಮೊಸರು ನೈವೇದ್ಯ ತೋರಿಸಿ ಅದನ್ನು ಎಲ್ಲರಿಗೂ ಹಂಚಿದರಾಯಿತು ! ಮದುವೆಯ ವೆಚ್ಚವನ್ನೆಲ್ಲಾ ವೃಂದಾವನನೇ ಕೊಡುವನು, ಬಳಿಕ ಅವಳು ಎಲ್ಲ ಕಷ್ಟಗಳಿಂದ ಮುಕ್ತಳಾಗಿ ಆನಂದದಿಂದ ರಾಣಿಯಾಗಿ ಇರುವಳು ಕುಸುಮೆ ಎಂಥ ತಿಳಿಗೇಡಿ ! ಆಹಾ ! ತಾನೇ ಕುಸುಮೆಯಾಗಿದ್ದರೆ ! ಸರಿ, ಕುಂಜ ದಿನಾಲೂ ಹೀಗೆಯೆ ಯೋಚಿಸುತ್ತಿರುವನು

ಕುಂಜ ನೂಲು, ಮಾಲೆ, ಬಾಚಣಿಕೆ, ಸಿಂಧೂರ, ಎಣ್ಣೆಯ ಮಸಾಲೆ, ಮಕ್ಕಳ ಆಟದೊಡವೆ ಮುಂತಾದ ನಾನಾಬಗೆಯ ವಸ್ತುಗಳನ್ನು ತಲೆಯ ಮೇಲೆ ಹೊತ್ತುಕೊಂಡು ದಿನಾಲು ಒಂದೆರಡು ಹಳ್ಳಿಗಳಿಗೆ ಹೋಗಿ ಮಾರಿ ಬರುವನು, ಸಾಯಂಕಾಲ ಬಂದ ಹಣವನ್ನು ತನ್ನ ತಂಗಿಯ ಕೈಗೆ ಕೊಡುವನು ಕುಸುಮೆ ಮೂಲಧನ ವೆಚ್ಚಮಾಡದೆ, ಬಂದ ಲಾಭದಲ್ಲಿಯೆ ಮನೆತನವನ್ನು ಅಚ್ಚುಕಟ್ಟಾಗಿ ಹೇಗೆ ಸಾಗಿಸುವಳೆಂಬುದು ಅವನಿಗೆ ತಿಳಿಯುತ್ತಿರಲಿಲ್ಲ, ಅವನು ತಿಳಿದುಕೊಳ್ಳಲು ಯತ್ನಿಸುತ್ತಲೂ ಇರಲಿಲ್ಲ

ಅವನು ಸಾಮಾನುಗಳೊಂದಿಗೆ ಅಲೆಯುತ್ತ ನಸುಕಿನಲ್ಲೇ ಬಾಡಾಲ ಗ್ರಾಮಕ್ಕೆ ಬಂದು ಮುಟ್ಟಿದ ದಾರಿಯಲ್ಲಿ ಅವನಿಗೆ ವೃಂದಾವನನ ಬೆಟ್ಟಿಯಾಯಿತು. ವೃಂದಾವನ ಎಲ್ಲಿಗೊ ಕೆಲಸಕ್ಕಾಗಿ ಹೊರಟಿದ್ದವನು ಕುಂಜನನ್ನು ನೋಡಿ, ಹಿಂದಿರುಗಿದನು, ತನ್ನ ಜಾತಿಯವನೂ ಬಳಗದವನೂ ಆದ ಕುಂಜನನ್ನು ಆದರದಿಂದ ತನ್ನ ಮನೆಗೆ ಕರೆದುಕೊಂಡು ಹೋಗಿ ಕೈ

ಕಾಲು ತೊಳೆದುಕೊಳ್ಳಲು ನೀರು ಕೊಟ್ಟನು ಚಿಲುಮೆಗೆ ಹೊಗೆಸೊಪ್ಪನ್ನು ಹಾಕಿ ಸೇದಲು ಕೊಟ್ಟು ಆದರಿಸಿದನು ಮಧ್ಯಾಹ್ನ ವೃಂದಾವನನ ತಾಯಿ ನಾನಾ ತರದ ಭಕ್ಷ್ಯ-ಭೋಜ್ಯಗಳನ್ನು ಮಾಡಿ ಕುಂಜನಿಗೆ ಊಟಕ್ಕೆ ಹಾಕಿ ದಳು ಸಾಲದ್ದಕ್ಕೆ ಅಷ್ಟು ಬಿಸಿಲಲ್ಲಿ ಸರ್ವಥಾ ಊರಿಗೆ ಮರಳಗೊಡಲಿಲ್ಲ

ಸಾಯಂಕಾಲ ಕುಂಜನು ತಿರುಗಿ ತನ್ನೂರಿಗೆ ಬಂದನು ಮನೆಗೆ ಹೋಗಿ ಕೈಕಾಲು ತೊಳೆದುಕೊಂಡು ಕಡಲೆ-ಪುರಿಗಳನ್ನು ಬಾಯಾಡಿಸುತ್ತ, ಹಾಗೆಯೆ ಇಡಿಯ ದಿನ ನಡೆದುದನ್ನೆಲ್ಲ ತನ್ನ ತಂಗಿಗೆ ತಿಳಿಸಿದನು ಕೊನೆಗೆ ವೃಂದಾವನನ ಮನೆತನದ ಪ್ರಶಂಸೆಯೂ ಆಯಿತು ತೋಟ-ಪಟ್ಟಿ, ಕೆರೆ, ಹೊಲಗಳು— ಯಾವುದಕ್ಕೂ ಕೊರತೆಯಿಲ್ಲ ಅವರ ಮನೆಯಲ್ಲಿ ಲಕ್ಷ್ಮಿ ಕಾಲು ಮುರಿದು ಬಿದ್ದಿದ್ದಾಳೆ !

ಕುಸುಮೆ ಕುಳಿತುಕೊಂಡು ಸುಮ್ಮಗೆ ಆಲಿಸುತ್ತಿದ್ದಳು, ಯಾವುದಕ್ಕೂ ಉತ್ತರಕೊಡಲಿಲ್ಲ ಇದೊಂದು ಒಳ್ಳೆಯ ಲಕ್ಷಣವೆಂಬ ಗ್ರಹಿಕೆಯಿಂದ ಕುಂಜನು ವೃಂದಾವನನ ತಾಯಿ ಎಂಥೆಂಥ ತಿನಿಸು ಮಾಡಿದ್ದಳು, ಎಷ್ಟು ಆದರ ಸತ್ಕಾರ ಮಾಡಿದಳು, ಇದನ್ನೆಲ್ಲಾ ವಿಸ್ತಾರವಾಗಿ ಬಣ್ಣಿಸಿದನು— "ಬೇಗನೆ ಊರಿಗ ಹೊರಡಲಿಕ್ಕಾದರೂ ಬಿಟ್ಟಳೆ ? ಇಷ್ಟು ಬಿಸಿಲಿನಲ್ಲಿ ಹೋದರೆ, ನಾಳೆ ತಲೆ ನೋವು ಬಂದು ಬೇನೆ ಬಿದ್ದಿಯಾ ಎಂದು ಕುಳ್ಳಿರಿಸಿ ಕೊಂಡಳು "

ಕುಸುಮೆ ಅಣ್ಣನ ಮುಖ ನೋಡಿ, ಮುಗುಳು ನಗುತ ನುಡಿದಳು— "ನೀನು ಇಡೀ ದಿನ ಇದೇ ಕೆಲಸದಲ್ಲಿದ್ದೆ ಹಾಗಾದರೆ ? ಸರಿ, ಹೊಟ್ಟೆತುಂಬ ಊಟ ಮಾಡಿದೆ, ಮಲಗಿದೆ ! "

ಕುಂಜನೂ ನಗುತ್ತ "ಹಾಗಾದರೆ ನೀನೇ ಹೇಳು ಕುಸುಮಾ, ನಾನೇನು ಮಾಡಬೇಕಾಗಿತ್ತು? ಏನು ಹೇಳಿದರೂ ಆಕೆ ಕೇಳದೆ ಇದ್ದಾಗ ನಾನು ಹಟ ದಿಂದ ಹೊರಟು ಬರುವುದು ಹೇಗೆ ? "

"ಒಳ್ಳೇದು, ಇನ್ನು ನೀನು ಆ ಊರಿಗೆ ಹೋಗುತ್ತಿರಬೇಡ "

ಕುಂಜನಿಗೆ ಈ ಮಾತು ಸರಿಯಾಗಿ ತಿಳಿಯಲಿಲ್ಲ ಅವನು ಕೇಳಿದ-- "ಏಕೆ ಹೋಗುತ್ತಿರಬಾರದು ? "

"ಅವರು ದಾರಿಯಲ್ಲಿ ಬೆಟ್ಟಿಯಾದರೆ ನಿನ್ನನ್ನು ಕರೆದುಕೊಂಡು ಮನೆಗೆ ಹೋಗುವರು ದೊಡ್ಡ ಮನುಷ್ಯರು, ಅವರಿಗೇನೂ ತೊಂದರೆಯಾಗುವುದಿಲ್ಲ, ಆದರೆ ನಮ್ಮಂಥವರ ಬಾಳುವೆ ಹೇಗೆ ಸಾಗಬೇಕು ? "

ತಂಗಿಯ ಈ ಮಾತಿನಿಂದ ಕುಂಜನು ಬಹಳ ನೊಂದುಕೊಂಡನು.

ಕುಸುಮೆಗೆ ಅಣ್ಣನು ನೊಂದುಕೊಂಡುದು ತಿಳಿಯದೆ ಇರಲಿಲ್ಲ ಆಕೆ ನಗುತ್ತ ಎಂದಳು— " ಇಲ್ಲಣ್ಣಾ, ನಿನ್ನ ಮನ ನೋಯಬೇಕೆಂದು ನಾನು ಹೀಗೆ ಹೇಳುವುದಿಲ್ಲ ಅಲ್ಲಿಗೆ ಹೋಗಲೇಬಾರದೆಂದೂ ನನ್ನ ಅಭಿಪ್ರಾಯವಲ್ಲ ಹಾಗೆ ಹೋದರೆ ಯಾವ ಹಾನಿಯೂ ಇಲ್ಲ ಆದರೆ ಅವರು ದೊಡ್ಡವರು, ನಾವು ಬಡವರು ಅವರೊಡನೆ ಹೆಚ್ಚು ಸ್ನೇಹ-ಸಂಬಂಧವನ್ನು ಬೆಳೆಸುವ ಆವಶ್ಯಕತೆಯಾದರೂ ಏನು ? "

" ಆದರೆ ಕುಸುಮಾ ! ನಾನೇನು ಕರೆಯದೆ ಅವರ ಮನೆಗೆ ಹೋಗುತ್ತೇನೆಯೆ ? "

" ಅದು ಸರಿಯೆ ಕರೆಯದೆ ನೀನು ಹೋಗುವುದಿಲ್ಲ ಆದರೆ ಅವರು ಕರೆದೊಯ್ದರೂ ನಾವೇಕೆ ಹೋಗಬೇಕು ? "

" ಹಾಗಾದರೆ ಈ ಬ್ರಾಹ್ಮಣರ ಹುಡಿಗೆಯರ ಸಂಗಡ ನೀನೇಕೆ ಇಷ್ಟು ಸ್ನೇಹ-ಸಂಬಂಧವನ್ನಿಟ್ಟುಕೊಂಡಿರುವೆ ? ಈ ಹುಡಿಗೆಯರೆಲ್ಲರೂ ದೊಡ್ಡವರ ಮನೆಯವರು ನೀನು ಅವರ ಮನೆಗೆ ಹೋಗುವುದಿಲ್ಲವೆ ? "

ತನ್ನ ಅಣ್ಣನ ಮನದ ಮಾತನ್ನರಿತುಕೊಂಡು ಕುಸುಮೆ ನಗತೊಡಗಿದಳು. ಆಕೆಯೆಂದಳು— "ಅವರೊಂದಿಗೆ ನಾನು ಬಾಲ್ಯದಿಂದ ಆಡುತ್ತ ಬಂದಿದ್ದೇನೆ ಮೇಲಾಗಿ ಅವರು ನಮ್ಮ ಜಾತಿಯವರೂ ಅಲ್ಲ, ನಮ್ಮ ಸಮಾಜದವರೂ ಅಲ್ಲ ಅವರ ಮನೆಗೆ ಹೋಗುವುದರಿಂದ ನಮ್ಮ ಮರ್ಯಾದೆ ಹೋಗದು ಅವರ ಮಾತೇ ಬೇರೆ "

ಸ್ವಲ್ಪ ಹೊತ್ತಿನವರೆಗೆ ಸುಮ್ಮನಿದ್ದು ಕುಂಜನೆಂದ—"ಇಲ್ಲ, ಅವರಲ್ಲಿಗೆ ಹೋಗುವುದರಿಂದಲೂ ಮರ್ಯಾದೆ ಹೋಗದು ಅವರ ಮೇಲೆ ಲಕ್ಷ್ಮಿಯ ಕಟಾಕ್ಷವಿರುವುದು ಸುಳ್ಳಲ್ಲ ನಾಲ್ಕು ದುಡ್ಡು ಅವರಲ್ಲಿರುವುದೂ ಸತ್ಯವೇ ಆದರೂ ಅವರಲ್ಲಿ ಅಹಂಕಾರ—ಅಭಿಮಾನಗಳು ಹೆಸರಿಗೂ ಸಿಗುವಂತಿಲ್ಲ ಎಲ್ಲರೂ ಮಣ್ಣಿನ ಗೊಂಬೆಗಳಂತಿದ್ದಾರೆ. ವೃಂದಾವನನ ತಾಯಿ ನನ್ನ ಎರಡೂ ಕೈಗಳನ್ನು ಹಿಡಿದು ಯಾವ ರೀತಿಯಾಗಿ . . "

ಅವನ ಮಾತು ಮುಗಿಯುವ ಮೊದಲೆ ನಡುವೆ ಬಾಯಿಹಾಕಿ ಕುಸುಮೆ ವಿರಕ್ತಿಯಿಂದಲೂ ವ್ಯಸ್ತತೆಯಿಂದಲೂ ಎಂದಳು— "ಪುನಃ ಅವೇ ಹಳೆಯ ಮಾತು. ನಮ್ಮ ತಾಯಿಯ ಹೆಸರಿಗೆ ಅವರು ಎಷ್ಟು ದೊಡ್ಡ ಮಸಿ ಹಚ್ಚಿದ್ದರು— ಏನಣ್ಣ ಅದನ್ನೆಲ್ಲ ನೀನು ಮರೆತಂತೆ ತೋರುವುದು, ಅಲ್ಲವೆ ? "

ಕುಂಜನು ಪ್ರತಿವಾದಿಸುತ್ತ “ ಇಲ್ಲ, ಅವರು ಒಂದೂ ಮಾತನಾಡಿರುವುದಿಲ್ಲ ಕೆಲಪುಂಡರು ಮಾತ್ರ ಹೊಟ್ಟೆಕಿಚ್ಚಿನಿಂದ ಸುಳ್ಳು ಸುಳ್ಳೇ ಕಲಂಕದ ಮಾತುಗಳನ್ನಾಡಿದ್ದರು ”

“ ಆಗಲೇ ಅಲ್ಲವೆ ಅವರು ನನ್ನನ್ನು ಮನೆಯಿಂದ ಹೊರದೂಡಿ ಬೇ-ರೊಂದು ಮದುವೆ ಮಾಡಿಕೊಂಡದ್ದು ! ಅದೇಕೆ ? ”

ಕುಂಜನು ಅಪ್ರತಿಭನಾಗಿ— “ ಸರಿ ಇದರಲ್ಲಿ ಪಾಪ, ವೃಂದಾವನದು ಯಾವ ದೋಷವೂ ಇಲ್ಲ ದೋಷವಿದ್ದರೆ ಅದು ಅವರ ತಂದೆಯವರದು ” ಎಂದ

ಸ್ವಲ್ಪಹೊತ್ತು ಸುಮ್ಮನಿದ್ದ ಬಳಿಕ ಕುಸುಮೆ ಶಾಂತ ಭಾವದಿಂದ “ ಒಳ್ಳೇದು ಅಣ್ಣಾ, ದೋಷ ಯಾರದೇ ಇರಲಿ, ಸಾಧ್ಯವಿಲ್ಲದ ಮಾತನ್ನು ಮತ್ತೆ ಮತ್ತೆ ಹೇಳುವ ಅಗತ್ಯವಾದರೂ ಏನು ? ನನಗೆ ನಿನ್ನೊಡನೆ ಚರ್ಚೆ ಮಾಡುವ ಇಚ್ಛೆಯಿಲ್ಲ ಹೋಗಲಿ ಬಿಡು ” ಎಂದಳು

ಕುಂಜನು ತಂಗಿಯ ಮಾತಿಗೆ ಕೂಡಲೆ ಉತ್ತರಕೊಡಲಿಲ್ಲ ಸ್ವಲ್ಪ ಹೊತ್ತಿನ ಮೇಲೆ ಕೋಪದಿಂದ “ ನೀನೇನೊ ವಾದಿಸಲಾರೆ, ಆದರೆ ನಾನು ಎಲ್ಲ ಮಾತಿನ ಕಡೆಗೂ ಲಕ್ಷ್ಯಗೊಡಬೇಕಾಗುತ್ತದೆ ಯೋಚಿಸು ಸ್ವಲ್ಪ— ಇಂದು ನಾನು ಸತ್ತುಹೋದರೆ ನಾಳೆ ನಿನ್ನ ಸ್ಥಿತಿಯೇನಾದೀತು ಎಂಬದನ್ನು” ಎಂದು ನುಡಿದನು

ಕುಸುಮೆ ವಿರಕ್ತಳಾದಳು ಆಕೆ ಯಾವ ಮಾತನ್ನೂ ಆಡಲಿಲ್ಲ

ಪುನಃ ಅವನು ಗಂಭೀರ ಭಾವದಿಂದ “ ನನಗೆ ಪರಿಚಯವಿದ್ದ ಎಲ್ಲ ಹಿರಿಯರನ್ನು ಈ ಸಂಬಂಧವಾಗಿ ವಿಚಾರಿಸಿರುವೆ ನಿನ್ನ ಅತ್ತೆ ನಲಡಾಂಗಾ ಗ್ರಾಮದ ವೃದ್ಧ ಬಾಬಾಜಿಯ ಅಭಿಪ್ರಾಯವನ್ನೂ ಕೇಳಿ ಬಂದಿದ್ದಾರೆ. ಇದಕ್ಕೆ ಎಲ್ಲರೂ ಸಂತೋಷದಿಂದ ಒಪ್ಪಿರುವುರೆಂಬುದು ನಿನಗೆ ಗೊತ್ತಿದೆಯೇನು ? ”

ಕುಸುಮೆಯ ಮುಖ ಸ್ವಲ್ಪ ಬಿಗಿಯಿತು. ಅವಳು ಸಂಕ್ಷೇಪವಾಗಿ “ ಹೌದು ಗೊತ್ತಿಲ್ಲದೇನು ? ” ಎಂದು ಸುಮ್ಮನಾದಳು

ತನ್ನ ಸಂಬಂಧವಾಗಿ, ತನ್ನ ವಿಚಾರವಾಗಿ, ತನ್ನ ಮಂಗಲಸೂತ್ರ ಪರಿವರ್ತನೆಯ ವಿಷಯವಾಗಿ ಸಮಾಜದಲ್ಲಿ ಆಲೋಚನೆ — ವಿಚಾರ ವಿನಿಮಯ–ನಡೆದಿದೆ, ಹಿರಿಯರ ಸಮ್ಮತಿ ತೆಗೆದುಕೊಳ್ಳಲಾಗುತ್ತಿದೆ, ಮೊದಲಾದ

ಮಾತುಗಳಿಂದ ಕುಸುಮೆ ಬಹಳ ರೇಗಿದಳು ಆಕೆ ತನ್ನ ಭಾವ ಹತ್ತಿಕ್ಕಿ ಕೇಳಿದಳು— "ಏಕಣ್ಣ, ಈಗ ನೀನೇನು ಊಟ ಮಾಡುವೆ?"

ಕುಂಜನಿಗೆ ತಂಗಿಯ ಮನದ ಮಾತು ತಿಳಿಯಿತು ಅವನು ಮುಖವನ್ನು ಗಂಭೀರ ಮಾಡಿಕೊಂಡು "ಏನೂ ಇಲ್ಲ ನನಗೆ ಹಸಿವು ಇಲ್ಲ" ಎಂದುಬಿಟ್ಟನು

ಕುಸುಮೆಗೆ ಇನ್ನಿಷ್ಟು ಸಿಟ್ಟುಬಂದಿತು, ಅದನ್ನು ಆಕೆ ತಡೆದುಕೊಂಡು ತನ್ನ ಕಿರುಮನೆಗೆ ಹೋಗಿಬಿಟ್ಟಳು

ಕುಂಜನು ಚಿಲುಮೆಯನ್ನುಹೊತ್ತಿಸಿ ಹೊಗೆಸೊಪ್ಪು ಸೇದುತ್ತ ಅಲ್ಲಿಯೆ ಕುಳಿತ ಆಮೇಲೆ ಚಿಲುಮೆಯನ್ನು ಗೋಡೆಗಾನಿಸಿ, "ಕುಸುಮಾ!" ಎಂದು ಕೂಗಿದ

ಕುಸುಮೆ ತನ್ನ ಕೋಣೆಯಲ್ಲಿ ಕುಳಿತು ಏನನ್ನೊ ಹೊಲಿಯುತ್ತಿದ್ದಳು ಆಕೆ ಅಲ್ಲಿಂದಲೇ "ಏನಣ್ಣ?" ಎಂದು ಕೇಳಿದಳು

"ರಾತ್ರಿ ಬಹಳವಾಯಿತು ಅಡಿಗೆ ಮಾಡುವುದಿಲ್ಲವೆ?"

"ಇಲ್ಲ, ಇಂದು ಏನೂ ಮಾಡುವುದಿಲ್ಲ"

"ಅದೇಕೆ?"

ಕುಸುಮೆ ಸಿಟ್ಟಿನಿಂದ "ನಾನು ನೂರಾರು ಸಲ ಹೇಳಲಾರೆ ಇವೊತ್ತು ಏನೂ ಮಾಡಲಾರೆ" ಎಂದಳು

ಕುಂಜ ಕಾಲು ಅಪ್ಪಳಿಸುತ್ತ ಕುಸುಮೆಯ ಕೋಣೆಗೆ ಹೋಗಿ— "ನೋಡು ಕುಸುಮಾ, ನನ್ನನ್ನು ರೇಗಿಗೆಬ್ಬಿಸಬೇಡ ಈಗಲೇ ಹೇಳಿಬಿಟ್ಟಿದ್ದೇನೆ ನೋಡು ನೀನು ಹೀಗೆಯೇ ನನ್ನನ್ನು ಪೀಡಿಸಿದರೆ ಮನಬಂದತ್ತ ಹೋಗಿ ಬಿಡುವೆ" ಎಂದ

"ಹೋಗು, ಈಗಲೇ ಹೋಗಿ ಬಿಡು ಮನೆಯಲ್ಲಿ ಮಾದಿಗರಂತೆ ಹೀಗೆ ನಾನು ಕೂಗಾಡಗೊಡಲಿಕ್ಕಿಲ್ಲ ಬೀದಿಯಲ್ಲಿ ನಿಂತು ಮನದಣಿ ಕೂಗಾಡು"

ಕುಂಜನು ಮತ್ತಿಷ್ಟು ಕೋಪದಿಂದ "ಕತ್ತೆ, ನೀನು ತಂಗಿಯಾಗಿ ಅಣ್ಣನನ್ನು ಮನೆಯಿಂದ ಹೊರಗೆ ಹಾಕಬಯಸುವೆಯಾ?" ಎಂದನು

"ಹೌದು ನೀನು ದೊಡ್ಡವನಾದ ಮಾತ್ರಕ್ಕೆ ಮನಬಂದುದನ್ನು ಮಾಡಬಹುದೆ?"

ತಂಗಿಯ ಮುಖವನ್ನು ನೋಡಿ ಕುಂಜನು ಮನದಲ್ಲಿಯೆ ಕೊಂಚ ಹೆದರಿದ, ಅವನು ಸ್ವಲ್ಪ ತಣ್ಣಗಾಗಿ ಕೇಳಿದ-- " ಅಲ್ಲ, ನಾನೇನು ಮಾಡಿದ್ದೇನೆ ಹೇಳು ? "

" ನೀನು ನನ್ನನ್ನು ಕೇಳದೆ ಅಲ್ಲಿಗೆ ಏಕೆ ಹೋದೆ ? ಅಲ್ಲಿ ಏಕೆ ಊಟ ಮಾಡಿದೆ ? "

" ಏಕೆ ? ತಪ್ಪೇನು ಇದರಲ್ಲಿ ? "

ಕುಸುಮೆ ಸ್ವಲ್ಪ ತೀವ್ರವಾಗಿ " ತಪ್ಪೇನು ? ಬಹಳ ದೊಡ್ಡ ತಪ್ಪು ಇನ್ನು ಎಂದಿಗೂ ಅಲ್ಲಿಗೆ ಹೋಗಕೂಡದು, ತಿಳಿಯಿತೆ ? "

ಅಣ್ಣನಾಗಿ ಈ ಕಲಹದಲ್ಲಿ ಸೋಲನ್ನು ಒಪ್ಪುವುದು ಕುಂಜನಿಗೆ ಲಜ್ಜಾಸ್ಪದವೆನಿಸಿತು ಅವನೆಂದ— " ನನ್ನ ಮೇಲೆ ಅಧಿಕಾರ ನಡೆಸುವಷ್ಟು ದೊಡ್ಡವಳಾದೆಯಾ ನೀನು ? ಮನಸ್ಸು ಬಂದಕಡೆಗೆ ನಾನು ಹೋಗುವವನೆ "

ಕುಸುಮೆಯೂ ಅಷ್ಟೇ ಜೋರಾಗಿ " ಇಲ್ಲ, ನಾನೆಂದಿಗೂ ಹೋಗಗೊಡಲಾರೆ ಇನ್ನೊಮ್ಮೆ ನೀನು ಹೋದುದರ ಸಮಾಚಾರ ಗೊತ್ತಾದರೆ ಚೆನ್ನಾಗಲಿಕ್ಕಿಲ್ಲ ನೋಡು ! " ಎಂದಳು

ಈಗ ಕುಂಜ ನಿಜವಾಗಿಯೂ ಹೆದರಿದ ಆದರೂ ಮೇಲೆ ಮೇಲೆ ಧೈರ್ಯ ತೋರಿಸುತ್ತ " ನಾನು ಹೋದರೆ ನೀನು ಮಾಡುವುದೇನು ? "

ಕುಸುಮೆ ಹೊಲಿಗೆಯನ್ನು ಬಿಸುಟು ಗಟ್ಟಿಯಾಗಿ—" ನೋಡು, ನನಗೆ ಸಿಟ್ಟು ಬರುವಂತೆ ಮಾಡಬೇಡ ನನ್ನ ಎದುರಿಗೆ ನಿಲ್ಲಬೇಡ, ಹೊರಟು ಹೋಗು " ಎಂದಳು

ಕುಂಜನು ಸೆಡವಿನಿಂದ ಕೋಣೆಯ ಹೊರಗೆ ಬಂದನು ಬಳಿಕ ಬಾಗಿಲ ಬಳಿ ನಿಂತು ಮೆಲ್ಲಗೆ ನುಡಿದ- " ನಿನಗೆ ಹೆದರಿ ಓಡಿ ಹೋಗುವೆನೆ ? ನಾನಲ್ಲಿಗೆ ಹೋಗುವೆ ನೀನೇನು ಮಾಡುವೆ ? "

ಕುಸುಮೆ ಏನೂ ಉತ್ತರ ಕೊಡಲಿಲ್ಲ ದೀಪವನ್ನು ಕೊಂಚ ದೊಡ್ಡದು ಮಾಡಿ ಪುನಃ ಹೊಲಿಯತೊಡಗಿದಳು ಕುಂಜನಿಗೆ ಮತ್ತೆ ಧೈರ್ಯಬಂದಿತು ಅವನು ದನಿಯನ್ನು ಸ್ವಲ್ಪ ಏರಿಸಿ " ಹುಟ್ಟು ಸ್ವಭಾವ ಸುಟ್ಟರೂ ಹೋಗದು ಎಂದು ಗಾದೆಯ ಮಾತು ತಾನು ಮಾಡಿದ್ದು ಉತ್ತಮ ಎಂದೂ ಗಾದೆ ಇದೆ ನೀನು ಮಾತ್ರ ಕೂಗಿ ಕೂಗಿ ಮಾತನಾಡಬಹುದು, ಆದರೆ ನಾನು ಮಾತನಾಡಿದರೆ ... " ಎಂದ

ಹೀಗೆ ಹೇಳಿ ಕುಂಜನು ಸ್ವಲ್ಪ ಹೊತ್ತು ಸುಮ್ಮನೆ ನಿಂತನು ಮಾರುತ್ತರ ಬರದಿದ್ದುದರಿಂದ ಅವನ ಮನಸ್ಸಿಗೆ ಸ್ವಲ್ಪ ಸಂತೋಷವೆನಿಸಿತು ತಿರಿಗಿ ತನ್ನ ಮೊದಲಿನ ಸ್ಥಳಕ್ಕೆ ಹೋಗಿ ಚಿಲುಮೆ ಹೊತ್ತಿಸಿ, ಒಂದೆರಡು ಜುರಿಕೆ ಎಳೆದ ನಂತರ ಕುಸುಮೆಯ ಕೋಣೆಯ ಬಳಿಗೆ ಬಂದು ಸ್ವಲ್ಪ ಉಚ್ಚ ಸ್ವರದಿಂದ ಎಂದ—"ನಾನು ಹಿರಿಯ, ಮನೆಯ ಒಡೆಯ, ಎಲ್ಲ ಕೆಲಸಗಳು ನನ್ನ ಅಪ್ಪಣೆಯ ಪ್ರಕಾರವಾಗಿ ನಡೆಯತಕ್ಕದ್ದು "

ತಿರಿಗಿ ಒಂದೆರಡು ಜುರಿಕೆ ಎಳೆದು "ನಾನು ಯಾರ ಮಾತನ್ನೂ ಕೇಳಬೇಕಾದುದಿಲ್ಲ ಯಾರ ಮಾತನ್ನೂ ಕೇಳುವುದಿಲ್ಲ, ಕೇಳುವುದಿಲ್ಲ ಎಂದು ಇಪ್ಪತ್ತು ಸಲ ಹೇಳುತ್ತೇನೆ ನಾನು ಮನೆಯ ಒಡೆಯ, ಮನೆ-ಮರ ಎಲ್ಲವೂ ನನ್ನದು ಹೀಗಿರುವಾಗ ನಾನು ಹೇಳಿದ್ದೇ ..."

ನಡುವೆ ಅವನಿಗೆ ಯಾರೋ ಹಿಂದಿನಿಂದ ಬರುತ್ತಿರುವಂತೆ ತೋರಿತು ಹೊರಳಿ ನೋಡಿದರೆ ಕುಸುಮೆ ಅವನ ಪೌರುಷ ಅಲ್ಲಿಯೆ ನಿಂತುಬಿಟ್ಟಿತು

ಕುಸುಮೆ ಸದ್ದಿಲ್ಲದೆ ಅವನ ಬಳಿ ಬಂದುನಿಂತು ದಿಟ್ಟಿಸಿ ನೋಡುತ್ತ ಎಂದಳು— "ಇಲ್ಲೇ ನಿಂತು ಜಗಳ ತೆಗೆಯಬೇಕೆನ್ನುವಿಯೊ ಸುಮ್ಮನೆ ಹೊರಟು ಹೋಗುವಿಯೊ ?"

ತಂಗಿಯ ತೀಕ್ಷ್ಣ ನೋಟದ ಎದುರು ಅಣ್ಣನ ಮನೆಯ ಒಡೆತನದ ಮಾತು ಸೂರ್ಯನ ಮುಂದೆ ಮಂಜಿನ ಹನಿಯಂತೆ ಹಾರಿ ಹೋಗತೊಡಗಿತು ಅವನ ಬಾಯಿಂದ ಮಾತೇ ಹೊರಡದಂತಾಯಿತು ಕುಸುಮೆ ತಿರುಗಿ "ಅಣ್ಣ, ಇಲ್ಲಿಂದ ಹೋಗುವಿಯೊ ಇಲ್ಲವೊ ?" ಎಂದಳು

ಈಗ ಕುಂಜನಾಥ ಕುಂಜನಾಥನಾಗಿ ಉಳಿಯಲಿಲ್ಲ ಅವನ ಮೊದಲಿನ ದರ್ಪವೂ ಉಳಿಯಲಿಲ್ಲ ಅವನು ಸ್ವಲ್ಪ ಬಿಗಿದ ಕಂಠದಿಂದ "ಚಿಲುಮೆಗೆ ಹೊಗೆಸೊಪ್ಪು ತುಂಬಿಕೊಂಡು ಆ ಮೇಲೆ ಹೋಗುವೆ" ಎಂದ

ಕುಸುಮೆ ಕೈಚಾಚಿ "ಕೊಡು ಇಲ್ಲಿ" ಎಂದು ಚಿಲುಮೆಯನ್ನು ತೆಗೆದುಕೊಂಡು ಹೊಗೆಸೊಪ್ಪು ತುಂಬಿ ತಂದುಕೊಡುತ್ತ "ಅಕ್ಕಸಾಲಿಗರ ಅಂಗಡಿಗೆ ಹೋಗುವುದಿಲ್ಲವೇನು ?" ಎಂದು ಕೇಳಿದಳು.

ಕುಂಜನು 'ಹೂಂ' ಎಂದ

ಕುಸುಮೆ ಸ್ವಾಭಾವಿಕ ದನಿಯಲ್ಲಿ "ಒಳ್ಳೇದು ಹೋಗು ಆದರೆ ಬಹಳ ರಾತ್ರಿ ಮಾಡಿ ಬರಬೇಡ ಅಡುಗೆಗೆ ತಡವಾಗುವುದಿಲ್ಲ" ಎಂದಳು

ಕುಂಜನಾಥ ಚಿಲುಮೆ ತೆಗೆದುಕೊಂಡು ಸಾವಕಾಶ ಹೊರಗೆ ಹೋದ.

೨

ಆ ದಿನ ಕುಂಜನು ತನ್ನ ತಂಗಿಗೆ ವೃಂದಾವನನ ಮನೆ-ಮಾರು ಆಸ್ತಿ-ಪಾಸ್ತಿಯ ಪರಿಚಯ ಮಾಡಿಕೊಟ್ಟುದರಲ್ಲಿ ಅತಿಶಯೋಕ್ತಿಯೇನೂ ಇರಲಿಲ್ಲ ನಿಜವಾಗಿಯೂ ಅವನ ಮನೆಯಲ್ಲಿ ಲಕ್ಷ್ಮಿಯ ಅಖಂಡ ಸಾಮ್ರಾಜ್ಯವಿದ್ದಿತು, ಆದರೆ ಈ ವಿಚಾರವಾಗಿ ಮನೆಯವರಾರಿಗೂ ಯಾವ ಬಗೆಯದೂ ಅಹಂಕಾರವಿರಲಿಲ್ಲ

ಆ ಊರಲ್ಲಿ ಯಾವ ಪಾಠಶಾಲೆಯೂ ಇಲ್ಲ ವೃಂದಾವನ ಚಿಕ್ಕವನಿರುವಾಗ ತಾನೇ ಪ್ರಯತ್ನಮಾಡಿ ಸ್ವಲ್ಪ ಓದು-ಬರೆಹ ಕಲಿತಿದ್ದ, ತನ್ನ ಊರಲ್ಲಿ ಒಂದು ಪಾಠಶಾಲೆಯನ್ನು ಸ್ಥಾಪಿಸಬೇಕೆಂದು ಸಂಕಲ್ಪವನ್ನು ಆಗಲೇ ಮಾಡಿದ್ದ ಆದರೆ ಗೌರದಾಸರು ವ್ಯವಹಾರ ಕುಶಲರು ವೃಂದಾ-ವನ ಅವರ ಏಕಮಾತ್ರ ಪ್ರೀತಿಯ ಪುತ್ರನಾಗಿದ್ದರೂ ಅವನಿಗೆ ಇಂಥ ಪ್ರಯೋಜನವಿಲ್ಲದ ವ್ಯಾಪ್ತಿಯಲ್ಲಿ ಕೈಹಾಕಗೊಡಲಿಲ್ಲ

ಅವರು ತೀರಿಹೋದ ಬಳಿಕ ತನ್ನ ಚಂಡೀಮಂಟಪದಲ್ಲಿ ಒಂದು ಪಾಠ ಶಾಲೆ ಪ್ರಾರಂಭಿಸಿ ವೃಂದಾವನನು ಊರಿನ ಎಲ್ಲ ವಿದ್ಯಾರ್ಥಿಗಳಿಗೂ ಪುಕ್ಕಟೆ ಶಿಕ್ಷಣ ದೊರೆಯುವಂತೆ ವ್ಯವಸ್ಥೆಮಾಡಿಸಿದನು ಹೀಗೆ ಅವನು ತನ್ನ ಹಳೆಯ ಸಂಕಲ್ಪವನ್ನು ಪೂರ್ಣಮಾಡಿಕೊಂಡು ತೃಪ್ತಿಬಟ್ಟನು

ಆ ಬೀದಿಯಲ್ಲಿ ಒರ್ವ ನಿವೃತ್ತ ಶಿಕ್ಷಕರಿದ್ದರು ತನಗೆ ಇಂಗ್ಲಿಷು ಕಲಿಸುವುದಕ್ಕಾಗಿ ಅವರನ್ನು ಗೊತ್ತುಮಾಡಿದನು ಅವರು ದಿನವೂ ರಾತ್ರಿ ಮನೆಗೆ ಬಂದು ಕಲಿಸಿ ಹೋಗುತಿದ್ದುದರಿಂದ ಈ ಸಂಗತಿ ಯಾರಿಗೂ ಗೊತ್ತಿರಲಿಲ್ಲ ಆದುದರಿಂದ ವೃಂದಾವನನು ಇಂಗ್ಲಿಷು ಬಲ್ಲವನೆಂಬುದು ಊರಿನವರಾರಿಗೂ ತಿಳಿದಿರಲಿಲ್ಲ ಅವನ ಹೆಂಡತಿ ತೀರಿ ಇಂದಿಗೆ ಐದು ವರ್ಷಗಳಾದವು ಈ ಪಂಚ ವರ್ಷಗಳಲ್ಲಿ ಅವನು ದಿನಾಲು ರಾತ್ರಿ ಓದು-ಬರಹದಲ್ಲಿ ತೊಡಗಿದ್ದು ಹಗಲಿನಲ್ಲಿ ಜಮೀನುದಾರಿಯ ಕೆಲಸ ನೋಡಿ ಸಾಯಂಕಾಲ ಒಕ್ಕಲುಮಕ್ಕಳಿಗ ಪಾಠಶಾಲೆಯಲ್ಲಿ ತಾನೇ ಪಾಠ ಹೇಳಿ-ಕೊಡುತ್ತಿದ್ದನು ತಾಯಿ ಪುನಃ ಮದುವೆ ಮಾಡಿಕೊಳ್ಳೆಂದು ಒತ್ತಾಯ ಪಡಿಸಿದಾಗ ತನ್ನ ಮಗನನ್ನು ತೋರಿಸಿ “ ಯಾವುದಕ್ಕಾಗಿ ಮದುವೆ ಮಾಡಿಕೊಳ್ಳಬೇಕೊ ಆ ವಸ್ತು ನಮ್ಮ ಬಳಿಯಲ್ಲಿದೆ ಈಗ ಮತ್ತೆ ಆ ಮದುವೆಯ ಅವಶ್ಯಕತೆಯೇನಮ್ಮ ? ” ಎನ್ನುತ್ತಿದ್ದನು

ತಾಯಿ ಬಹಳ ಅಳುತ್ತಿದ್ದಳು, ನಾನಾರೀತಿಯಾಗಿ ತಿಳಿಸಿ ಹೇಳುತ್ತಿದ್ದಳು ಆದರೆ ಅವನು ಯಾವುದಕ್ಕೂ ಕಿವಿಗೊಡಲಿಲ್ಲ ಹೀಗೆ ಎರಡು ವರ್ಷ ಕಳೆದುಹೋದವು

ಒಂದು ದಿನ ಅಕಸ್ಮಾತ್ತಾಗಿ ವೃಂದಾವನ ಕುಂಜ ವೈಷ್ಣವನ ಮನೆಯ ಎದುರಿನಲ್ಲಿ ಕುಸುಮೆಯನ್ನು ನೋಡಿದನು ಕುಸುಮೆ ನದಿಯಲ್ಲಿ ಮಿಂದು ಬಗಲಲ್ಲಿ ಬಿಂದಿಗೆಯನ್ನಿಟ್ಟುಕೊಂಡು ಬರುತ್ತಿದ್ದಳು ಆಗ ಅವಳು ಯೌವನದ ಪ್ರಾಂಗಣದಲ್ಲಿ ಪಾದವನ್ನಿಟ್ಟಿದ್ದಳು ವೃಂದಾವನ ನೆಟ್ಟನೋಟದಿಂದ ಅವಳನ್ನು ನೋಡುತ್ತ ನಿಂತ ಅವಳು ತನ್ನ ಮನೆಯೊಳಗೆ ಹೋದಬಳಿಕ ಮೆಲ್ಲಮೆಲ್ಲನೆ ಮುಂದೆ ಸಾಗಿದನು ಆ ಊರಿನವರೆಲ್ಲರ ಪರಿಚಯ ಅವನಿದ್ದುದರಿಂದ, ಈ ಹುಡಿಗೆ ಯಾರೆಂಬುದನ್ನು ಅವನು ತಿಳಿದುಕೊಂಡನು

ಏಕಮಾತ್ರ ಪುತ್ರರು ತಮ್ಮ ತಾಯಂದಿರಲ್ಲಿ ಯಾವ ಬಗೆಯ ಬಿಚ್ಚು-ಮನಸ್ಸಿನಿಂದ ನಡೆದುಕೊಳ್ಳುವರೊ ಅದೇ ಬಗೆಯಾಗಿ ವೃಂದಾವನ ತನ್ನ ತಾಯಿಯೊಡನೆ ನಡೆದುಕೊಳ್ಳುತ್ತಿದ್ದನು ಅವನು ಮನೆಗೆ ಬಂದು ನಿಃಸಂಕೋಚದಿಂದ ಕುಸುಮೆಯ ವಿಷಯವನ್ನು ತಾಯಿಗೆ ಹೇಳಿದನು ತಾಯಿಯೆಂದಳು—“ ಮಗೂ, ಅವರ ಹೆಸರು ಎಷ್ಟು ಕೆಟ್ಟಿದೆಯೆಂಬುದು ನಿನಗೆ ಗೊತ್ತಿಲ್ಲವೆ? ” ವೃಂದಾವನ “ಅದು ಏನೇ ಇರಲಮ್ಮ, ಆದರೂ ಆಕೆ ನಿನ್ನ ಸೊಸೆ ಆಕೆಯೊಡನೆ ನೀವು ನನ್ನ ಮದುವೆ ಮಾಡಿದಾಗ ಇದನ್ನೇಕೆ ಯೋಚಿಸಲಿಲ್ಲ? ” ಎಂದು ಕೇಳಿದನು

“ ಅದೆಲ್ಲ ನಿನ್ನ ತಂದೆಯವರಿಗೇ ಗೊತ್ತು ಅವರಿಗೆ ಅದು ಸರಿ ಎನಿಸಿತು, ಮಾಡಿದರು ”

“ ಒಳ್ಳೇದು, ಹಾಗೆಯೆ ಆಗಲಮ್ಮಾ, ನಾನು ಈಗ ಹೇಗೆ ಇರುವೆನೊ ಹಾಗೆಯೆ ಇರುವೆ ಇನ್ನು ನೀನು ಮದುವೆಗಾಗಿ ನನ್ನನ್ನು ಒತ್ತಾಯಪಡಿಸಬೇಡ ” ಎಂದು ವೃಂದಾವನ ಅಭಿಮಾನದಿಂದ ನುಡಿದು ಹೊರಗೆ ಹೊರಟುಹೋದನು

ಮತ್ತೆ ಮೂರು ವರ್ಷಗಳು ಸಂದವು ಈ ಅವಧಿಯಲ್ಲಿ ವೃಂದಾವನನ ತಾಯಿ ಕುಸುಮೆಯನ್ನು ತನ್ನ ಮನೆಗೆ ಕರೆತರಲು ಬಹಳ ಪ್ರಯತ್ನಿಸಿದಳು ಆದರೆ ಅದರಿಂದ ಯಾವ ಫಲವೂ ಆಗಲಿಲ್ಲ ಯಾವ ರೀತಿಯಿಂದಲೂ ಕುಸುಮೆಯ ಮನವೊಲಿಸುವುದು ಸಾಧ್ಯವಾಗಲಿಲ್ಲ ಕುಸುಮೆ ಒಪ್ಪದಿರಲಿಕ್ಕೆ ಎರಡು ಮುಖ್ಯ ಕಾರಣಗಳಿದ್ದುವು. ಅವಳು ತನ್ನ ಅಲ್ಪಬುದ್ಧಿಯ,

ಅಸಮರ್ಥ ಅಣ್ಣನನ್ನು ಬಿಟ್ಟು ಎಲ್ಲಾದರೂ ಹೋಗಿ ಸುಖದಿಂದ ಇರಲಾರಳು, ಎಂಬುದು ಮೊದಲನೆಯದು ಎರಡನೆಯದನ್ನು ಈ ಮೊದಲೇ ಹೇಳಲಾಗಿದೆ ಒಂದುವೇಳೆ ಯಾವುದೊಂದು ಧಾರ್ಮಿಕ ಸಂಸ್ಕಾರವೂ ಇಲ್ಲದೆ ಸಹಜವಾಗಿ ಅವಳು ತನ್ನ ಪತಿಯ ಮನೆಗೆ ಹೋಗಬಹುದಾಗಿದ್ದರೆ ಅವಳ ಮನಸ್ಸು ಅಣ್ಣನ ಅತ್ಯಂತ ಆಗ್ರಹವನ್ನು ಹೀಗೆ ತಿರಸ್ಕರಿಸುತ್ತಿರಲಿಲ್ಲ ಆದರೆ ಎಲ್ಲವೂ ಮತ್ತೆ ಮೊದಲಿನಿಂದ ಪ್ರಾರಂಭವಾಗಬೇಕಾಗಿದೆ– ತರತರದ ವೈಷ್ಣವರ ಪಡೆಗಳು ಬರಬಹುದು, ನನ್ನ ತಾಯಿಯ ಹೆಸರಿಗ ತಗಲಿದ ಸುಳ್ಳು ಅಪವಾದದ ಚರ್ಚೆ ಹೊರಡಬಹುದು, ನನ್ನ ಚಿಕ್ಕಂದಿನ ದಿನಗಳ ಗತಪುರಾಣದ ಶ್ರವಣವಾಗಬಹುದು, ಮತ್ತು ಇನ್ನು ಏನೇನು ಮಾತು ತಲಯೆತ್ತುವವೊ, ಗೊಂದಲವೇಳುವದೊ, ಅಕ್ಕಪಕ್ಕದ ಜನರು ಈ ಸಂಭ್ರಮ ನೋಡಲು ನೆರೆಯುವರೊ! ನನ್ನ ಗೆಳತಿಯರು ಸೋಜಿಗಗೊಂಡು ಬಂದು ಬಂದು ಇಣಿಕಿ ಹಾಕಿ ನೋಡಬಹುದು, ತಮ್ಮ ಮನೆಗೆ ಹೋಗಿ ನಗಚಾಟಿಕೆ ಎಬ್ಬಿಸುತ್ತ—"ಏನಮ್ಮಾ, ಸಮಗಾರ-ಹೊಲೆಯರಂತೆ ನಮ್ಮ ಕುಸುಮೆಯ ಉಡಿಕೆಯಾಯಿತು" ಎಂದು ಬಿಚ್ಚು ಮಾತಿನಲ್ಲಿ ಆಡಿಕೊಳ್ಳಬಹುದು ಹೀಗೆ ಕುಸುಮೆಯ ತಲೆಯಲ್ಲಿ ನಾನಾ ಕಲ್ಪನೆಗಳು ತರಂಗಿತವಾಗುತ್ತಿದ್ದವು ಛೀ! ಛೀ! ಈ ವಿಚಾರಗಳು ಬಂದೊಡನೆಯ ಅವಳು ನಾಚಿಕೆಯಿಂದ ಕುಗ್ಗಿಹೋಗುವಳು ದೊಡ್ಡವರ ಹೆಣ್ಣು-ಮಕ್ಕಳ ಜೊತೆಯಲ್ಲಿ ಕುಳಿತು ಓದುಬರಹ ಕಲಿತು ದೊಡ್ಡವಳಾದವಳು ಆಕೆ ತಾನು ಬಡವೆಯೇನೊ ಸರಿ ಆದರೆ ಆಚಾರ-ವಿಚಾರಗಳಲ್ಲಿ ತಾನು ಅವರಿಗಿಂತ ಕೀಳು ಎನಿಸಿಕೊಳ್ಳುವ ವಿಚಾರ ಅವಳಿಗೆ ಸಹನೆಯಾಗುತ್ತಿರಲಿಲ್ಲ

ನಿನ್ನೆ ಸಾಯಂಕಾಲ ಕುಸುಮೆ ತನ್ನ ಅಣ್ಣನೊಡನೆ ಸ್ವಲ್ಪ ಬಿರುನುಡಿಗಳನ್ನಾಡಿದ್ದಳು ಅವಳು ಸಿಡುಕಿನಿಂದ ಪೆಟ್ಟಿಗಯ ಬೀಗದ ಕೈಯನ್ನು ಅಣ್ಣನ ಮುಖಕ್ಕೆ ಚೆಲ್ಲಿಬಿಟ್ಟಿದ್ದಳು, ಸಿಟ್ಟಿನ ಭರದಲ್ಲಿ "ಇನ್ನು ಬೇಕಾದುದಾಗಲಿ, ನಾನು ಈ ಭೂಮಿಯ ಮೇಲೆ ಇರಲಾರೆ" ಎಂದಿದ್ದಳು ಇವತ್ತು ಮುಂಜಾನೆ ಅವಳು ನದಿಯಿಂದ ಸ್ನಾನ ಮಾಡಿಕೊಂಡು ಮನೆಗೆ ಬಂದಾಗ ಅಣ್ಣ ಮನೆಯಲ್ಲಿರಲಿಲ್ಲ, ಅವನ ಹೊತ್ತುಮಾರುವ ಸಾಮಾನುಗಳ ಪೆಟ್ಟಿಗೆಯೂ ಇರಲಿಲ್ಲ ಕುಸುಮೆ ಮನದೊಳಗೆ ನಗುತ್ತ ಎಂದಳು—" ನಿನ್ನೆ ಒಂದೆರಡು ಬಿರುನುಡಿಗಳನ್ನು ಆಡಿಸಿಕೊಂಡುದರಿಂದ ಇಂದು ಬೇಗನೆ ಮನೆ

ಬಿಟ್ಟು ಕೆಲಸಕ್ಕೆ ಓಡಿದ್ದಾನೆ ನಿನ್ನೆಯ ತನ್ನ ತಪ್ಪನ್ನು ತಿದ್ದಿಕೊಳ್ಳುವು ದಕ್ಕಾಗಿಯೆ ಹೋಗಿರುವನೆಂಬುದರಲ್ಲಿ ಏನೂ ಸಂದೇಹವಿಲ್ಲ"

ಆದರೆ ಕುಸುಮೆಯ ಕಲ್ಪನೆ ತಪ್ಪಾಗಿತ್ತು ವಸ್ತುಸ್ಥಿತಿ ಬೇರೆಯೆ ಇತ್ತು, ಅದು ಸ್ವಲ್ಪ ಹೊತ್ತಿನಲ್ಲೆ ಹೊರಗೆ ಬಂದಿತು

ನಿತ್ಯ ನಸುಕಿನಲ್ಲಿ ಎದ್ದೊಡನೆ ಕುಸುಮೆಗೆ ಹೊರೆಹೊರೆ ಮನೆಗೆಲಸ ಗಳು ಗಂಟು ಬೀಳುತ್ತವೆ ಇಡೀ ಮನೆಯನ್ನೂ ಅಂಗಳವನ್ನೂ ಗೋಮಯ ದಿಂದ ಸಾರಿಸಿ ಶುದ್ಧ ಮಾಡಬೇಕು, ಅಂಗಳವನ್ನು ಗುಡಿಸಿ ಸ್ವಚ್ಛ ಮಾಡ ಬೇಕು, ನದಿಯಲ್ಲಿ ಮಿಂದು ಮಡಿನೀರು ಹೊತ್ತು ತರಬೇಕು, ಆಮೇಲೆ ಅಣ್ಣನಿಗಾಗಿ ಅಡುಗೆ ಮಾಡಬೇಕು ಇಷ್ಟೆಲ್ಲಾ ಮುಗಿದು ಅಣ್ಣನ ಊಟ ಉಪಚಾರಗಳು ತೀರಿ ಅವನು ಸಾಮಾನುಗಳೊಂದಿಗೆ ಹೊರಹೊರಟನೆಂದರೆ ಮತ್ತೆ ಕುಸುಮೆಯ ಪೂಜೆ-ಪುರಸ್ಕಾರ ಪ್ರಾರಂಭವಾಗಬೇಕು ಒಮ್ಮೊಮ್ಮೆ ಕುಂಜ ವೈಷ್ಣವನು ಬೆಳಿಗ್ಗೆ ಊಟ ಮಾಡದೆಯೆ ವ್ಯಾಪಾರಕ್ಕೆ ಹೋಗುತ್ತಿದ್ದ ಆಗ ಊಟಕ್ಕಾಗಿ ಮಧ್ಯಾಹ್ನಕ್ಕೆ ಮರುಳುತ್ತಿದ್ದ

ಆದಿನ ಅಣ್ಣ ಮನೆಗೆ ಬರುವುದು ಇನ್ನೂ ತಡವೆಂದು ತಿಳಿದು ಕುಸುಮೆ ಹೂವು ಕೊಯ್ಯತೊಡಗಿದ್ದಳು ಅಂಗಳದಲ್ಲೊಂದುಕಡೆ ಹೂಗಿಡಗಳಿದ್ದವು-ಮಲ್ಲಿಗಯವು ಕೆಲವು, ಜಾಜಿಯವು ಕೆಲವು ಅವುಗಳಿಂದಲೇ ಅವಳು ನಿತ್ಯವೂ ತನ್ನ ಪೂಜೆಗೆ ಹೂ ಕೊಯ್ಯುವುದು ವಾಡಿಕೆ ಈ ದಿನವೂ ಅವಳು ಹೂ ಕೊಯ್ದುಕೊಂಡು ಪೂಜಾ ಸಾಮಗ್ರಿಯನ್ನು ಸಿದ್ಧಪಡಿಸಿಕೊಂಡು ಪೂಜೆಗೆ ಕುಳಿತುಕೊಳ್ಳುತ್ತಲೆ ಕೆಲವು ಚಕ್ಕಡಿಗಳು ಮನೆಯ ಮುಂದೆ ಬಂದು ನಿಂತವು ಮತ್ತು ಓರ್ವ ವಯಸ್ಸಾದ ಹೆಂಗುಸು ದಡದಡ ಬಾಗಿಲು ತೆರೆಯುತ್ತ, ಒಳಗೆ ಬಂದಳು ಇಬ್ಬರೂ ಒಬ್ಬರನ್ನೊಬ್ಬರು ಸ್ವಲ್ಪಹೊತ್ತು ನಿಟ್ಟಿಸುತ್ತ ನಿಂತರು ಕುಸುಮೆ ಆಕೆಯನ್ನು ಈ ಮೊದಲು ಎಂದೂ ನೋಡಿರಲಿಲ್ಲ ಆದರೆ ಹಣೆಯಲ್ಲಿ ತಿಲಕ ಕೊರಳಲ್ಲಿ ಮಾಲೆ ನೋಡಿ, ಆಕೆ ತನ್ನ ಜಾತಿಯವಳೇ ಇರಬೇಕೆಂದು ಊಹಿಸಿಕೊಂಡಳು

ಆ ವೃದ್ಧೆ ಕುಸುಮೆಯ ಬಳಿಸಾರಿ "ಮಗೂ, ನಿನಗೆ ನನ್ನ ಪರಿಚಯ ವಿರಲಿಕ್ಕಿಲ್ಲ ಆದರೆ ನಿನ್ನ ಅಣ್ಣನಿಗೆ ಚೆನ್ನಾಗಿ ಗೊತ್ತು ಕುಂಜನಾಥ ಎಲ್ಲಿ?" ಎಂದು ಕೇಳಿದಳು

"ಅವನು ಮುಂಜಾನೆಯಿಂದ ಮನೆಯಲ್ಲಿ ಇಲ್ಲ ಎಲ್ಲಿಗೊ ಹೋಗಿಬಿಟ್ಟಿದ್ದಾನೆ ತಡಮಾಡಿ ಬರಬಹುದೆಂದು ತೋರುತ್ತದೆ"

ಬಂದ ಹೆಣ್ಣುಮಗಳು ವಿಸ್ಮಯದಿಂದ "ಆಂ! ತಡಮಾಡಿ ಬರುವನೆ! ನಿನ್ನೆಯೆ ಅವನು ತನ್ನ ಭಾವನಿಗೂ, ಇನ್ನೂ ನಾಲ್ಕೈದು ಹುಡುಗರಿಗೂ ಊಟಕ್ಕೆ ಆಮಂತ್ರಣ ಕೊಟ್ಟು ಬಂದಿದ್ದಾನೆ ಇಂದು ಬೆಳಿಗ್ಗೆ ನನಗೂ ಹೋಗಿ ನನ್ನ ಸೊಸೆಯನ್ನು ಹರಿಸಿ ಬರಬೇಕೆನ್ನಿಸಿತು ಅದಕ್ಕೇ ಚಕ್ಕಡಿಯನ್ನು ಸಿದ್ಧಗೊಳಿಸುವಂತೆ ವೃಂದಾವನನಿಗೆ ಹೇಳಿ ಬಂದುಬಿಟ್ಟೆ" ಎಂದಳು.

ಇದನ್ನು ಕೇಳಿ ಕುಸುಮೆ ಸ್ತಂಭಿತಳಾದಳು ಆದರೂ ಕೂಡಲೆ ಸಾವರಿಸಿಕೊಂಡು ತಲೆಯ ಮೇಲಿನ ಸೆರಗನ್ನು ಕೊಂಚ ಮುಂದಕ್ಕೆಳೆದು ನಮಸ್ಕರಿಸಿದಳು ಕೋಣೆಯಿಂದ ಜಮುಖಾನೆಯನ್ನು ತಂದು ಹಾಸಿ ತಾನು ಹಾಗೆಯೇ ನಿಂತುಕೊಂಡಳು ಬಂದವಳು ತನ್ನ ಅತ್ತೆಯೆಂದು ಕುಸುಮೆಗೆ ತಿಳಿಯಿತು ಅತ್ತೆ ಜಮುಖಾನೆಯ ಮೇಲೆ ಕುಳಿತುಕೊಂಡು ನಗುತ್ತ ಎಂದಳು– "ನಿನ್ನೆ ಊಟ-ಉಡಿಗೆಯಾದ ಮೇಲೆ ವೃಂದಾವನ ಏನೋ ವಿನೋದವಾಗಿದ–'ಎಂಥ ದುರ್ಭಾಗ್ಯರಪ್ಪ ನಾವು, ಒಮ್ಮೆಯಾದರೂ ಬಂದು ನಮ್ಮ ಮನೆಯಲ್ಲಿ ಒಂದು ಗುಟುಕು ನೀರುಕುಡಿದು ಹೋಗೆಂದು ಹಿರಿಯಣ್ಣನಂತಹ ನಮ್ಮ ಕುಂಜನಾಥ ಕರೆಯಬಾರದೆ?' ಇತ್ತ ನನ್ನ ನಾದಿನಿಯ ಮಕ್ಕಳೂ ನಮ್ಮ ಮನೆಯಲ್ಲೇ ಇದ್ದಾರೆ ಕುಂಜನಾಥ ನಗುತ್ತ ಅವರೆಲ್ಲರಿಗೂ ಔತಣವಿತ್ತ ಆದುದರಿಂದ ಅವರೂ ಬಂದಿದ್ದಾರೆ"

ಕುಸುಮೆ ತಲೆಬಾಗಿಸಿಕೊಂಡು ಮೌನದಿಂದಿದ್ದಳು

ವೃಂದಾವನನ ತಾಯಿ ಕೆಳಗಿನ ತರಗತಿಯ ಹೆಂಗಸರಂಥವಳಲ್ಲ ಬಹಳ ತಿಳಿವಳಿಕೆಯುಳ್ಳವಳು ಕುಸುಮೆಯ ಮುಖಭಾವವನ್ನು ನೋಡಿ, ಏನೋ ಸ್ವಲ್ಪ ಗೊಂದಲವಾಗಿದೆಯೆಂಬುದು ಅವಳಿಗೆ ತೋರಿತು ಅವಳು ಸಂಶಯದಿಂದ "ಏನಮ್ಮಾ, ಕುಂಜನಾಥ ನಿನಗೇನೂ ಹೇಳಿ ಹೋಗಿಲ್ಲವೆ?" ಎಂದು ಕೇಳಿದಳು

ಕುಸುಮೆ ಸೆರಗಿನೊಳಗಿಂದಲೆ ತಲೆಯಲ್ಲಾಡಿಸಿ 'ಇಲ್ಲ' ಎಂಬುದನ್ನು ಸೂಚಿಸಿದಳು

ಆದರೆ ವೃಂದಾವನನ ತಾಯಿ ಅದನ್ನು ತಪ್ಪು ತಿಳಿದುಕೊಂಡು ಕುಂಜನಾಥನು ಹೇಳಿ ಹೋಗಿರುವನೆಂದು ಅರ್ಥಮಾಡಿಕೊಂಡಳು ಆದುದರಿಂದ ಅವಳು ಸಂತೋಷದಿಂದ "ಹಾಗಾದರೆ ಸರಿ" ಎಂದು ಕುಂಜನಾಥನನ್ನು ಸ್ನೇಹದಿಂದ ಉದ್ದೇಶಿಸಿ "ಹುಚ್ಚು ಹುಡುಗ, ಎಲ್ಲಾದರೂ ಮರೆತುಹೋಗಿರ

ಬಹುದು ಎಂಬ ಅಂಜಿಕೆಯಿತ್ತು ನನಗೆ! ಈಗ ನೋಡಿದರೆ, ಅವನು ಸಾಮಾನು ಕೊಂಡುತರಲಿಕ್ಕೆ ಹೋಗಿರಬೇಕೆಂದು ತೋರುತ್ತದೆ ಇಷ್ಟರಲ್ಲೇ ಬರಬಹುದು ಅಗೋ, ಅವರೆಲ್ಲರೂ ಬಂದೇ ಬಿಟ್ಟರು'' ಎಂದು ನುಡಿದಳು

ವೃಂದಾವನ ಹೊರಗಿನಿಂದಲೇ ಒಮ್ಮೆ "ಕುಂಜಣ್ಣ!" ಎಂದು ಕೂಗಿ ಅಂಗಳದಲ್ಲಿ ಬಂದು ನಿಂತ ಅವನ ಕೂಡ ಇನ್ನೂ ಮೂವರು ಹುಡುಗರಿದ್ದರು ಅವರೇ ವೃಂದಾವನನ ತಾಯಿಯ ನಾದಿನಿಯ ಮಕ್ಕಳು ವೃಂದಾವನನ ತಾಯಿಯೆಂದಳು–"ಕುಂಜನಾಥ ಎಲ್ಲೋ ಹೊರಗೆ ಹೋಗಿದ್ದಾನೆ ಮಗೂ, ಪಡಸಾಲೆಯಲ್ಲಿ ಜಮುಖಾನೆ ಹಾಸಮ್ಮ, ಅವರು ಕುಳಿತುಕೊಳ್ಳಲಿ"

ಕುಸುಮೆ ವ್ಯಸ್ತಚಿತ್ತದಿಂದ ಹೋಗಿ ಕಂಬಳಿ ಹಾಸಿದಳು, ಮತ್ತೆ ಚಿಲುಮೆಗೆ ತಂಬಾಕು ತುಂಬಿ ತರಲು ಅಡುಗಮನೆಗೆ ಹೊರಟಳು

ಇದನ್ನು ನೋಡಿ ವೃಂದಾವನ ನಗುತ್ತ ''ಇರಲಿ ಬಿಡು, ನಾವು ಹೊಗೆ-ಸೊಪ್ಪು ಸೇದುವುದಿಲ್ಲ'' ಎಂದ

ಕುಸುಮೆ ಚಿಲುಮೆಯನ್ನು ಕೆಳಗಿಟ್ಟು ಅಡುಗೆಯ ಮನೆಯ ಒಂದು ಕಂಬಕ್ಕೆ ಆತು ಸುಮ್ಮನೆ ನಿಂತುಬಿಟ್ಟಳು ಆಕೆಯ ವಿವೇಕಶೂನ್ಯ ಅಜ್ಞಾನಿ ಅಣ್ಣ ಅವಳನ್ನು ಎಂತಹ ಕತ್ತರಿಯಲ್ಲಿ ಸಿಕ್ಕಿಸಿ ಹೋಗಿಬಿಟ್ಟಿದ್ದಾನೆ! ಕೋಪ, ಅಭಿಮಾನ, ನಾಚಿಕೆ, ಅನಿವಾರ್ಯವಾಗಿ ಆಗಬಹುದಾದ ಅಪಮಾನದ ಕಲ್ಪನೆ, ಇವುಗಳಿಂದ ಆಕೆಯ ಕಣ್ಣುಗಳಲ್ಲಿ ನೀರುತುಂಬಿಬಂದಿತು ಅಡುಗೆಯ ಸಾಮಾನುಗಳೆಲ್ಲ ಹಿಂದಿನ ದಿನವೇ ತೀರಿಹೋಗಿದ್ದುವು ಮುಂಜಾನೆ ಸ್ನಾನಕ್ಕೆ ,ಹೊರಟಾಗ ಹಿಂದಿರಿಗಿದೊಡನೆಯೆ ಅಣ್ಣನನ್ನು ಪೇಟೆಗೆ ಕಳಿಸಬೇಕೆಂದು ಯೋಚಿಸಿದ್ದಳು ಆದರೆ ಬಂದಾಗ ಅಣ್ಣನ ಸುಳಿವೇ ಇಲ್ಲ ಕುಂಜನು ಯಾವುದಾದರೂ ಒಂದು ತಪ್ಪು ಮಾಡಿದಾಗ ತನ್ನ ತಂಗಿಗೆ ಹೆದರುತ್ತಿದ್ದಷ್ಟು ಯಾವ ಆಳುಮಗನೂ ತನ್ನ ನಿಷ್ಠುರ ಯಜಮಾನನಿಗೆ ಹೆದರುತ್ತಿರಲಿಕ್ಕಿಲ್ಲ! ದೊಡ್ಡವರ ಮನೆಯಲ್ಲಿ ಕೇವಲ ಉಂಡು ಬಂದ ಅಪರಾಧಕ್ಕಾಗಿಯೆ ಕುಸುಮೆ ಅಷ್ಟು ರೇಗಿದ್ದಳು ಈಗ ಪೀಕಲಾಟಕ್ಕೆ ಬಿದ್ದು ಅದೇ ದೊಡ್ಡ ಮನುಷ್ಯರನ್ನು ಪರಿವಾರ ಸಹಿತ ಊಟಕ್ಕೆ ಕರೆದು ಬಂದಿದ್ದಾನೆ! ಆದುದರಿಂದಲೇ ಈ ಮಾತನ್ನು ತನ್ನ ತಂಗಿಗೆ ಹೇಳುವಷ್ಟು ಧೈರ್ಯ ಸಾಲದೆ ಬೆಳಗಾಗುತ್ತಲೇ ಮನೆ ಬಿಟ್ಟು ಓಡಿಹೋದ ಇನ್ನು ಬೇಕಾದುದಾಗಲಿ, ಅವನು ರಾತ್ರಿಗೆ ಮೊದಲು ಮನೆಗೆ ಬರುವಂತಿಲ್ಲ

ಇದನ್ನು ಚೆನ್ನಾಗಿ ಬಲ್ಲ ಕುಸುಮೆ ಬಹಳ ವಿಕಲಲಾದಳು ಸಾಲದ್ದಕ್ಕೆ ಮತ್ತೊಂದು ದೊಡ್ಡ ಸಂಕಟ ಒದಗಿತು ಅವಳಲ್ಲಿ ಪೆಟ್ಟಿಗೆಯ ಬೀಗದ ಕೈ ಇರಲಿಲ್ಲ ಅದರಲ್ಲಿ ಹೊರತು ಹೊರಗೆ ಒಂದು ಕಾಸು ಕೂಡ ಇರಲಿಲ್ಲ

ಕುಸುಮೆ ನಿರುಪಾಯಳಾಗಿ ಐದು ನಿಮಿಷ ಹಾಗೆಯೇ ನಿಂತುಕೊಂಡಿದ್ದಳು ಬಳಿಕ ಒಮ್ಮೆಲ ಅವಳ ಕೋಪವೆಲ್ಲ ಶ್ರಾವಣದ ಮಳೆಯಂತೆ ವೃಂದಾವನನ ಮೇಲೆ ಇಳಿಯಿತು ನಿಜವಾಗಿ ಎಲ್ಲ ದೋಷವೂ ಇವರದೇ ಇವರೇಕೆ ನನ್ನ ತಿಳಿಗೇಡಿ ಅಣ್ಣನನ್ನು ಹಾದಿಯಲ್ಲಿ ತಡೆದು ಮನೆಗೆ ಕರೆದೊಯ್ಯಬೇಕು? ಈ ಪರಿಹಾಸವನ್ನೇಕೆ ಮಾಡಬೇಕು? ಇವರು ಯಾರೆಂದು ಅಣ್ಣನು ಇವರನ್ನು ಮನೆಗೆ ಕರೆತಂದು ಔತಣವೀಯಬೇಕು ?

ಈಗ ಮೂರು ವರುಷಗಳಿಂದ ಏನೇನೋ ನೆವ ತೆಗೆದು, ವೃಂದಾವನ ಮಹಾಶಯರು ಇತ್ತಕಡೆ ಬಂದು ಹೋಗುತ್ತಿರುವರು ಅದೆಷ್ಟೋ ರೀತಿ ಅಣ್ಣ-ತಂಗಿಯ ಮನದ ಆಳವನ್ನು ಅಳೆಯಲು ಹೆಣಗಿರುವರು ಎಷ್ಟೋ ಸಲ ಸಂಜೆ-ಮುಂಜಾನ ಕಾರಣವಿಲ್ಲದೆ ಮನೆಯ ಮುಂದೆ ಹಾಯ್ದು ಹೋಗಿರುವರು ನಮ್ಮ ದುರವಸ್ಥೆಯನ್ನು ಇವರು ಚೆನ್ನಾಗಿ ಬಲ್ಲರು, ಆದುದರಿಂದಲೇ ಬೇಕೆಂದೇ ನಮ್ಮ ಅವಮಾನ ಮಾಡಲು ಈ ಆಟ ಹೂಡಿರುವರು

ಕಟ್ಟಿಗೆಯ ಗೊಂಬೆಯಂತೆ ನಿಂತು ಕುಸುಮೆ ಕಣ್ಣೀರು ಸುರಿಸತೊಡಗಿದಳು ಅವಳು ಬಹಳ ಅಭಿಮಾನಿನಿ, ಆದರೆ ಈಗ ಏಕಾಕಿನಿಯಾಗಿದ್ದಾಳೆ, ಏನು ತಾನ ಮಾಡಬಲ್ಲಳು ?

ವೃಂದಾವನನ ತಾಯಿ ಎದ್ದು ಹೊರಗೆ ಹೋಗಿ, ಹುಡುಗರೊಡನೆ ಮಾತನಾಡತೊಡಗಿದಳು ಆದರೆ ಅವಳ ಮಗನ ಕಣ್ಣು ಕೋಣೆಯ ಬಳಿಯಲ್ಲೆ ಸುಳಿದಾಡುತ್ತಿದ್ದುವು ಅವು ಒಮ್ಮೆಲ ಅಡುಗೆ ಮನೆಯಲ್ಲಿ ಸುಮ್ಮನೆ ನಿಂತಿದ್ದ ಕುಸುಮೆಯ ಮೇಲೆ ನೆಟ್ಟವು ನಾಲ್ಕು ಕಣ್ಣು ಒಂದಾದಾಗ, ಆಕೆಯ ಕಣ್ಣು ತನ್ನನ್ನು ಸಂಕೇತದಿಂದ ಕರೆಯುತ್ತಿರುವಂತೆ ಅವನಿಗ ಭಾಸವಾಯಿತು ಕ್ಷಣಹೊತ್ತು ವೃಂದಾವನನ ಹೃದಯವು ಉನ್ಮತ್ತವಾಗಿ ಕುಣಿದಾಡಿ ಪುನಃ ಸ್ಥಿರವಾಯಿತು ಇದು ಅಸಂಭವ, ತನ್ನ ಕಣ್ಣುಗಳೇ ಮೋಸಹೋಗಿವೆ ಎಂದು ಅವನು ಭಾವಿಸಿಕೊಂಡನು

“ಅಕಸ್ಮಾತ್ ಎಲ್ಲಿಯಾದರೂ ನನಗೆದುರಾದರೂ ಅವಳು ಮುಖದ ಮೇಲೆ ಸೆರಗನ್ನೆಳೆದುಕೊಂಡು ಹೋಗಿಬಿಡುವಳು, ನನ್ನಲ್ಲಿ ಅವಳಿಗೆ ದಾರುಣವಾದ ಅಸಡ್ಡೆ ಇದೆಯೆಂದು ಕುಂಜನೂ ಎಷ್ಟೋ ಸಲ ಹೇಳಿದ್ದುಂಟು

ಇಂಥವಳು ಎಲ್ಲಿಯಾದರೂ ಸ್ವೇಚ್ಛೆಯಿಂದ ನನ್ನನ್ನು ತನ್ನ ಕಡೆಗೆ ಕರೆಯುವುದುಂಟೆ ? ಇದೆಂದೂ ಆಗದ ಮಾತು " ವೃಂದಾವನನು ತನ್ನ ನೋಟವನ್ನು ಬೇರೆಡೆಗೆ ತಿರುಗಿಸಿದನು ಆದರೆ ಕಣ್ಣು ಅಲ್ಲಿ ನಿಲ್ಲದಾದವು ಕಣ್ಣುಗಳು ಎಲ್ಲಿ ನಾಲ್ಕಾಗಿದ್ದವೊ ಅಲ್ಲಿ ಮತ್ತೆ ಹೊರಳಿದುವು ಸರಿ, ಕುಸುಮೆ ಅವನನ್ನೇ ದಿಟ್ಟಿಸುತ್ತಿದ್ದವಳು ಕೈಸನ್ನೆಯಿಂದ ಕರೆದಳು

ಅವನು ನಡುಗುತ್ತಿರುವ ಕಾಲುಗಳಿಂದ ಅಡುಗೆಯ ಮನೆಯ ಬಾಗಿಲಿಗೆ ಹೋಗಿ ಕೋಮಲ ಸ್ವರದಿಂದ—" ನನ್ನನ್ನು ಕರೆದೆಯಾ ? " ಎಂದನು

ಕುಸುಮೆಯೂ ಹಾಗೆಯೆ ಕೋಮಲ ದನಿಯಿಂದ " ಹೌದು " ಎಂದಳು ವೃಂದಾವನ ಇನ್ನಿಷ್ಟು ಮುಂದೆ ಸರಿದು " ಏಕೆ ? " ಎಂದ

ಕುಸುಮೆ ಸ್ವಲ್ಪ ಹೊತ್ತು ಸುಮ್ಮನಿದ್ದು ಗದ್ಗದ ಕಂಠದಿಂದ " ನಮ್ಮಂಥ ದೀನ ದುಃಖಿಗಳನ್ನು ಪೀಡಿಸಿ ತಮ್ಮಂತಹ ದೊಡ್ಡವರಿಗೆ ಏನು ಪುರುಷಾರ್ಥ ದೊರಕುತ್ತದೆ ಎಂದು ಕೇಳಲು ನಿಮ್ಮನ್ನು ಕರೆದೆ " ಎಂದಳು

ಹಂ ! ಒಮ್ಮೆಲೆ ಇದೆಂತಹ ಆರೋಪ ! ವೃಂದಾವನ ಸುಮ್ಮನೆ ನಿಂತುಬಿಟ್ಟ

ಕುಸುಮೆ ಇನ್ನಿಷ್ಟು ಕಠೋರಭಾವದಿಂದ " ನಾವು ಹೇಗೆ ದಿನಗಳೆಯುತ್ತಿರುವೆವೆಂಬುದನ್ನು ನೀವು ಅರಿಯಿರಾ ? ಮತ್ತೆ ಅಣ್ಣನ ಕೂಡ ಈ ಹುಡುಗಾಟಿಕೆ ಏಕೆ ? ಇಷ್ಟು ಜನರನ್ನು ಊಟಕ್ಕೆ ಕರೆದುಕೊಂಡು ಬಂದುದೇಕೆ ? " ಎಂದು ಕೇಳಿದಳು

ವೃಂದಾವನನಿಗೆ ಏನು ಉತ್ತರ ಕೊಡಬೇಕೆಂಬುದು ತಿಳಿಯದಾಯಿತು ಆದರೂ ಅವನು ಧೀರವೃತ್ತಿಯ ಮನುಷ್ಯ ಯಾವುದಕ್ಕೂ ಹೆಚ್ಚು ಹೊಯ್ದಾಡುವವನಲ್ಲ ಸ್ವಲ್ಪ ಹೊತ್ತು ಸುಮ್ಮನಿದ್ದು ಸಾವರಿಸಿಕೊಳ್ಳುತ್ತ ಶಾಂತರೀತಿಯಿಂದ ಕೇಳಿದ—" ಕುಂಜಣ್ಣನೆಲ್ಲಿ ? "

" ಗೊತ್ತಿಲ್ಲ ಹೇಳದೆ ಕೇಳದೆ ನಸುಕಿನಲ್ಲೇ ಎಲ್ಲಿಗೊ ಹೋಗಿಬಿಟ್ಟಿರುವ "

ಸ್ವಲ್ಪ ಹೊತ್ತು ಸುಮ್ಮನಿದ್ದು ವೃಂದಾವನನು " ಆಗಲಿ, ಅವನು ಹೋಗಿದ್ದರೆ ಹೋಗಲಿ ಬಿಡು ನಾನಿದ್ದೇನಲ್ಲವೆ ? ಮನೆಯಲ್ಲಿ ಅಡುಗೆಯ ಸಾಮಾನು ಏನೂ ಇಲ್ಲವೆ ? " ಎಂದು ಕೇಳಿದನು

" ಇಲ್ಲ, ಏನೂ ಇಲ್ಲ, ಎಲ್ಲ ಸಾಮಾನೂ ಮುಗಿದಿವೆ ತರುವೆನೆಂದರೆ ಒಂದು ಕಾಸೂ ನನ್ನಲ್ಲಿಲ್ಲ "

" ಈ ಊರಲ್ಲಿ ನಿನ್ನಂತೆಯೆ ನನ್ನ ಗುರುತೂ ಎಲ್ಲರಿಗಿದೆ ನಾನು ಎಲ್ಲ ಸಾಮಾನು ಕೊಂಡು ಮೋದಿಯ ಕೈಯಲ್ಲಿ ಕೊಟ್ಟು ಕಳಿಸುವೆ ನನಗೆ ಒಂದು ಸ್ನಾನದ ಪಂಚೆ ಕೊಡು ಈಗಲೆ ನಾನು ಸ್ನಾನ ಮಾಡಿ ಬರುವೆ. ಅಮ್ಮ ಕೇಳಿದರೆ, ಸ್ನಾನಕ್ಕೆ ಹೋಗಿರುವೆನೆಂದು ಹೇಳು ಇನ್ನು ಇಲ್ಲಿ ನಿಂತಿರಬೇಡ, ಹೋಗು."

ಕುಸುಮೆ ಕೋಣೆಯೊಳಗಿಂದ ಒಂದು ಪಂಚೆ ತಂದು ಕೊಟ್ಟಳು

ಅವನು ಅದನ್ನು ತಲೆಗೆ ಸುತ್ತುತ್ತ ಕುಚೇಷ್ಟೆ ಮಾಡಿದ—" ನೀನು ಕುಂಜ ವೈಷ್ಣವನ ತಂಗಿ ಆದುದರಿಂದಲ ಅವನು ನಿನ್ನೊಬ್ಬಳನ್ನೆ ಬಿಟ್ಟು ಹೋಗಿರುವ ಮತ್ತಾವಳಾದರೂ ಆಗಿದ್ದರೆ ಹೀಗೆ ಬಿಟ್ಟು ಹೋಗುತ್ತಿರಲಿಲ್ಲ"

" ಎಲ್ಲರೂ ಹೀಗೆ ಬಿಟ್ಟು ಹೋಗುವದಿಲ್ಲ ನಿಜ ಆದರೆ ಕೆಲ-ಕೆಲವರು ಒಳ್ಳೇ ಮೋಜಿನಿಂದ ಬಿಟ್ಟು ಹೋಗುವದೂ ಉಂಟು" ಎಂದು ಕುಸುಮೆ ಮೆಲ್ಲಗೆ ಉತ್ತರವಿತ್ತಳು

ಹೀಗೆ ಹೇಳಿ ಕುಸುಮೆ ಈ ಮಾತಿನ ಪರಿಣಾಮ ಏನಾಗುವುದೆಂಬುದನ್ನು ಕದ್ದು ನೋಡಿದಳು

ವೃಂದಾವನ ಅಲ್ಲಿಂದ ಹೊರಡಲು ಕಾಲೆತ್ತಿದವನು ಸ್ವಲ್ಪ ತಡೆದು ಅವಳ ವ್ಯಂಗವನ್ನು ಎದುರಿಸಿದನು— " ಈ ನಿನ್ನ ಭ್ರಮೆ ಕ್ರಮೇಣ ದೂರವಾದೀತು ನಿನ್ನ ಚಿಕ್ಕಂದಿನಲ್ಲಿ ನಿನ್ನ ತಾಯಿಯಿಂದಾದ ಯಾವ ದೋಷಕ್ಕೂ ನೀನು ಹೇಗೆ ಹೊಣೆಯಲ್ಲವೊ ಹಾಗೆಯೆ ನಾನೂ ನನ್ನ ತಂದೆಯ ತಪ್ಪಿಗೆ ಹೂಣೆಯಲ್ಲ ಆದರೆ ಇರಲಿ ಬಿಡು, ಈ ಜಗಳಕ್ಕೆ ಹೊತ್ತು ಇದಲ್ಲ ಹೋಗು ಅಡುಗಯ ಸಿದ್ಧತೆ ಮಾಡು "

" ಅಡುಗೆಯ ಸಿದ್ಧತೆಯನ್ನೇನು ಮಾಡಲಿ! ನನ್ನನ್ನೇ ಕೊಚ್ಚಿ ಬೇಯಿಸಿ ಹಾಕಿದರೆ, ನಿಮ್ಮ ಹೊಟ್ಟೆ ತುಂಬುವಂತಿದ್ದರೆ ಅದನ್ನೂ ಮಾಡುವೆ"

ವೃಂದಾವನ ಒಂದೆರಡು ಹೆಜ್ಜೆ ಮುಂದೆ ಹೋಗಿದ್ದನು ಅಷ್ಟರಲ್ಲಿ ಹಿಂತಿರುಗಿ ಬಂದು, ಈ ಮಾತಿಗೆ ಯಾವ ಉತ್ತರವನ್ನೂ ಕೊಡದೆ ಮೆಲು-ದನಿಯಲ್ಲಿ " ನಿನ್ನ ಮನಸ್ಸಿಗೆ ಬಂದುದನ್ನೆಲ್ಲ ನೀನು ನನಗೆ ಆಡಬಹುದು. ನಾನಂತೂ ಸಹಿಸಲೇಬೇಕು ಆದರೆ ಹೀಗೆ ಕೋಪದ ಭರದಲ್ಲಿ ನಿನ್ನ ಅತ್ತೆಗೆ ಇಂತಹ ಯಾವ ಮಾತನ್ನೂ ಆಡಬೇಡ ಆಕೆಗೆ ಚಿಕ್ಕಮಾತೂ ಒನಕೆಯ ಪೆಟ್ಟಾಗಬಹುದು" ಎಂದನು

ಕುಸುಮೆ ಕೋಪದಿಂದ ಬುಸುಗುಟ್ಟುತ್ತ–"ನಾನು ಪಶುವಲ್ಲ, ನನಗೂ ಸ್ವಲ್ಪ ಬುದ್ಧಿಯಿದೆ" ಎಂದಳು

" ಇದು ನನಗೆ ಗೊತ್ತು ಆದರೆ ಬುದ್ಧಿಗಿಂತ ಕೋಪ ಹೆಚ್ಚಾಗಿದೆ ಯೆಂಬುದನ್ನೂ ನಾನು ಬಲ್ಲೆ ನೋಡು ಕುಸುಮಾ, ಅಮ್ಮ ಮಿಂದೇ ಬಂದಿದ್ದಾಳೆ ಆದರೆ ಅವಳ ಪೂಜಾ–ಪಾರ ಮುಗಿದಿಲ್ಲ ಅವಳನ್ನು ಕೇಳಿ, ಮೊದಲು ಅದರ ವ್ಯವಸ್ಥೆ ಮಾಡು ನಾನು ಪೇಟೆಗೆ ಹೋಗಿ ಬರುವೆ "

" ಹೋಗಿ ಬನ್ನಿರಿ ಆದರೆ ಎಲ್ಲಾದರೂ ಹರಟುತ್ತ ಮಾತ್ರ ಕೂತು ಕೊಳ್ಳಬೇಡಿರಿ "

ವೃಂದಾವನ ನಗುತ್ತ " ಇಲ್ಲ, ಆದರೆ ಸ್ವಲ್ಪ ಹೊತ್ತಾಗಿ ಬಂದು ನಿನ್ನಿಂದ ಅನ್ನಿಸಿಕೊಳ್ಳುವ ಆಸೆ ಇದೆ ನನಗೆ ಈ ಬಯಕೆ ಮುಂದೆ ಎಂದಾದರೂ ಕೈಗೂಡುವಂತಿದ್ದರೆ ಇಂದು ಬೇಗ ಬರುವೆ" ಎಂದನು

" ಅದನ್ನು ಆಮೇಲೆ ನೋಡೋಣ " ಎಂದು ಕುಸುಮೆ ಅಡುಗೆಯ ಮನೆಗೆ ಹೋಗುತ್ತಲಿದ್ದಳು ಅಷ್ಟರಲ್ಲಿ ವೃಂದಾವನನು ಒಂದು ನಿಡುಸುಯ್ಲು-ಗರೆದು ಕೋಮಲ ದನಿಯಿಂದ " ನೋಡು ಕುಸುಮಾ, ನೀನು ನನ್ನೊಡನೆ ಇಂದು ಮಾತನಾಡುತ್ತಿರುವುದು ಮೊದಲ ಸಲವೆಂದು ನನಗ ಒಮ್ಮೆಯೂ ಎನಿಸಲಿಲ್ಲ ! ಯುಗ-ಯುಗಾಂತರಗಳಿಂದ ಹೀಗ ನನ್ನನ್ನು ಆಳುತ್ತಿರುವೆಯೊ ಏನೊ ಎಂದು ತೋರಿತು ಪರಮಾತ್ಮನಿಂದ ಬಿಗಿಯಲ್ಪಟ್ಟ ಬಂಧನವಿದು ಎಷ್ಟು ವಿಲಕ್ಷಣವಾಗಿರುವುದು ಕುಸುಮಾ ! " ಎಂದ

ಕುಸುಮೆ ಸುಮ್ಮನೆ ಕೇಳುತ್ತಿದ್ದಳು ಮಾತ್ರ ಯಾವ ಉತ್ತರವನ್ನೂ ಕೊಡಲಿಲ್ಲ

ವೃಂದಾವನ ಹೊರಟು ಹೋದ ಮೇಲೆ ಅವನ ಮಾತುಗಳನ್ನು ನೆನೆದು ಕೊಂಡಾಗ ಕುಸುಮೆಗೆ ರೋಮಾಂಚನವಾಯಿತು ಅಡುಗೆ ಮನೆಗ ಹೋಗಿ ಸುಮ್ಮನೆ ಕುಳಿತುಬಿಟ್ಟಳು ವೃಂದಾವನನು ಓರ್ವ ಅಶಿಕ್ಷಿತ ಜಮೀನುದಾರನೆಂದು ತಿಳಿದು, ಕಲಿತವಳಾದ ತಾನು ಅಭಿಮಾನದಿಂದ ಅವನನ್ನು ಇದು ವರೆಗೆ ಗಣನೆಗೆ ತಂದಿರಲಿಲ್ಲ ಆದರೆ ಇಂದಿನ ಅವನ ಮಾತುಕತೆ, ರೀತಿ-ನೀತಿ ಗಳನ್ನು ನೋಡಿ ಅವನ ವಿಷಯದಲ್ಲಿ ಅವಳಿಗೆ ಒಂದು ಬಗಯ ಆದರ ಹುಟ್ಟಿ, ಯಾವುದೋ ನೂತನ ಆಕಾಂಕ್ಷ ಅವಳ ಹೃದಯದಲ್ಲಿ ಜಾಗೃತ ವಾಯಿತು

೩

ಆದಿನ ಸಾಯಂಕಾಲ ಮನೆಗೆ ಹಿಂದಿರುಗುವ ಮೊದಲು ವೃಂದಾವನನ ತಾಯಿ ಕುಸುಮೆಯನ್ನು ಹತ್ತಿರ ಕರೆದು ಗದ್ಗದ ಸ್ವರದಿಂದ "ಮಗೂ, ಈದಿನ ಎಷ್ಟು ಆನಂದದಿಂದ ಕಳೆಯಿತೆಂಬುದನ್ನು ನಾನು ಹೇಳಲಾರೆ! ನಿನಗೆ ಸದಾ ಸುಖವಾಗಲಮ್ಮಾ" ಎಂದು ತನ್ನ ಸೆರಗಿನೊಳಗಿಂದ ಒಂದು ಜೊತೆ ಬಂಗಾರದ ಬಳೆಯನ್ನು ಹೊರಗೆ ತೆಗೆದು ತನ್ನ ಕೈಯಿಂದ ಕುಸುಮೆಯ ಕೈಗೆ ತೊಡಿಸಿದಳು

ಕುಸುಮೆಯ ಇಂದಿನ ವ್ಯವಸ್ಥೆಯೆಲ್ಲ ವೃಂದಾವನನ ಗುಪ್ತಸಹಾಯದಿಂದಲೇ ನಡೆಯಿತೆಂಬುದನ್ನು ತಿಳಿದು ವೃಂದಾವನನ ತಾಯಿಯ ಹೃದಯವು ಆಸೆ-ಆನಂದಗಳಿಂದ ತುಂಬಿಹೋಗಿದ್ದಿತು ಕುಸುಮೆ ತಲೆಗೆ ಸೆರಗನ್ನೆಳೆದುಕೊಂಡು ಬಂದು ಅತ್ತೆಗೆ ನಮಸ್ಕರಿಸಿದಳು ಆಕೆಯ ಪಾದಧೂಳಿಯನ್ನು ಸಿರಸಾವಹಿಸಿ ಸುಮ್ಮನೆ ನಿಂತಳು ಅತ್ತೆ-ಸೊಸೆಯರಲ್ಲಿ ಮತ್ತಾವ ಮಾತು-ಕತೆಯೂ ನಡೆಯಲಿಲ್ಲ ಬಂಡಿಯಲ್ಲಿ ಕುಳಿತು ಆಕೆ ಸೊಸೆಗೆ ಹೇಳಿದಳು—"ಮಗೂ, ಕುಂಜನಾಥ ಇಡೀ ದಿನ ಕಾಣಿಸಲೇ ಇಲ್ಲ ಹುಚ್ಚನಂತೆ ಎಲ್ಲಿ ತಿರುಗುತ್ತಿರುವನೋ ಏನೊ ? ನಾಳೆ ಅವನನ್ನು ನಮ್ಮ ಮನೆಗೆ ತಪ್ಪದೆ ಕಳಿಸಿಕೊಡು"

ಕುಸುಮೆ ತಲೆಯಲ್ಲಾಡಿಸಿ— "ಹುಂ" ಎಂದಳು

ವೃಂದಾವನನ ಅಜ್ಜ, ಮನೆಯಲ್ಲಿ ಗೌರಾಂಗ ಪ್ರಭುಗಳ ಪ್ರತಿಮೆಯನ್ನು ಸ್ಥಾಪಿಸಿದ್ದರು ವೃಂದಾವನನ ತಾಯಿ ನಿತ್ಯ ಆ ಕೋಣೆಯಲ್ಲಿ ಕುಳಿತೇ ಕಟ್ಟಿರುಳವರೆಗೆ ಜಪಮಾಡುತ್ತಿದ್ದಳು ಇಂದೂ ಅವಳು ಜಪಮಾಡುತ್ತ ಕುಳಿತಿದ್ದಳು ಅವಳ ಮೊಮ್ಮಗ ಅವಳ ತೊಡೆಯ ಮೇಲೆ ತಲೆಯಿಟ್ಟು ಮಲಗಿದ್ದ ಅವಳು ಕೂತಲ್ಲಿ ದೀಪದ ನೆರಳು ಬಿದ್ದಿತ್ತು ಆದುದರಿಂದ ವೃಂದಾವನ ಕೋಣೆಯನ್ನು ಪ್ರವೇಶಿಸಿದಾಗ ಅವನಿಗೆ ಇವರು ಕಾಣಲಿಲ್ಲ ಅವನು ವೇದಿಕೆಯ ಹತ್ತಿರ ಹೋಗಿ ಮೊಳಕಾಲೂರಿ ಕುಳಿತ ಸ್ವಲ್ಪ ಹೊತ್ತು ಮನದಲ್ಲಿಯೆ ಪ್ರಾರ್ಥಿಸಿ ಬಾಗಿ ನಮಸ್ಕಾರ ಮಾಡಿದ ಎದ್ದುನಿಂತ ಮೇಲೆ ಅವನು ತನ್ನ ತಾಯಿಯನ್ನು ಕಂಡ ಆಗ ಮನದಲ್ಲಿಯೆ ನಾಚಿಕೊಂಡು ನಕ್ಕು "ಅಮ್ಮಾ, ಇಷ್ಟು ಕತ್ತಲಲ್ಲೇಕೆ ಕುಳಿತಿರುವೆ ?" ಎಂದ

ತಾಯಿ ಸ್ನೇಹದಿಂದ "ಸುಮ್ಮನೆ, ಮಗೂ ನನ್ನ ಹತ್ತಿರ ಬಂದು ಸ್ವಲ್ಪ ಕುಳಿತುಕೊಳ್ಳಬಾರದೆ?" ಎಂದಳು. ವೃಂದಾವನ ಬಂದು ತಾಯಿಯ ಬಳಿ ಕುಳಿತುಕೊಂಡನು

ವೃಂದಾವನನು ನಾಚಿಕೊಳ್ಳಲು ಒಂದು ಕಾರಣವಿದ್ದಿತು ಆಗ ರಾತ್ರಿ ಒಂದು ಗಂಟೆಯಾಗಿದ್ದಿತು. ಇಂತಹ ಅಪರಾತ್ರಿಯಲ್ಲಿ ಹಿಂದೆ ಎಂದೂ ಅವನು ಮೂರ್ತಿಯ ದರ್ಶನಕ್ಕಾಗಿ ಬಂದಿರಲಿಲ್ಲ. ಈ ದಿನ ಆ ಶಾತೀತ ಸೌಭಾಗ್ಯವು ದೊರೆತುದರಿಂದ ಅವನ ಆನಂದದ ಮೇರೆ ಮೀರಿ, ಅಂದಿನ ದಿನವನ್ನು ಸುದಿನವಾಗಿಸಿದ್ದಿತು ಅದನ್ನೇ ದೇವರೆದುರು ಗುಟ್ಟಾಗಿ ನಿವೇದಿಸ ಬಂದಿದ್ದ ತಾಯಿಗೆ ತನ್ನ ಮನದ ಮಾತೆಲ್ಲಿ ಗೊತ್ತಾಯಿತೊ ಎಂದು ನಾಚಿಕೆ ಯುಂಟಾಗಿದ್ದಿತು ಅವನಿಗೆ

ಸ್ವಲ್ಪ ಹೊತ್ತಿನ ಮೇಲೆ, ವೃಂದಾವನನ ತಾಯಿ, ಮಲಗಿದ್ದ ಮೊಮ್ಮಗನ ತಲೆಯ ಮೇಲೆ ಕೈಯಾಡಿಸುತ್ತ ಸ್ನೇಹ ಸ್ವರದಿಂದ—"ತಾಯಿಯಿಲ್ಲದ ಈ ಕುಲದೀಪಕನನ್ನು ಬಿಟ್ಟು ಎಲ್ಲಿಗೆ ಹೋಗಲೂ ನನ್ನ ಕೈ ಕಾಲು ಏಳುವುದಿಲ್ಲ ಆದರೆ ವೃಂದಾವನ, ಇಂದು ನನ್ನ ತಲೆಯ ಮೇಲಿನ ಭಾರವನ್ನು ಯಾರೋ ಇಳಿಸಿದಂತೆ ಎನಿಸುತ್ತದೆ ಮಗೂ, ಅವಳನ್ನು ಇನ್ನು ಬೇಗ ಕರೆದುಕೊಂಡು ಬಾ ಸೊಸೆಗೆ ಎಲ್ಲವನ್ನೂ ಒಪ್ಪಿಸಿ ನಾನು ಸ್ವಲ್ಪ ವಿಶ್ರಾಂತಿ ಹೊಂದುವೆ ಕಾಶಿ–ರಾಮೇಶ್ವರ, ಮಥುರಾ–ವೃಂದಾವನಗಳಿಗೆ ಹೋಗಿ ಬರುವೆ" ಎಂದಳು

ಈ ದಿನ ವೃಂದಾವನನ ಹೃದಯದಲ್ಲಿಯೂ ಹೀಗೆಯೆ ಆಶೆ-ಆಕಾಂಕ್ಷೆಗಳ ಬುಗ್ಗೆ ಉಕ್ಕಿ ಬರುತಿದ್ದಿತು ಆದರೂ ಅವನು ನಾಚುತ್ತ "ಅಮ್ಮಾ, ಆಕೆ ಬರುವಳೇಕೆ?" ಎಂದ.

ತಾಯಿಯು ದೃಢತೆಯಿಂದಲೂ ಆತ್ಮವಿಶ್ವಾಸದಿಂದಲೂ "ಏಕೆ ಬರುವುದಿಲ್ಲ? ಆಕೆ ಬಂದ ಮೇಲೆಯೆ ನನಗೆ ಬಿಡುವು ಇಲ್ಲಿಯ ವರೆಗೆ ನಾನಾಗಿಯೆ ಅವರಮನೆಗೆ ಹೋಗದಿದ್ದುದು ತಪ್ಪೇ ಆಯಿತು. ಇಂದು ಹಿಂದಿರುಗುವಾಗ ಆಕೆಯಕೈಗೆ ಬಂಗಾರದ ಬಳೆಗಳನ್ನು ತೊಡಿಸಿ ಆಶೀರ್ವದಿಸಿದೆ ಅವಳು ನನ್ನ ಪಾದಧೂಳಿಯನ್ನು ಶಿರಸಾವಹಿಸಿದಳು ನನ್ನ ತಲೆಯ ಮೇಲಿನ ಭಾರವೆಲ್ಲ ಇಳಿಯಿತೆಂದು ಆಗಲೆ ತಿಳಿದುಕೊಂಡೆ. ಇನ್ನು, ಮೊದಲನೆಯ ಒಳ್ಳೇ ಮುಹೂರ್ತಕ್ಕೇ ನಾನು ಸೌಭಾಗ್ಯ-ಲಕ್ಷ್ಮಿಯನ್ನು ಮನೆಗೆ ಕರೆತರುವೆ" ಎಂದಳು

ವೃಂದಾವನ ಸ್ವಲ್ಪ ಹೊತ್ತು ಸುಮ್ಮನಿದ್ದು "ಆಕೆ ಬಂದು ನಿನ್ನ ಈ ಕುಲದೀಪಕನನ್ನು ಚೆನ್ನಾಗಿ ನೋಡಿಕೊಂಡರಲ್ಲವೆ ? " ಎಂದನು

"ಅದೇಕೆ ನೋಡಿಕೊಳ್ಳುವುದಿಲ್ಲ ? ಆ ಹೆದರಿಕೆ ನನಗಿಲ್ಲ. "

"ಅದೇನು ? "

"ಮಗೂ, ನನಗೆ ಚಿನ್ನದ ಪರೀಕ್ಷೆ ಚೆನ್ನಾಗಿ ತಿಳಿದಿದೆ ಆದರೆ ಅದು ಚೊಕ್ಕ ಚಿನ್ನವೊ ಅಲ್ಲವೊ ಎಂಬುದನ್ನು ಈಗಲೇ ಹೇಳಲಾರೆ ಇಷ್ಟು ಮಾತ್ರ ನಿಜ—ಅದು ಹಿತ್ತಾಳೆಯಲ್ಲ ಹಾಗಿದ್ದರೆ ನಾನು ಇಂತಹ ಒಳ್ಳೇ ಮನೆತನಕ್ಕೆ ಆಕೆಯನ್ನು ತರುವ ಯೋಚನೆ ಕೂಡ ಮಾಡುತ್ತಿರಲಿಲ್ಲ ವೃಂದಾವನ, ಸೊಸೆ ನಿನ್ನ ಕೂಡ ಮಾತಾಡುತ್ತಿರುತ್ತಾಳೆಯೆ ? "

"ಇಲ್ಲಮ್ಮ, ಎಂದೂ ಇಲ್ಲ ಆದರೆ ಈ ದಿನ ತೊಂದರೆಗೀಡಾದುದರಿಂದಲೇ—" ಎಂದು ವೃಂದಾವನ ನಕ್ಕು ಸುಮ್ಮನಾದ

ತಾಯಿ ಸ್ವಲ್ಪ ಹೊತ್ತು ಸುಮ್ಮನಿದ್ದು ಗಂಭೀರಭಾವದಿಂದ "ಮಗೂ, ನಿಜ ಇದರಲ್ಲಿ ಆಕೆಯ ದೋಷವೇನೂ ಇಲ್ಲ ಎಲ್ಲರೂ ಹೀಗೇ ಮಾಡುತ್ತಾರೆ ವಿಪತ್ತು ಬಂದಾಗ್ಗೆ, ಮನುಷ್ಯನು ತನ್ನವರನ್ನೆ ಮರೆಹೊಗುತ್ತಾನೆ ನಾನು ಹೆಂಗಸು, ಆದರೂ ಆಕೆ ನನ್ನ ನೆರವನ್ನೇನೂ ಪಡೆಯದೆ ನೀನಿದ್ದಲ್ಲಿಗೆ ಬಂದಳು" ಎಂದಳು

ವೃಂದಾವನ ಸುಮ್ಮನೆ ಕೇಳುತ್ತಲಿದ್ದ

"ನಾನು ಮಾಡಬೇಕಾದ ಇನ್ನೊಂದು ಕೆಲಸವಿದೆ ಅದೇನೆಂದರೆ ಕುಂಜನಾಥನ ಮದುವೆ ಮಾಡಿಬಿಡುವುದು " ಇಷ್ಟು ಹೇಳಿ ತಾಯಿ ತನ್ನಷ್ಟಕ್ಕೆ ತಾನೇ ನಕ್ಕುಬಿಟ್ಟಳು ಕೊನೆಗೆ ಮತ್ತೆ ಎಂದಳು—"ಅವನೂ ವಿಚಿತ್ರ ಮನುಷ್ಯ ಇಡೀ ಊರಿಗೇ ಆಮಂತ್ರಣ ಕೊಟ್ಟು ಹೇಳದೆ ಕೇಳದೆ ಓಡಿಹೋದ ಮುಂದೆ ದೇವರೇ ಗತಿ ! "

ವೃಂದಾವನನೂ ನಗತೊಡಗಿದ

"ಅವನು ತಂಗಿಗೆ ಬಹಳ ಹೆದರುವನೆಂದು ಕೇಳಿರುವೆ ತಾನು ಅಣ್ಣನಾದರೂ ತಮ್ಮನಂತೆ ಅಂಜುವ ಕೆಲವರ ಮುಖಭಾಗ್ಯವೆ ಹಾಗೆ ವಯಸ್ಸಿನಲ್ಲಿ ಹಿರಿಯರೂ ಅವರಿಗೆ ಅಂಜಿಯೇ ನಡೆಯುವರು ನನ್ನ ಸೊಸೆಯೂ ಅಂಥ ಸತ್ವದವಳು—ಬಹಳ ಶಾಂತ, ಆದರೂ ಕಠೋರ ನನಗೆ ಬೇಕಾದವರು ಇಂಥವರೇ ಎಂಥ ಭಾರವನ್ನೂ ಹೊತ್ತುಕೊಳ್ಳಬಲ್ಲರವರು ಇಂಥ

ವರು ಇದ್ದರಲ್ಲವೆ ನಾನು ಮನೆಯ ಹೊಣೆ ಎಲ್ಲವನ್ನೂ ಹೊರಿಸಿ ಎಲ್ಲಿಗಾದರೂ ಹೋಗುವುದು ? ''

ಸ್ವಲ್ಪ ಹೊತ್ತು ಸುಮ್ಮನಿದ್ದು, ಪುನಃ "ನಾನು ಅವಳನ್ನು ನೋಡಿದ್ದೂ ಮಾತು-ಕತೆಯಾಡಿದ್ದೂ ಇದೊಂದು ದಿನ ಮಾತ್ರ ಆದರೂ ಅವಳನ್ನೆಷ್ಟು ಪ್ರೀತಿಸುತ್ತಿರುವೆನೆಂಬುದನ್ನು ಆಡಿತೋರಿಸಲಾರೆ ಅವಳನ್ನು ಮನೆಗೆ ಯಾವಾಗ ತಂದೇನು, ಅವಳನ್ನು ಪುನಃ ಯಾವಾಗ ನೋಡೇನು ಎಂಬ ತವಕವೇ ನನಗೆ ಸಾಯಂಕಾಲದಿಂದಲೂ ''

ವೃಂದಾವನ ಮನದಲ್ಲಿಯೆ ನಾಚಿಕೊಳ್ಳತೊಡಗಿದ ಅವನು ಅದನ್ನು ತೋರಗೊಡಬಾರದೆಂದು " ಹೌದಮ್ಮ, ಕುಂಜನಾಥನ ವಿಷಯದಲ್ಲಿ ಏನು ಹೇಳಿದೆ ? " ಎಂದು ಕೇಳಿದ

'' ಹೌದು, ಮಾತು ಅಷ್ಟಕ್ಕೇ ನಿಂತು ಹೋಯಿತು ನೋಡು ಸೊಸೆಯನ್ನು ಮನೆಗೆ ಕರೆತರುವ ಮೊದಲು ಕುಂಜನಾಥನ ಮದುವೆ ಮಾಡಿ ಅವರ ಮನೆತನ ಉದ್ಧಾರಮಾಡುವುದೂ ನಮ್ಮ ಕರ್ತವ್ಯ ನಾಳೆ ನಸುಕಿನಲ್ಲಿ ಬಂಡಿ ತರಲು ಗೋಪಾಳನಿಗೆ ಹೇಳು ನಲಡಾಂಗೆ ಗ್ರಾಮಕ್ಕೆ ಹೋಗಿ ಬರುವೆ ಸ್ವಲ್ಪ ಅಲ್ಲಿಯ ಗೋಕುಲ ಬೈರಾಗಿಯ ಮಗಳು ನನ್ನ ಮನಸ್ಸಿಗೆ ಬಂದಿದ್ದಾಳೆ ನೋಡಲೂ ಕುರೂಪಿಯಲ್ಲ ಅಲ್ಲದೆ .. ''

ಮಾತು ಮುಗಿಯುವ ಮೊದಲೆ ವೃಂದಾವನ ನಗುತ್ತ ನುಡಿದ — " ಅಲ್ಲದೆ ಅವನಿಗೆ ಅವಳೊಬ್ಬಳೇ ಮಗಳು ಆ ಬೈರಾಗಿ ಬಹಳ ದುಡ್ಡು ಮಾಡಿಟ್ಟು ಹೋಗಿರುವನಂತೆ, ಹೌದೇನಮ್ಮಾ ? ''

ತಾಯಿಯೂ ನಕ್ಕು ಎಂದಳು— " ಹೌದು ಮಗೂ, ನೀನು ಹೇಳುವುದು ನಿಜ ಬರಿಯ ಮದುವೆ ಮಾಡುವುದರಿಂದಲೇ ಕೆಲಸವಾಗದು ಹೊಟ್ಟೆ–ಬಟ್ಟೆಯ ವ್ಯವಸ್ಥೆಯೂ ಆಗಬೇಕು ಹುಡಿಗೆಯೇನೋ ಸ್ವಲ್ಪ ಕಪ್ಪು, ಆದರೂ ಕುರೂಪಿಯಲ್ಲ ಮುಖದ ಮೇಲೆ ತೇಜಸ್ಸಿದೆ ನಾಳೆ ಬೆಳಿಗ್ಗೆ ಅಲ್ಲಿಗೆ ಹೋದ ಮೇಲೆ ಏನು ಮಾಡಿಕೊಂಡು ಬರುವೆನೆಂಬುದನ್ನು ನೀನೇ ನೋಡು ! ''

ವೃಂದಾವನ ತಲೆಬಾಗಿಸಿ '' ಒಳ್ಳೇದು ಅಮ್ಮಾ, ನಾನೂ ಮುಹೂರ್ತ ನೋಡಿಸುವೆ ನೀನು ಸ್ವತಃ ಹೋದಮೇಲೆ ಕೇಳುವುದೇನು? ನೀನು ಬರಿಗೈಯಿಂದ ತಿರುಗಿ ಬರುವವಳಲ್ಲ '' ಎಂದು ನುಡಿದ

೪

ಕುಂಜನಾಥನ ಮದುವೆಗೆ ಸಂಬಂಧಪಟ್ಟ ಎಲ್ಲ ಮಾತುಕತೆಗಳನ್ನು ಮುಗಿಸಿ ವೃಂದಾವನನ ತಾಯಿ ಇಳಿಹೊತ್ತಿನ ಸುಮಾರಿಗೆ ಮರಳಿ ಬಂದಳು

ಆಗ ಚಂಡೀಮಂಟಪದ ಹತ್ತರ ನಿಂತು ಎಲ್ಲ ಹುಡುಗರೂ ಅಂಕೆ-ಮಗ್ಗಿಗಳನ್ನು ಹೇಳುತ್ತಿದ್ದರು ವೃಂದಾವನ ಒಂದುಕಡೆ ನಿಂತು ಕೇಳುತ್ತಿದ್ದ. ಬಂಡಿ ಅಲ್ಲಿಗೆ ಬರುತ್ತಲೆ ವೃಂದಾವನನ ಮಗ ಚರಣನು ಬಂಡಿಯಿಂದಿಳಿದು ಹಾರುತ್ತ ಜಿಗಿಯುತ್ತ ತಂದೆಯ ಬಳಿಗೆ ಬಂದನು ಅವನೂ ಈದಿನ ತನ್ನ ಅಜ್ಜಿಯ ಕೂಡ ತನ್ನ ಭಾವೀ ಅತ್ತೆಯನ್ನು ನೋಡಲು, ತನ್ನ ಒಪ್ಪಿಗೆಯನ್ನೀಯಲು ಹೋಗಿದ್ದ ವೃಂದಾವನ ಅವನನ್ನು ಎತ್ತಿಕೊಂಡು ಚಕ್ಕಡಿಯ ಬಳಿಗೆ ಹೋಗಿ ನಿಂತ ತಾಯಿ ಆಗ ಗಾಡಿಯಿಂದ ಇಳಿಯುತ್ತಿದ್ದಳು. ಆಕೆಯ ಪ್ರಸನ್ನ ಮುಖವನ್ನು ನೋಡಿ—“ ಏಕಮ್ಮಾ, ಮುಹೂರ್ತ ಎಂದು ನಿಶ್ಚಯವಾಯಿತು ? ” ಎಂದು ಕೇಳಿದ

“ ಇದೇ ತಿಂಗಳ ಕೊನೆಗೆ ಇನ್ನು ಬಹಳ ದಿನಗಳೇನೂ ಇಲ್ಲ ನೀನು ಒಳಗೆ ನಡೆ, ಮಾತನಾಡಬೇಕಾದುದು ಬಹಳ ಇದೆ ” ಎಂದು ಅವಳು ನಗುತ್ತ ಮನೆಯೊಳಗೆ ಹೋದಳು

ಸೊಸೆ ಮನೆಗೆ ಬರುವಳೆಂದು ಆಕೆಯ ಹಿಗ್ಗಿಗೆ ಮೇರೆಯೇ ಇರಲಿಲ್ಲ ಅಲ್ಲದೆ ಕುಸುಮೆ ಮನೆಗೆಲಸದಲ್ಲಿ ನಿಪುಣಳಿರುವುದನ್ನು ಆದಿನ ಕಂಡುಕೊಂಡಿದ್ದಳು ಆದುದರಿಂದ ಸೊಸೆಯಲ್ಲಿ ಅವಳಿಗೆ ಒಂದುತರದ ಮಮತೆಯುಂಟಾಗಿದ್ದಿತು ತನ್ನ ಒಬ್ಬನೇಒಬ್ಬ ಮಗ ಇನ್ನು ಸುಖಿಯಾಗುವನೆಂದು, ಸೊಸೆಗೆ ಮನೆಯ ಭಾರವನ್ನೆಲ್ಲ ವಹಿಸಿ ತೀರ್ಥಯಾತ್ರೆಗೆ ಹೊರಡಲು ಅನು-ವಾಗುವುದೆಂದು, ಮಗನ ಸುಖವನ್ನು ಕಂಡು ತಾನೂ ಸುಖಿಯಾಗುವೆನೆಂದು ಅವಳಿಗೆ ಆನಂದವಾಗಿದ್ದಿತು ಈ ಹಿಗ್ಗಿನಲ್ಲಿ ಅವಳಿಗೆ ಯಾವ ಕೆಲಸವೂ ಭಾರವೆನಿಸಲಿಲ್ಲ ಆದುದರಿಂದಲೆ, ಅವಳು ಗೋಕುಲನ ಹೆಂಡತಿಯ ಎಲ್ಲ ಕರಾರುಗಳಿಗೂ ಒಪ್ಪಿ, ಮದುವೆಯ ಎಲ್ಲ ವೆಚ್ಚವನ್ನು ತಾನೇ ಹೊತ್ತುಕೊಂಡು ಮದುವೆಯನ್ನು ನಿಶ್ಚಯಿಸಿ ಬಂದಿದ್ದಳು.

ಆಕೆಯ ಮಧ್ಯಾಹ್ನದ ಊಟ ಇನ್ನೂ ಆಗಿರಲಿಲ್ಲ ತನ್ನ ತಾಯಿ ಅನ್ಯರ ಮನೆಯಲ್ಲಿ ಊಟಮಾಡುವುದಿಲ್ಲವೆಂಬುದನ್ನು ವೃಂದಾವನ ಚೆನ್ನಾಗಿಯೆ ಅರಿತಿದ್ದ ಅವನು ಸಾಲೆಯ ಎಲ್ಲ ಹುಡುಗರನ್ನು ಮನೆಗೆ ಕಳಿಸಿ,

ಲಗು-ಬಗೆಯಿಂದ ಅಡುಗೆಮನೆಗೆ ಬಂದ ತಾಯಿ ಅಡುಗೆಯ ಯಾವ ಕೆಲಸದಲ್ಲಿಯೂ ತೊಡಗಿಕೊಳ್ಳದೆ ಸುಮ್ಮನೆ ಒಂದೆಡೆಯಲ್ಲಿ ಕುಳಿತಿದ್ದಳು. ಅವನು "ಹಸಿವೆಯಾದಾಗ ಯೋಚಿಸಿದರೆ ಎಲ್ಲವೂ ಅಸ್ತ-ವ್ಯಸ್ತವಾಗುವುದು ಉಳಿದವರ ಯೋಚನೆ ಆಮೇಲೆ ಮೊದಲು ನಿನ್ನ ಊಟದ ಯೋಚನೆ ನೋಡಮ್ಮ" ಎಂದ

"ಇನ್ನು ಅಡಿಗೆ ಸಂಜೆಗೆ ಮಗೂ, ನಾನು ಹುಡುಗಾಟಿಕೆ ಮಾಡುವುದಿಲ್ಲ ಇನ್ನು ಬಹಳ ದಿನ ಉಳಿದಿಲ್ಲ ಆ ಹುಚ್ಚನಲ್ಲಿ ಧನಬಲವೂ ಇಲ್ಲ, ಜನಬಲವೂ ಇಲ್ಲ ನಾವೇ ಎಲ್ಲವನ್ನೂ ಒದಗಿಸಬೇಕಾಗುವುದು ಹುಡಿಗೆಯ ತಾಯಿಯಂತೂ ಮಹಾ ಹಟವಾದಿ ಯಾವ ಮಾತಿಗೂ ಬೇಗ ಒಪ್ಪುವುದಿಲ್ಲ ಆದರೆ ನಾನು ಬಿಡುವವಳೇ? ಅಗೋ, ಅವನೂ ಬಂದೇ ಬಿಟ್ಟ ನೋಡು ನಿನಗೆ ನೂರು ವರ್ಷ ಆಯುಷ್ಯ ಈಗ ನಿನ್ನ ವಿಷಯವೇ ನಡೆದಿತ್ತು ಬಾ, ಕುಳಿತುಕೋ ಇಂಥ ಅಡ್ಡಹೊತ್ತಿನಲ್ಲಿ ಏಕೆ ಬಂದೆ?"

ವಾಸ್ತವಿಕವಾಗಿ ಊರಿಂದೂರಿಗೆ ಹೋಗುವ ಹೊತ್ತು ಅದಲ್ಲ

ಮನೆಯಲ್ಲಿ ಕಾಲಿಡುತ್ತಲೇ ಸಿಕ್ಕ ಈ ಬಗೆಯ ಆದರದಿಂದ ಕುಂಜನಾಥನಿಗೆ ಮೊದಲು ಸ್ವಲ್ಪ ಸಂಕೋಚವೆನಿಸಿತು ಬಳಿಕ ದಿಙ್ಮೂಢನಾಗಿ ಹತ್ತಿರ ಬಂದು ನಮುಸ್ಕರಿಸಿ ಕುಳಿತ

ವೃಂದಾವನ ಚೇಷ್ಟೆಯಿಂದ ನುಡಿದ--"ಏನು ಕುಂಜಣ್ಣ, ನಿನಗೆ ಈ ಸುದ್ದಿ ಹೇಗೆ ಗೊತ್ತಾಯಿತು? ಒಂದೇ ಒಂದು ರಾತ್ರಿ ಕಳೆಯುವುದೂ ಸಾಧ್ಯವಾಗಲಿಲ್ಲವೆ ನಿನಗೆ? ನಾಳೆ ಮುಂಜಾನೆ ಬಂದು ಎಲ್ಲವನ್ನೂ ತಿಳಿದುಕೊಂಡಿದ್ದರೆ ಏನು ತೊಂದರೆಯಾಗುತ್ತಿತ್ತು?"

ವೃಂದಾವನನ ತಾಯಿಯೂ ನಸುನಕ್ಕಳು ಆದರೆ ಕುಂಜನ ಲಕ್ಷ್ಯ ಅವರ ಮಾತುಗಳ ಕಡೆಗೆ ಇರಲಿಲ್ಲ ಅವನು ಹುಬ್ಬುಗಂಟಿಕ್ಕಿ "ಅಬ್ಬ! ಇವಳೇನು ತಂಗಿಯೊ ಅಥವಾ ಗೂಢಚಾರಳೊ!" ಎಂದ

ವೃಂದಾವನನು ಮುಖ ಹೊರಳಿಸಿ ನಗೆಯನ್ನು ಮುಚ್ಚಿಕೊಂಡ, ಅವನ ತಾಯಿಯೂ ನಗುವನ್ನು ಬಿಗಿಹಿಡಿದು— "ನೊಸೆ ಏನೋ ಹೇಳಿ ಕಳಿಸಿದಂತೆ ಕಾಣುತ್ತದೆ" ಎಂದಳು

ಕುಂಜನು ಈ ಮಾತಿಗೆ ಉತ್ತರವೀಯದೆ ಬಹಳ ಗಂಭೀರ ಮುದ್ರೆಯಿಂದ "ಎಂತಹ ಮರವೆಯಮ್ಮ ನಿಮ್ಮದು? ಕುಸುಮೆಯು ಹೊರತು ಬೇರೆಯವರ ದೃಷ್ಟಿಗೆ ಬಿದ್ದಿದ್ದರೆ ಏನು ಗತಿಯಾಗುತ್ತಿತ್ತು ಗೊತ್ತೆ?" ಎಂದ.

ತಾಯಿಗೆ ಅವನ ಮಾತಿನ ಅರ್ಥವಾಗಲಿಲ್ಲ ಅವಳು ಅವನನ್ನು ಉದ್ವಿಗ್ನತೆಯಿಂದ ನೋಡುತ್ತಿದ್ದಳು ವೃಂದಾವನನು "ಕುಂಜಣ್ಣ, ಹೇಳು ವುದನ್ನು ಬೇಗ ಹೇಳಿ ಬಿಡಬಾರದೆ?" ಎಂದ

ಎಲ್ಲ ಸಂಗತಿಯನ್ನು ಸಂಕ್ಷೇಪವಾಗಿ, ಸ್ಪಷ್ಟವಾಗಿ ಹೇಳುವ ಇಚ್ಛೆ ಕುಂಜನಿಗಿರಲಿಲ್ಲ ಆದುದರಿಂದ ಅವನು ವೃಂದಾವನನ ಮಾತಿನ ಕಡೆಗೆ ಲಕ್ಷ್ಯಗೊಡದೆ "ಮೊದಲು ತಿನ್ನಲು ಏನು ಕೊಡುವಿರಿ ಹೇಳಿರಮ್ಮ? ನಾನು ಹೇಳುವುದನ್ನು ಆಮೇಲೆ ಹೇಳುವೆ" ಎಂದ ಅವಳು ನಗುತ್ತ "ಏನಪ್ಪಾ ಹಾಗೆಂದರೆ, ಈ ಮನೆಯೆ ನಿನ್ನದು ತಿನ್ನಲಿಕ್ಕೆ ಏನು ಕೊಡಲಿ?" ಎಂದಳು

"ತಿನ್ನುವುದನ್ನು ಆಮೇಲೆ ನೋಡೋಣ ನಿಮ್ಮ ಯಾವ ಸಾಮಾನು ಕಳೆದು ಹೋಗಿದೆ ಮೊದಲು ಹೇಳಿ"

ವೃಂದಾವನನ ತಾಯಿ ಗಾಬರಿಯಾದಳು ಅವಳು ಸ್ವಲ್ಪ ತಡೆದು ಸಂದಿಗ್ಧಭಾವದಿಂದ "ನನ್ನ ಯಾವ ಸಾಮಾನೂ ಕಳೆದಿಲ್ಲವಲ್ಲ!" ಎಂದಳು

ಇದನ್ನು ಕೇಳಿ ಕುಂಜ ಗಹಗಹಿಸಿ ನಕ್ಕ ಆಮೇಲೆ ಅವನು ತನ್ನ ಸೆಲ್ಲೆಯ ಚುಂಗಿನೊಳಗಿಂದ ಬಂಗಾರದ ಎರಡು ಬಳೆಗಳನ್ನು ಹೊರದೆಗೆದು "ಹಾಗಾದರೆ ಇವು ನಿಮ್ಮವಲ್ಲವೆ?" ಎಂದು ಬಳಿಕ ತಾನೇ ಅತ್ಯಂತ ಹಿಗ್ಗಿನಿಂದ ನಗತೊಡಗಿದ

ನಿನ್ನೆ ಇವೇ ಹೊತ್ತಿಗೆ ಸರಿಯಾಗಿ ವೃಂದಾವನನ ತಾಯಿ ಆಶೀರ್ವಾದ ದೊಂದಿಗ ನೊಸೆಯ ಕೈಗೆ ತೊಡಿಸಿದ ಬಳೆಗಳು ಇವು ಇಂದು ಅವೇ ಬಳೆ ಗಳನ್ನು ಅದೇ ಆಶೀರ್ವಾದದೊಂದಿಗ ಕುಸುಮೆ ತನ್ನ ಅರಿಯದ ಅಣ್ಣನ ಕೂಡ ಹಿಂದಿರುಗಿ ಕಳಿಸಿದ್ದಾಳ!

ಕ್ಷಣಹೊತ್ತು ಕುಂಜನ ಕಡೆಗೆ ನೋಡುತ್ತಲಿದ್ದ ವೃಂದಾವನ ತನ್ನ ತಾಯಿಯ ಕಡೆ ಮೋರ ತಿರುಗಿಸುತ್ತಿರುವಾಗ ಸ್ವಲ್ಪ ಅಂಜಿದ ಅವಳ ಮುಖದಲ್ಲಿ ಒಂದು ಹನಿ ರಕ್ತವೂ ಇರಲಿಲ್ಲ ಇಳಿಹೊತ್ತಿನ ಆ ಮ್ಲಾನವಾದ ಪ್ರಕಾಶದಲ್ಲಿ ಅವಳ ಮುಖ ಶವ-ಮುಖದಂತೆ ಬಿಳುಪೇರಿದ ಹಾಗೆ ತೋರಿತು ಇತ್ತ ವೃಂದಾವನನ ಎದೆಯಲ್ಲಿ ಎಂಥ ಕಸಿವಿಸಿಯಾಗುತ್ತಿದ್ದಿತೊ ಪರಮಾ-ತ್ಮನ ಬಲ್ಲ ಆದರೆ ಸ್ವಲ್ಪ ಹೊತ್ತಿನಲ್ಲಿಯೆ ಪ್ರಯತ್ನಪೂರ್ವಕವಾಗಿ ಸಾವ-ರಿಸಿಕೊಂಡು ತಾಯಿಯ ಹತ್ತರ ಬಂದು ಅತ್ಯಂತ ಸಹಜ ಶಾಂತಭಾವದಿಂದ "ಅಮ್ಮಾ, ಇದು ನಮ್ಮ ಸೌಭಾಗ್ಯವೇ ಸರಿ ಪರಮಾತ್ಮ ನಮ್ಮ ಒಡವೆ

ನಮಗೇ ಮರಳಿ ಕಳುಹಿದ್ದಾನೆ ಇವು ನಿನ್ನ ಕೈಯೊಳಗಿನ ಬಳೆಗಳಮ್ಮಾ. ಇವನ್ನು ತೊಡುವಂಥ ಸೌಭಾಗ್ಯ ಅವಳಿಗಿದೆಯೆ ? " ಎಂದು ನುಡಿದ

ಬಳಿಕ ಅವನು ಕುಂಜನಿಗೆ, " ನಡೆಯಣ್ಣ, ನಾವು ಹೊರಗೆ ಹೋಗಿ ಕುಳಿತುಕೊಳ್ಳೋಣ " ಎಂದು ಕುಂಜನ ಕೈಹಿಡಿದು ಎಳೆಯುತ್ತ ಅವನನ್ನು ಹೊರಗೆ ಕರೆದುಕೊಂಡು ಹೋದ

ಕುಂಜ ತೀರ ಸರಳ ಮನುಷ್ಯ ಆದುದರಿಂದಲೇ ಅತ್ಯಂತ ಆನಂದ ದಿಂದ ಇಂತಹ ಹೊತ್ತಿನಲ್ಲಿ ಇಷ್ಟು ದೂರ ನಡೆದು ಬಂದಿದ್ದ

ಇಂದು ಊಟವಾದ ಮೇಲೆ ಕುಸುಮೆ ಮ್ಲಾನಮುಖದಿಂದ ಆ ಬಳೆ ಗಳನ್ನು ಕೈಯಲ್ಲಿ ಹಿಡಿದು ಶುಷ್ಕವಾದ ಮೃದುಸ್ವರದಲ್ಲಿ ಹೇಳಿದಳು– " ನಿನ್ನೆ ಅವರು ಇವನ್ನು ಇಲ್ಲಿ ಮರೆತು ಹೋಗಿದ್ದಾರೆ ನೀನು ಹೋಗಿ ಅವರಿಗೆ ಇವನ್ನು ಮುಟ್ಟಿಸಿ ಬರಬೇಕು " ಕುಂಜನಿಗೆ ಹಿಡಿಸಲಾರದಷ್ಟು ಸಂತೋಷ ವಾಯಿತು ಆದುದರಿಂದಲೇ ಅವನು ತನ್ನ ತಂಗಿಯ ಸಪ್ಪೆಮೋರೆಯ ಕಡೆಗೆ ಲಕ್ಷ್ಯ ಕೊಡಲಿಲ್ಲ

ಕುಂಜನಿಗೆ ಕೊಂಕು ನುಡಿ, ಧೂರ್ತತನಗಳು ಅರ್ಥವಾಗುತ್ತಿದ್ದಿಲ್ಲ ತನ್ನ ತಂಗಿ ಹೇಳಿದ್ದು ಸತ್ಯವಲ್ಲ ಎಂದಾಗಲಿ, ಮನುಷ್ಯನು ಮನುಷ್ಯನಿಗೆ ಇಷ್ಟು ಬೆಲೆ ಬಾಳುವ ಒಡವೆಯನ್ನು ಕೊಡಬಲ್ಲ, ಒಂದು ವೇಳೆ ಕೊಟ್ಟರೂ ಅದನ್ನು ಎರಡನೆಯವನು ತೆಗೆದುಕೊಳ್ಳಲು ಒಪ್ಪದಿರಬಲ್ಲ, ತೆಗೆದುಕೊಂ ಡರೂ ಮರಳಿ ಕಳಿಸಬಲ್ಲ ಎಂದಾಗಲಿ, ಕುಂಜನ ಬುದ್ಧಿಗೆ ಹೊಳೆಯುವುದು ಅಸಾಧ್ಯವಿತ್ತು ಆದುದರಿಂದ ದಾರಿಯುದ್ದಕ್ಕೂ ಅವನಿಗೆ ಇದೇ ಯೋಚನೆ– ಅಕಸ್ಮಾತ್ ಕಳೆದುಕೊಂಡ ವಸ್ತು ದೊರಕಿದರೆ ಅವರೆಷ್ಟು ಹಿಗ್ಗಬಹುದು ? ನನ್ನನ್ನೆಷ್ಟು ಹರಸಬಹುದು ? ಇತ್ಯಾದಿ ಇತ್ಯಾದಿ

ಆದರೆ ಹಾಗೇನೂ ಆಗಲಿಲ್ಲ ಆದುದು ಒಳಿತೊ ಕೆಡಕೊ ಎಂಬುದೂ ಅವನಿಗೆ ತಿಳಿಯಲಿಲ್ಲ ಇಷ್ಟು ದೊಡ್ಡ ಕೆಲಸ ಮಾಡಿದ ಮೇಲೂ ಅವನಿಗೆ ವೃಂದಾವನನ ತಾಯಿಯಿಂದ ಒಂದು ಒಳ್ಳೆಯ ಮಾತು, ಒಂದು ಆಶೀ ರ್ವಾದ ಯಾವುದೂ ಸಿಕ್ಕಲಿಲ್ಲ ಅದರಿಂದ ಅವನ ಮನಸ್ಸು ಬಹಳ ವ್ಯಸ್ತ ವಾಯಿತು ಇದಲ್ಲದೆ ವೃಂದಾವನ ತನ್ನ ಕೈಹಿಡಿದು ಹೊರಗೆ ಕರೆದೊಯ್ದುದ್ದ ರಿಂದ ಕುಂಜನಾಥನಿಗೆ ಮರ್ಯಾದೆ ಹೋದಂತಾಗಿ ಮನಸ್ಸು ಕುಗ್ಗಿ ಹೋಯಿತು, ಅವನು ನಾಚಿಕೆ, ದುಃಖ ಇವುಗಳಿಂದ ಸುಮ್ಮನೆ ಕುಳಿತು

ಬಿಟ್ಟ ವೃಂದಾವನನೂ ಬಳಿಯಲ್ಲೆ ಕುಳಿತಿದ್ದರೂ ಅವನೊಂದಿಗೆ ಒಂದೂ ಮಾತನಾಡಲಿಲ್ಲ ಅವನ ಎದೆಯಲ್ಲಿ ಅಪಮಾನದ ಬೆಂಕಿ ದಗದಗಿಸುತಿದ್ದಿತು. ಆ ಅಪಮಾನ ತನ್ನದಲ್ಲ, ತನ್ನ ತಾಯಿಯದು

ತನ್ನ ಒಳಿತು - ಕೆಡಕಿನ, ಮಾನ - ಅಪಮಾನದ ಯಾವ ವಿಚಾರವೂ ಅವನಲ್ಲಿ ಉಳಿಯಲಿಲ್ಲ ಮೃತ್ಯುವಿನ ಯಾತನೆ, ಉಳಿದ ಎಲ್ಲ ಯಾತನೆಗಳನ್ನು ಮೆಟ್ಟಿ ಕೇವಲ ತಾನೇ ತಾನಾಗುವಂತೆ, ಅಪಮಾನದಿಂದ ಕಳೆಗುಂದಿದ ತಾಯಿಯ ಮುಖಸ್ಮೃತಿ ಅವನ ಸಾರಾಸಾರ ವಿಚಾರವನ್ನು ನುಂಗಿ, ಉದ್ದೀಪ್ತವಾದ ಭೀಷಣ ಜ್ವಾಲೆಯ ಒಂದು ಕುಡಿಯಾಗಿ ಉರಿಯತೊಡಗಿತು

ಸಂಜೆಯ ಮಬ್ಬುಗತ್ತಲು ಇನ್ನಿಷ್ಟು ದಟ್ಟವಾಯಿತು ಕುಂಜನಾಥ ಮೆಲ್ಲಮೆಲ್ಲನೆ “ ಒಳ್ಳೇದು ವೃಂದಾವನ, ಇನ್ನು ನಾನು ಹೊರಡುವೆ” ಎಂದ

ವೃಂದಾವನ ಮುಂದುಗಾಣದೆ “ ಆಗಲಿ ಹೋಗು, ಆದರೆ ಇನ್ನೊಂದು ದಿನ ಬರದಿರಬೇಡ ” ಎಂದು ನುಡಿದ

ಕುಂಜ ಹೊರಟು ಹೋದ ವೃಂದಾವನ ಅಲ್ಲಿಯೆ ಬಿದ್ದುಕೊಂಡು “ ತಾಯಿಯ ಆಸೆ - ಆಕಾಂಕ್ಷೆ, ಭವಿಷ್ಯಜೀವನದ ಕಲ್ಪನೆ, ಎಲ್ಲವೂ ಕ್ಷಣ-ಮಾತ್ರದಲ್ಲಿ ಮಣ್ಣುಗೂಡಿ ಹೋದವಲ್ಲ! ಇನ್ನು ನಾನು ಅವಳನ್ನು ಹೇಗೆ ಸಮಾಧಾನ ಪಡಿಸಲಿ? ಎಂತಹ ಮಾತುಗಳಿಂದ ಅವಳನ್ನು ಸಂತೈಸಲಿ?” ಎಂದು ಯೋಚಿಸತೊಡಗಿದ

ಎಲ್ಲಕ್ಕೂ ಹೆಚ್ಚಿನ ಉಪಹಾಸವೇನೆಂದರೆ, ಉಪವಾಸಿನಿಯೂ ಶಾಂತಳೂ ಸನ್ಯಾಸಿನಿಯೂ ಆದ ತನ್ನ ತಾಯಿಯ ಎಲ್ಲ ಆಸೆ - ಆಕಾಂಕ್ಷೆಗಳನ್ನು ನಿರ್ಮೂಲ ಮಾಡಿ, ಅವಳ ಎದೆಗೆ ಕಲ್ಲೆಸೆದವಳು ತನ್ನ ಹೆಂಡತಿಯೆ, ಅವಳನ್ನೇ ತಾನು ಪ್ರೀತಿಸುವುದು!

೫

ಒಂದೇ ದಿನದ ಬಳಕೆಯಿಂದ ತಾನು ತನ್ನ ಅತ್ತೆಯನ್ನೂ ಗಂಡನನ್ನೂ ಅರಿತುಕೊಂಡಂತೆಯೆ ಅವರೂ ತನ್ನನ್ನು ಅರಿತುಕೊಂಡರೆಂಬುವುದರಲ್ಲಿ ಕುಸುಮೆಗೆ ಸಂದೇಹ ಉಳಿದಿರಲಿಲ್ಲ

ಹೀಗೆ ಅರಿತುಕೊಳ್ಳಬಲ್ಲವರೊಡನೆ ತಾನು ಹಗಲೆಲ್ಲ ತೊಡಕು ತೊಡಕಾಗಿ ನಡೆದುಕೊಂಡು ಅವರನ್ನು ಪೇಚಿನಲ್ಲಿ ಕೆಡವಿದ್ದಕ್ಕಾಗಿ ಅವಳಿಗ ಒಳ್ಳೆ ಸಂತುಷ್ಟಿಯೇ ಆಗಿತ್ತು ಆದರೆ ಈ ಪರಿ ಆಡಾಡುತ್ತ, ಯಾವುದೋ ಒಂದು ಹರಿಯಬಾರದ ಸ್ನೇಹಬಂಧನದಿಂದ ತನ್ನನ್ನು ತಾನೇ ಬಿಗಿದುಕೊಂಡಿದ್ದಳೆಂಬ ಮಾತು ಕುಸುಮೆಗ ಆಗ ಗೊತ್ತೇ ಆಗಿದ್ದಿಲ್ಲ

ಅದೇ ಬಂಧನವನ್ನು ಇಂದು ತನ್ನ ಕೈಯಿಂದಲೇ ಹರಿದು ಕುಸುಮ ಚಿನ್ನದ ಬಳೆಗಳನ್ನು ಹಿಂತಿರುಗಿ ಕಳಿಸಿದ ಬಳಿಕ ಅವಳಿಗೆ ಬಹಳ ಕಸಿವಿಸಿಯಾಯಿತು ಏನೂ ಅರಿಯದ ಅವಳ ಅಣ್ಣ ಬಳಗಳೊಂದಿಗೆ ಆನಂದದಿಂದ ಹೊರಟ ಅವಳು ತನ್ನ ಕೋಣಗೆ ಹೋಗಿ ಅಳತೊಡಗಿದಳು "ನನ್ನ ಈ ಕಠೋರ ನಡತೆಯಿಂದ ಅವರಿಗಷ್ಟು ಮರ್ಮವೇದನೆಯಾಗಬಹುದು? ಅವರು ನನ್ನ ವಿಷಯವಾಗಿ ಏನೆಂದು ತಿಳಿದುಕೊಳ್ಳುವರು?" ಎಂಬ ಚಿತ್ರ ಅವಳ ಕಣ್ಣಿಗೆ ಕಟ್ಟಿದಂತಾಯಿತು

ಕತ್ತಲಾಗಿ ಅದೆಷ್ಟೋ ಹೊತ್ತಾಗಿತ್ತು. ಕುಂಜ ಮನೆಗೆ ಬಂದ ಮನಯಲ್ಲೆಲ್ಲ ಕತ್ತಲನ್ನು ಕಂಡು ಅವನು ತನ್ನ ತಂಗಿಯ ಕೋಣೆಗ ಹೋಗಿ ಕೇಳಿದ—"ಕುಸುಮಾ, ದೀಪ ಹಚ್ಚಿಲ್ಲವೆ?"

ಕುಸುಮೆ ನೆಲದ ಮೇಲೆ ಸುಮ್ಮನೆ ಕುಳಿತಿದ್ದಳು ಅವಳು ಸ್ವಲ್ಪ ವ್ಯಸ್ತಳೂ ಲಜ್ಜಿತಳೂ ಆಗಿ ಎದ್ದುನಿಂತು "ಈಗ ಹಚ್ಚುವೆ ಅಣ್ಣ ನೀನು ಯಾವಾಗ ಬಂದೆ?" ಎಂದಳು

"ಈಗ ಮಾತ್ರ ಬಂದೆ" ಎಂದು ಕುಂಜನಾಥ ಚಿಲುಮೆ ತಂದು ಅದಕ್ಕೆ ಹೊಗೆಸೊಪ್ಪು ತುಂಬತೊಡಗಿದ ದೀಪಕ್ಕೆ ಎಣ್ಣೆ ಹಾಕಿ ಬತ್ತಿಯನ್ನು ಸರಿಪಡಿಸಲು ಅವಳಿಗೆ ಸ್ವಲ್ಪ ಹೊತ್ತಾಯಿತು ಹೊರಗೆ ಬಂದು ನೋಡಿದಳು— ಕುಂಜ ಹೊಗೆಸೊಪ್ಪು ತುಂಬಿಕೊಂಡು ಹೊರಗೆ ಹೊರಟು ಹೋಗಿದ್ದ.

ದಿನದಂತೆ ತನ್ನ ಅಣ್ಣನಿಗೆ ಊಟಕ್ಕೆ ಬಡಿಸಿ ಕುಸುಮೆ ಸ್ವಲ್ಪ ದೂರ ಹೋಗಿ ಕೂತಳು. ಕುಂಜ ಗಂಭೀರನಾಗಿ ಊಟ ಮಾಡತೊಡಗಿದ್ದ. ಒಂದು

ಮಾತನ್ನೂ ಆಡಲಿಲ್ಲ ನಿತ್ಯ ಮಾತಾಡುವವನು ಇಂದು ಸುಮ್ಮನಿದ್ದುದನ್ನು ಕಂಡು ಅವಳಿಗೆ ಸಂದೇಹವಾಯಿತು

ನಡೆಯಬಾರದ ಸಂಗತಿಯೇನೊ ನಡೆದಿದೆಯೆಂದು ಅವಳು ಚೆನ್ನಾಗಿ ಅರಿತಳು ಮತ್ತು ಅದಾವುದೆಂಬುದನ್ನು ತಿಳಿಯಲೂ ಅವಳು ಬಹಳ ಆತುರಳಾದಳು ಅಣ್ಣನಿಗೆ ಬಹಳ ದೊಡ್ಡ ಅಪಮಾನವಾಗಿರಬೇಕು ಚಿಕ್ಕಪುಟ್ಟ ಅಪಮಾನಗಳಂತೂ ಅವನಿಗೆ ತಿಳಿಯುವುದೇ ಇಲ್ಲ ತಿಳಿದರೂ ಅವುಗಳಿಗೆ ಲಕ್ಷ್ಯಗೊಡುವವನಲ್ಲ ಎಂದೂ ಅವಳು ಯೋಚಿಸಿದಳು

ಊಟವಾದ ಮೇಲೂ ಕುಂಜ ಸುಮ್ಮನೆ ಹೋಗುತ್ತಿದ್ದುದನ್ನು ಕಂಡು ಕುಸುಮೆಗ ಸುಮ್ಮನಿರಲಾಗಲಿಲ್ಲ ಅವಳು ಕೋಮಲ ಸ್ವರದಲ್ಲಿ " ಅಣ್ಣ, ಆ ಬಳೆ ಯಾರ ಕೈಯಲ್ಲಿ ಕೊಟ್ಟು ಬಂದೆ ? " ಎಂದು ಕೇಳಿದಳು

ಕುಂಜ ವಿಸ್ಮಯದಿಂದ " ಬೇರೆ ಯಾರ ಕೈಯಲ್ಲಿ ಕೊಡಲಿ ? ಅತ್ತೆಯ ಕೈಯಲ್ಲಿ ಕೊಟ್ಟು ಬಂದೆ " ಎಂದ

" ಅವರೇನೆಂದರು ? "

" ಏನೂ ಇಲ್ಲ " ಎಂದು ಕುಂಜ ಹೊರಗೆ ಹೊರಟುಬಿಟ್ಟ. ಮರುದಿನ ವ್ಯಾಪಾರಕ್ಕಾಗಿ ಹೊರಡುವಾಗ ಕುಂಜನೇ ಕುಸುಮೆಯನ್ನು ಕರೆದು– " ತಂಗಿ, ನಿನ್ನ ಅತ್ತೆಗೆ ಏನಾಗಿದೆಯೊ ಏನೊ! ಇಂಥ ಅಮೂಲ್ಯ ವಸ್ತುವನ್ನು ಕೊಟ್ಟರೂ ಅವಳು ಒಂದು ಮಾತನ್ನೂ ಆಡಲಿಲ್ಲ ಆದರೆ ವೃಂದಾವನ ಬಹಳ ಒಳ್ಳೆಯ ಮನುಷ್ಯ, ಅವನು ಸಂತೋಷದಿಂದ " 'ಅಮ್ಮಾ, ಒಳ್ಳೆಯದೇ ಆಯಿತು ನಿನ್ನ ಬಳೆಯನ್ನು ತೊಡುವ ಸೌಭಾಗ್ಯ ಎಲ್ಲರಿಗೂ ಸಿಗದು ! ನಮ್ಮ ಒಡವೆಯನ್ನು ದೇವರು ನಮಗೇ ತಿರುಗಿ ಕಳುಹಿಸಿ ನಮ್ಮನ್ನು ಎಚ್ಚರಿಸಿದ್ದಾನೆ ಇದು ನಮ್ಮ ಪುಣ್ಯ' ಎಂದ ಹೀಗಂದರೇನು ತಂಗಿ ? " ಎಂದು ಕೇಳಿದ

ಕುಸುಮೆಯ ಚೆಂಬಣ್ಣ ಕಪ್ಪಿಟ್ಟಿತು ಅವಳು ಜೋರಾಗಿ ತಲೆಯಲ್ಲಾಡಿಸಿ, " ಇಲ್ಲ, ಏನೂ ಇಲ್ಲ ಈ ಮಾತು ಅವರೇ ಹೇಳಿದರೇ ? " ಎಂದು ಕೇಳಿದಳು

" ಹೌದು, ಅವನೇ ಹೇಳಿದ ತಾಯಿ ಒಂದು ತುಟಿ ಎರಡು ಮಾಡಲೇ ಇಲ್ಲ ಅವಳು ಮುಂಜಾನೆ ಎಲ್ಲಿಗೂ ಹೋಗಿದ್ದಳು ಅಲ್ಲಿಯವರೆಗೆ ಅವಳ ಊಟವಾಗಿರಲಿಲ್ಲ, ಸ್ನಾನವೂ ಆಗಿರಲಿಲ್ಲ ಅವಳು ಬೆವ್ವಾಗಿ ನೆಟ್ಟ ನೋಟ

ದಿಂದ ನನ್ನನ್ನು ನೋಡತೊಡಗಿದಳು ನಾನು ಅವಳಿಗೆ ಏನು ಕೊಟ್ಟೆ, ಏನು ಹೇಳಿದೆ ಎಂಬುದೂ ಗೊತ್ತಾದಂತೆ ತೋರಲಿಲ್ಲ'' ಎಂದು ಕುಂಜ ತನ್ನಷ್ಟಕ್ಕೆ ತಾನೇ ಗುಣುಗುಟ್ಟುತ್ತ ಗಂಟನ್ನು ತಲೆಯ ಮೇಲಿಟ್ಟುಕೊಂಡು ಹೊರಗೆ ಹೋಗಿಬಿಟ್ಟ

ಮೂರು-ನಾಲ್ಕು ದಿನಗಳಾದುವು ಅಡಿಗೆ ಸರಿಯಾಗದಿದ್ದುದರಿಂದ ಕುಂಜ ಮುಖವನ್ನು ಸ್ವಲ್ಪ ಗಂಟುಹಾಕಿದ್ದ ಇಂದು ಅವನು ಅಡಿಗೆಯನ್ನು ಸ್ಪಷ್ಟವಾಗಿ ಟೀಕಿಸಿದ್ದರಿಂದ ಅಣ್ಣ ತಂಗಿಯರಲ್ಲಿ ಬಹಳ ಜಗಳವಾಯಿತು

ಕುಂಜ ಸಿಟ್ಟಿನಿಂದ ಊಟದ ತಟ್ಟೆಯನ್ನು ಮೂಲೆಗೆ ಸರಿಸಿ "ಅನ್ನ ಅಂಗಾರವಾದರೂ ಆಗುತ್ತದೆ, ಇಲ್ಲವೆ ಮಂತ್ರಾಕ್ಷತೆಯಾದರೂ ಆಗುತ್ತದೆ ಇತ್ತೀಚೆ ನಿನ್ನ ಮನಸ್ಸಿಗೇನಾಗಿದೆ ಕುಸುಮಾ ?" ಎಂದ

ಕುಸುಮೆಯೂ ಕೋಪದಿಂದ "ನಾನು ಕೊಂಡುತಂದ ತೊತ್ತಲ್ಲ ರುಚಿಯಾಗಿ ಯಾರು ಅಡುಗೆ ಮಾಡುವರೊ ಅವರನ್ನು ಕರೆದುಕೊಂಡು ಬಾ ಬೇಕಾದರೆ" ಎಂದಳು

ಕುಂಜನ ಹೊಟ್ಟೆ ಉರಿಯುತ್ತಿದ್ದಿತು ಅವನು ಅಂಜದೆ ಬಾಗಿಲು ಕಡೆಗೆ ಕೈತೋರಿಸುತ್ತ—"ಮೊದಲು ನೀನು ಇಲ್ಲಿಂದ ಹೊರಟು ಹೋಗು, ಆಮೇಲೆ ನೋಡು, ತರುವೆನೋ ಇಲ್ಲವೊ ಎಂಬುದನ್ನು" ಎಂದು ನುಡಿದವನೇ ಗಂಟು ಹೊತ್ತುಕೊಂಡು ಹೋಗಿಬಿಟ್ಟನು

ಅಣ್ಣನನ್ನು ಬಾಡಾಲ ಗ್ರಾಮಕ್ಕೆ ಕಳಿಸಿದಂದಿನಿಂದ ಕುಸುಮೆಗೆ ಮನದಣಿ ಅಳಬೇಕೆನ್ನಿಸಿತ್ತು ಆ ಸುಯೋಗ ಇಂದು ಅವಳು ಕಳೆದುಕೊಳ್ಳಲಿಲ್ಲ

ಅಣ್ಣನಿಗೆ ಬಡಿಸಿದ ತಟ್ಟೆ ಹಾಗೆಯೆ ಬಿದ್ದಿತ್ತು, ಮುಂಬಾಗಿಲೂ ಹಾಗೆಯೆ ತೆರೆದಿದ್ದಿತು. ಕುಸುಮೆ ಚೌಕಟ್ಟಿಗೆ ತಲೆಯೊರಗಿಸಿ, ಮನೆಯಲ್ಲಿ ಯಾರಾದರೂ ಸತ್ತಾಗ ಅಳುವಂತೆ ಮನದಣಿ ಅಳತೊಡಗಿದಳು

ಆಗ ಸುಮಾರು ಹತ್ತು ಗಂಟೆ ಗಂಟೆಗಟ್ಟಲೆ ಅತ್ತ ಬಳಿಕ ಅವಳು ದಣಿದು ಅಲ್ಲಿಯೆ ಮಲಗಿದ್ದಳು ಅಷ್ಟರಲ್ಲಿ ಹೊರಗೆ ಅಂಗಳದಲ್ಲಿ ವೃಂದಾವನ "ಕುಂಜಣ್ಣ, ಕುಂಜಣ್ಣ" ಎಂದು ಕೂಗುತ್ತಿರುವುದು ಕೇಳಿಸಿತು ಅವನ ಕೈ-ಬೆರಳು ಹಿಡಿದುಕೊಂಡು ಆರೇಳು ವರ್ಷದ ಮೈದುಂಬಿದ ಸುಂದರ ಬಾಲಕನೊಬ್ಬ ನಿಂತಿದ್ದ ಕುಸುಮೆ ಗಾಬರಿಯಿಂದ ತಲೆಯ ಮೇಲೆ ಸೆರಗ

ನ್ನೆಳೆದುಕೊಂಡು ಕಿಡಿಕೆಯ ಮರೆಯಲ್ಲಿ ಬಂದು ನಿಂತಳು ಕಿಡಿಕೆಯ ಕಿಂಡಿಯೊಳಗಿಂದ ಒಂದೇ ಸವನೆ ಆ ಸುಂದರ ಬಾಲಕನನ್ನು ನೋಡುತ್ತ ಅವಳು ಎಲ್ಲವನ್ನು ಮರೆತಳು

ಆ ಮಗು ತನ್ನ ಗಂಡನದೆಂಬುದು ಅವಳಿಗೆ ಕೂಡಲೇ ತಿಳಿಯಿತು ಆ ಮಗುವನ್ನು ನೋಡುತ್ತಿರುವಂತೆಯೆ ಅವಳ ಕಣ್ಣು ಒದ್ದೆಯಾದುವು

ಆ ಮಗುವನ್ನೆತ್ತಿಕೊಳ್ಳಲು ತನ್ನ ಎರಡು ಕೈ ಸಾವಿರ ಕೈಗಳಾಗಿ ಮುಂದೆ ಹೋಗುತ್ತಿರುವವೋ ಎಂಬಂತೆ ಅವಳಿಗ ಭಾಸವಾಗತೊಡಗಿತು ಆದರೆ ಅತ್ತ ಒಂದು ಹೆಜ್ಜೆಯಿಕ್ಕುವುದಕ್ಕೂ ಅವಳಿಂದಾಗಲಿಲ್ಲ ಮಗುವನ್ನು ಕೂಗಿ ಕರೆಯುವುದಕ್ಕೂ ಆಗಲಿಲ್ಲ ಆ ಮಗುವನ್ನು ದಿಟ್ಟಿಸಿ ನೋಡುತ್ತ ಕಲ್ಲಿನ ಮೂರ್ತಿಯಂತೆ ನಿಂತುಬಿಟ್ಟಳು ಮನೆಯಲ್ಲಿ ಯಾರ ಸುಳಿವೂ ಇಲ್ಲ-ದಿದ್ದುದನ್ನು ಕಂಡು ವೃಂದಾವನ ಕೊಂಚ ಅಚ್ಚರಿಗೊಂಡ

ಈ ಊರಿಗೆ ವೃಂದಾವನ ಇಂದು ಮುಂಜಾನೆಯೆ ಬಂದಿದ್ದ ಈಗ ತನ್ನ ಕೆಲಸ ತೀರಿಸಿಕೊಂಡು ತನ್ನ ಊರಕಡೆಗ ಹೊರಟಿದ್ದಾಗ ಕುಂಜನ ಮನೆಯ ಬಾಗಿಲು ತೆರೆದುದನ್ನು ಕಂಡು, ಅವನು ಮನೆಯಲ್ಲಿರಬಹುದೆಂದು ಭಾವಿಸಿ, ಗಾಡಿಯಿಂದಿಳಿದು ಮನೆಯ ಅಂಗಳದೊಳಗೆ ಬಂದಿದ್ದ ಕುಂಜನೊಡನೆ ಅಗತ್ಯದ ಕೆಲಸವಿದ್ದಿತು ಅವನಿಗೆ ಊರಿನಿಂದ ವೃಂದಾವನ ಬೆಳಿಗ್ಗೆ ಹೊರಟಾಗ ಅವನ ಮಗ ಚರಣನೂ ಬಂಡಿಯಲ್ಲಿ ಕುಳಿತಿದ್ದುದರಿಂದ, ಅವನನ್ನೂ ಇಲ್ಲಿಗೆ ಕರೆದುಕೊಂಡು ಬಂದಿದ್ದ

ವೃಂದಾವನನು ತಿರಿಗಿ “ ಮನೆಯಲ್ಲಿ ಯಾರೂ ಇಲ್ಲವೇ ? ” ಎಂದು ಕೂಗಿದ ಇದಕ್ಕೂ ಉತ್ತರ ದೊರೆಯಲಿಲ್ಲ

ಚರಣನೆಂದ— “ ಅವ್ವಾ, ಬಾಯಾರಿಕೆಯಾಗಿದೆ ನೀರು ಬೇಕು ”

ವೃಂದಾವನ ಮಗುವನ್ನು ಗದ್ದರಿಸುತ್ತ— “ ಅದೆಂತಹ ಬಾಯಾರಿಕೆಯೋ ಈಗ ? ಬೇಕಾದರೆ ನದಿಯಲ್ಲಿ ನೀರು ಕುಡಿಯುವೆಯಂತೆ ” ಎಂದ

ಪಾಪ, ಹುಡುಗ ಮೋರೆ ಚಿಕ್ಕದು ಮಾಡಿಕೊಂಡು ಸುಮ್ಮನಾದ

ಅಂದು ಲಜ್ಜೆಯನ್ನು ಹತ್ತಿಕ್ಕಿ ಕುಸುಮೆ ಸ್ವಚ್ಛಂದವಾಗಿ ವೃಂದಾವನನ ಎದುರಿಗೆ ಬಂದಿದ್ದಳು, ಅವಶ್ಯವಿದ್ದ ಮಾತುಗಳನ್ನು ನಿಸ್ಸಂಕೋಚವಾಗಿ ಆಡಿದ್ದಳು ಆದರೆ ಇಂದು ಅವಳು ನಾಚಿಕೆಯಿಂದ ಪರವಶಳಾಗಿದ್ದಾಳೆ

ಬಾಲಕ ಚರಣನು ನೀರು ಕೇಳದಿದ್ದಲ್ಲಿ ಅವಳು ಇಂದು ಹೊರ-ಬರುತ್ತಿರಲಿಲ್ಲ. ಮೊದ-ಮೊದಲು ಅವಳಿಗೆ ಸಂಕೋಚವೆನಿಸಿತು ಆದರೂ ಅವಳು

ಜಮಖಾನೆಯನ್ನು ತಂದು ಪಡಸಾಲೆಯಲ್ಲಿ ಹಾಸಿದಳು, ವೃಂದಾವನನ ಹತ್ತಿರ ಹೋಗಿ ಚರಣನನ್ನು ಎತ್ತಿಕೊಂಡು ಹಾಗೆಯೆ ಮಾತಾಡದೆ ಒಳಗೆ ಹೋಗಿಬಿಟ್ಟಳು

ವೃಂದಾವನನಿಗ ಈ ಸಂಕೇತದ ಅರ್ಥವಾಯಿತು ಆದರೆ ಚರಣನು ತೀರ ಅಪರಿಚಿತಳ ಕೂಡ ಹೇಗ ಹೋದನಂಬುದೇ ಅವನಿಗೆ ತಿಳಿಯಲಿಲ್ಲ ಮಗನ ಸ್ವಭಾವ ತಂದೆಗೆ ಚನ್ನಾಗಿ ಗೊತ್ತು

ಇತ್ತ ಚರಣನಿಗೆ ಏನು ಮಾಡಬೇಕೆನ್ನುವುದು ತಿಳಿಯದಾಯಿತು ತನ್ನ ತಂದೆ ಇದೇ ಈಗ ಬದರಿಸಿದ್ದ ಈಗ ಅಪರಿಚಿತ ಸ್ತ್ರೀಯೊಬ್ಬಳು ಎಲ್ಲಿಂದಲೋ ಬಂದು ತನ್ನನ್ನು ಎತ್ತಿಕೊಂಡು ಹೋದುದು ಅವನಿಗೆ ಬಹು ವಿಚಿತ್ರವಾಗಿ ತೋರಿತು ಹೀಗೆ ಎತ್ತಿಕೊಂಡು ಹೋದ ಅನುಭವ ಅವನಿಗೆ ಈ ಜೀವಮಾನದಲ್ಲೇ ಹೊಸದು

ಕುಸುಮೆ ಚರಣನನ್ನು ಒಳಗೆ ಕರೆದೊಯ್ದು ತಿನ್ನಲು ಮೊದಲು ಬತ್ತಾಸು ಕೊಟ್ಟಳು ಸ್ವಲ್ಪ ಹೊತ್ತಿನವರೆಗೆ ಅವನನ್ನು ಒಂದೇ ಸವನೆ ನೋಡಿದ ಬಳಿಕ ತನ್ನ ಎರಡೂ ಕೈಗಳಿಂದ ಅವನನ್ನು ನೆಳೆದಪ್ಪಿಕೊಂಡು ಅಳತೊಡಗಿದಳು

ಚರಣನು ತನ್ನನ್ನು ಈ ಬಾಹು-ಬಂಧನದಿಂಡ ಬಿಡಿಸಿಕೊಳ್ಳಲು ಯತ್ನಿಸುತಿದ್ದಾಗ ಕುಸುಮೆ ತನ್ನ ಕಣ್ಣುಗಳನ್ನು ಒರೆಸಿಕೊಂಡು— " ಏಕೆ ಮಗೂ, ನಾನು ನಿನ್ನ ತಾಯಿಯಲ್ಲವೆ ? " ಎಂದಳು

ಕುಸುಮೆಗೆ ಮಕ್ಕಳೆಂದರೆ ಬಾಲ್ಯದಿಂದಲೂ ಹುಚ್ಚು ಎತ್ತಿಕೊಂಡ ಮಗುವನ್ನು ಅವಳು ಬೇಗನೆ ಬಿಡುತ್ತಲ ಇರಲಿಲ್ಲ ಆದರೆ ಅವಳ ಹೃದಯ ದಲ್ಲಿ ಮಕ್ಕಳ ಬಯಕೆಯ ಬಿರುಗಾಳಿ ಇಂದಿನಷ್ಟು ಎಂದೂ ಎದ್ದಿರಲಿಲ್ಲ ಅವಳ ಎದೆ ಮಕ್ಕಳಿಗಾಗಿ ಹಾತೊರೆಯ ತೊಡಗಿತು ಈ ಸುಂದರ ಸುದೃಢ ಬಾಲಕ ತನ್ನವನಾಗಬಹುದಾಗಿದ್ದಿತು ಆದರೆ ಏಕಾಗಲಿಲ್ಲ ? ಇದಕ್ಕೆ ಯಾರು ಅಡ್ಡಬಂದರು ? ತಾಯಿಯನ್ನು ಸಂತಾನವಂಚಿತಳನ್ನಾಗಿ ಮಾಡುವ ಅಧಿಕಾರ ಜಗತ್ತಿನಲ್ಲಿ ಯಾರಿಗಿದೆ ? ಅವಳ ವಂಚಿತ ತೃಷಿತ ಮಾತೃಹೃದಯಕ್ಕೆ ಚರಣನನ್ನು ಅಪ್ಪಿಕೊಂಡಷ್ಟೂ ಸಮಾಧಾನವಾಗಲಿಲ್ಲ ತನ್ನ ಪುತ್ರಧನವನ್ನು ಯಾರೋ ಅನ್ಯಾಯದಿಂದ, ಒತ್ತಾಯದಿಂದ ಕಸಿದು ಕೊಂಡಿರುವರೆಂದು ಕುಸುಮೆಗೆ ಭಾಸವಾಗತೊಡಗಿತು

ಆದರೆ ಚರಣನಿಗೆ ಸಾಕಾಗಿ ಹೋಗಿತ್ತು ಹೀಗೆ ಆಗುವುದೆಂದು

ಮೊದಲೆ ತಿಳಿದಿದ್ದರೆ ನದಿಗೆ ಹೋಗಿಯೆ ನೀರು ಕುಡಿಯುತ್ತಿದ್ದ ಅವನಿಗೆ ಪ್ರೀತಿಯ ಈ ಅಸಹ್ಯ ಪೀಡನೆಗಿಂತ ಬಾಯಾರಿಕೆಯ ಕಾಟವೇ ಹೆಚ್ಚು ಸಹ್ಯವಾಗುತ್ತಿದ್ದಿತೊ ಏನೊ? ಆಗ ಅವನು—"ಬಿಡು ನನ್ನನ್ನು" ಎಂದ

ಕುಸುಮೆ ತನ್ನ ಎರಡೂ ಕೈಗಳಿಂದ ಅವನ ಮುಖವನ್ನು ಹಿಡಿದೆತ್ತಿ—"ಒಮ್ಮೆ ಅಮ್ಮಾ ಎನ್ನು ಮಗು, ಎಂದರೆ ಬಿಡುವೆ" ಎಂದಳು

ಚರಣ ತಲೆಯಲ್ಲಾಡಿಸುತ್ತ "ಇಲ್ಲ, ಎನ್ನುವುದಿಲ್ಲ" ಎಂದ

"ಹಾಗಾದರೆ ಬಿಡುವುದಿಲ್ಲ ನೋಡು" ಎಂದು ಕುಸುಮೆ ಅವನನ್ನು ಗಟ್ಟಿಯಾಗಿ ಬಿಗಿದಪ್ಪಿಕೊಂಡಳು ಆಮೇಲೆ ಅವನ ಮುಖವನ್ನು ಬಿಟ್ಟು-ಬಿಡದೆ ಮುದ್ದಿಡುತ್ತ "ಅಮ್ಮಾ ಎನ್ನದಿದ್ದರೆ ಬಿಡುವುದೇ ಇಲ್ಲ" ಎಂದಳು

ಚರಣನು ಅಳುದನಿಯಲ್ಲಿ "ಅಮ್ಮಾ" ಎಂದನು

ಈಗಂತೂ ಚರಣನನ್ನು ಬಿಡುವುದೆಂದರೆ ಅವಳಿಂದ ಸಾಧ್ಯವೇ ಆಗಲಿಲ್ಲ ಅವಳು ಅವನನ್ನು ಎದೆಗಪ್ಪಿಕೊಂಡು ಅಳತೊಡಗಿದಳು

ಹೊತ್ತು ಮಿತಿಮೀರುತ್ತಿದ್ದಿತು ಹೊರಗಿನಿಂದ ವೃಂದಾವನ "ಏನಪ್ಪಾ ಚರಣ, ಇನ್ನೂ ನೀರು ಕುಡಿಯುವದು ಮುಗಿಯಲಿಲ್ಲವೆ?" ಎಂದ

ಚರಣನು ಅಳುತ್ತ "ಈಕೆ ಬಿಡುವುದೇ ಇಲ್ಲ" ಎಂದ

ಕುಸುಮೆ ಕಣ್ಣೊರೆಸಿಕೊಳ್ಳುತ್ತ ಕುಗ್ಗಿದ ದನಿಯಲ್ಲಿ "ಇಂದು ಚರಣ ನನ್ನ ಬಳಿಯಲ್ಲೇ ಇರಲಿ" ಎಂದಳು

ವೃಂದಾವನ ಬಾಗಿಲಹತ್ತಿರ ಬಂದು "ಅವನು ಇರುವನೆ? ಅಲ್ಲದೆ ಇನ್ನೂ ಅವನ ಊಟವಾಗಿಲ್ಲ ಅಮ್ಮನಿಗೂ ಅವನ ಹಂಬಲ" ಎಂದ

ಕುಸುಮೆಯೂ ಹಾಗೆಯೇ "ಇರದೆ ಏನು? ಇಂದು ನನಗೂ ಬೇಸರವಾಗಿದೆ" ಎಂದು ಉತ್ತರವಿತ್ತಳು

"ಯಾಕೆ? ಏನಾಗಿದೆ?"

ಕುಸುಮೆ ಏನೂ ಉತ್ತರವೀಯಲಿಲ್ಲ ಸ್ವಲ್ಪಹೊತ್ತಿನಮೇಲೆ "ಬಂಡಿ ಹಿಂತಿರುಗಿ ಕಳಿಸಿ ಬಿಡಿರಿ ಹೊತ್ತಾಗಿದೆ ನಾನು ಚರಣನನ್ನು ನದಿಗೆ ಕರೆ-ದೊಯ್ದು ಸ್ನಾನಮಾಡಿಸಿಕೊಂಡು ಬರುವೆ" ಎಂದಳು

ಇಷ್ಟುಹೇಳಿ ಉತ್ತರದ ದಾರಿನೋಡದೆ ಚರಣನನ್ನೆತ್ತಿಕೊಂಡು, ಎಣ್ಣೆ ಪಂಚೆಗಳೊಂದಿಗೆ ನದಿಯ ಕಡೆಗೆ ಹೊರಟೇಬಿಟ್ಟಳು

ಮನೆಯ ಮುಂಬದಿಯಲ್ಲಿ ಚಿಕ್ಕ ನದಿಯಿದ್ದಿತು ಅದನ್ನು ನೋಡಿ-ದೊಡನೆಯೆ ಚರಣನ ಮನಸ್ಸು ಹಿಗ್ಗಿತು ಅವನ ಊರಿನಲ್ಲಿ ನದಿಯಿಲ್ಲ,

ಚಿಕ್ಕ ಕೆರೆಯಿದೆ ಆ ಕೆರೆಯಲ್ಲಿ ಅವನನ್ನು ಯಾರೂ ಇಳಿಯಗೊಡುತ್ತಿರಲಿಲ್ಲ ಆದುದರಿಂದ ಅವನಿಗೆ ಇಂದಿನಂತಹ ಭಾಗ್ಯ ಈ ಮೊದಲು ಎಂದೂ ದೊರೆತಿರಲಿಲ್ಲ ಘಟ್ಟದ ಮೇಲೆ ಕುಳಿತುಕೊಂಡು ಏನೂ ಹಟ ಮಾಡದೆ ಎಣ್ಣೆ ಹಚ್ಚಿಸಿಕೊಂಡು ಮೊಳಕಾಲುವರೆಗಿನ ನೀರಿನಲ್ಲಿ ಹಾರಿದ ಸ್ವಲ್ಪ ಹೊತ್ತು ನೀರಿನಲ್ಲಿ ಚಲ್ಲಾಟವಾಡಿ ಕುಸುಮೆಯ ಬಗಲಿನಲ್ಲಿ ಬಂದುಕುಳಿತಾಗ ತಾಯಿ ಮಗುವಿನಲ್ಲಿ ಒಂದು ಬಗೆಯ ವಿಲಕ್ಷಣವಾದ ಸ್ನೇಹ ರೂಪುಗೊಂಡಿದ್ದಿತು

ಕುಸುಮೆ ವೃಂದಾವನನಿದ್ದಲ್ಲಿಗೆ ಮಗುವನ್ನೆತ್ತಿಕೊಂಡು ಬಂದಳು ತಲೆಯ ಮೇಲಿನ ಸೆರಗು ಹಣೆಯ ಅಂಚನ್ನು ಮಾತ್ರ ಮುಟ್ಟಿದ್ದಿತು ಸ್ವಲ್ಪ ಹೊತ್ತಿನ ಮುಂಚೆ ಮನಸ್ಸಿಗೆ ನೆಮ್ಮದಿ ಇಲ್ಲವೆಂದು ಹೇಳಿದ್ದವಳ ಮುಖದ ಮೇಲೆ ಈಗ ದುಗುಡದ ಗುರುತು ಸ್ವಲ್ಪವೂ ಕಾಣುತ್ತಿರಲಿಲ್ಲ ಮಾತ್ರವಲ್ಲ, ಅವಳ ಸುಂದರವಾದ ತುಟಿಗಳು ಇದೀಗ ಅರಳಿದ ಗುಲಾಬಿ ಹೂವಿನಂತೆ ನಸು-ನಗೆಯನ್ನು ಬೀರುತ್ತಿದ್ದವು ಅವಳ ನಡತೆಯಲ್ಲಿ ಯಾವ ಬಗೆಯ ಸಂಕೋಚವೂ ಇರಲಿಲ್ಲ ಅವಳು ಸಹಜಭಾವದಿಂದ—" ಸರಿ, ನೀವಿನ್ನು ನದಿಗೆ ಹೋಗಿ ಸ್ನಾನಮಾಡಿಕೊಂಡು ಬನ್ನಿರಿ " ಎಂದಳು

" ಆಮೇಲೆ ? "

" ಊಟ "

" ಮುಂದೆ ? "

" ವಿಶ್ರಾಂತಿ "

" ಅನಂತರ ? "

" ಹೋಗಿರಿ, ನನಗೆ ಗೊತ್ತಿಲ್ಲ ತೆಗೆದುಕೊಳ್ಳಿರಿ ಪಂಚೆ, ತಡಮಾಡಬೇಡಿರಿ " ಎಂದು ಕುಸುಮೆ ನಗುತ್ತ ವೃಂದಾವನನ ಮೇಲೆ ಪಂಚೆಯನ್ನೆಸೆದಳು

ವೃಂದಾವನ ಅಂಗವಸ್ತ್ರವನ್ನು ಹಿಡಿದುಕೊಂಡು ಮುಖ ತಿರುಗಿಸುತ್ತ ಒಂದು ನೀಳವಾದ ಉಸಿರೆಳೆದು– " ನನ್ನ ಮಾತಿರಲಿ ಚರಣನಿಗೆ ಉಣಿಸಿಬಿಡು ತಡಮಾಡಬೇಡ ನಾನು ತಿರಿಗಿ ಹೋಗಲೇ ಬೇಕು ! " ಎಂದ

" ಅದೇಕೆ ಹೋಗಬೇಕು ? ಬಂಡಿ ತಿರುಗಿ ಹೋದ ಬಳಿಕ ಅತ್ತೆಯವರಿಗೆ ಗೊತ್ತೇ ಆಗುವುದು "

" ಅದಕ್ಕೇ ಬಂಡಿ ಕಳಿಸದಿದ್ದುದು ಅದು ಊರ ಹೊರಗೆ ಮರದಡಿಯಲ್ಲಿ ನಿಂತಿದೆ "

ಇದನ್ನು ಕೇಳಿ ಕುಸುಮೆಯ ಅರಳಿದ ಮುಖ ಬಾಡಿತು ಆಗ ಅವಳು ಮುಖವನ್ನು ಸ್ವಲ್ಪ ಮೇಲಕ್ಕೆತ್ತಿ— "ಹಾಗಿದ್ದರೆ, ತಾಯಿಯನ್ನು ಕೇಳದೆ ಇಲ್ಲಿಗೆ ನೀವು ಬರಬಾರದಾಗಿತ್ತು" ಎಂದಳು

ನಿಗೂಢ ಅಭಿಮಾನದಿಂದ ತುಂಬಿದ ಕುಸುಮೆಯ ಸ್ವರವನ್ನು ಗುರುತಿಸಿ ವೃಂದಾವನ ನಕ್ಕ, ಆದರೆ ಆ ನಗೆಯಲ್ಲಿ ಆನಂದವಿರಲಿಲ್ಲ ಬಳಿಕ ಸಹಜವಾದ ದನಿಯಿಂದ "ಕುಸುಮಾ, ನಾನು ತಾಯಿಯ ಅಪ್ಪಣೆಯಿಲ್ಲದೆ ಈ ಮನೆಗಷ್ಟೇ ಏಕೆ, ಈ ಊರಲ್ಲಿ ಯಾರ ಮನೆಗೂ ಹೋಗುವಂತಿಲ್ಲ, ಇರಲಿಬಿಡು ಹಿಂದಿನಮಾತು ಕೆದರುವುದರಿಂದ ನನಗೂ ಪ್ರಯೋಜನವಿಲ್ಲ, ನಿನಗೂ ಪ್ರಯೋಜನವಿಲ್ಲ ಹೋಗು, ತಡಮಾಡಬೇಡ ಮಗುವಿಗೆ ಒಂದಿಷ್ಟು ಉಣಿಸಿಬಿಡು" ಎಂದು ಪುನಃ ಕುಳಿತುಕೊಂಡ

ಕುಸುಮೆ ಅತ್ಯಂತ ಕಷ್ಟದಿಂದ ಕಂಬನಿಗಳನ್ನು ತಡೆದು ಮಗುವನ್ನು ಕರೆದುಕೊಂಡು ಸುಮ್ಮನೆ ಕೋಣೆಗೆ ಹೋದಳು

ಒಂದು ಗಂಟೆಯ ಮೇಲೆ ತಂದೆ ಮತ್ತು ಮಗು ಇಬ್ಬರೂ ಬಂಡಿಯಲ್ಲಿ ಕುಳಿತು ಮನೆಗೆ ಹೋಗುವಾಗ ದಾರಿಯಲ್ಲಿ ಚರಣ ತಂದೆಯನ್ನು ಕೇಳಿದ– "ಅಪ್ಪಾ, ಅಮ್ಮ ಹೀಗೇಕೆ ಅಳುತ್ತಿದ್ದಳು ?"

ವೃಂದಾವನ ಅಚ್ಚರಿಗೊಂಡು, "ಏನಪ್ಪಾ, ಆಕೆ ನಿನ್ನ ತಾಯಿಯೆಂದು ಯಾರು ಹೇಳಿದರು ?" ಎಂದು ಕೇಳಿದ

ಚರಣ ತನ್ನ ಮಾತನ್ನೇ ಒತ್ತಿಹೇಳುತ್ತ "ಆಕೆಯಂತೂ ನನ್ನ ತಾಯಿ ಹೌದೇ ಹೌದು ಅಲ್ಲವೇನು ?" ಎಂದು ನುಡಿದ

ವೃಂದಾವನ ಈ ಮಾತಿಗುತ್ತರವೀಯದೆ "ನೀನು ಆಕೆಯೊಂದಿಗೆ ಇರಬಲ್ಲೆಯಾ ?" ಎಂದು ಪ್ರಶ್ನಿಸಿದ

ಚರಣ ಆನಂದದಿಂದ ತಲೆಯಲ್ಲಾಡಿಸುತ್ತ "ಓಹೋ" ಎಂದ

"ಸರಿ" ಎಂದು ವೃಂದಾವನ ಅಲ್ಲಿಯೆ ಒರಗಿಕೊಂಡು ಸೂರ್ಯ ಕಿರಣಗಳಿಂದ ತಪ್ತವಾದ ಶುಭ್ರ ಆಕಾಶವನ್ನು ನೋಡತೊಡಗಿದ

ಮರುದಿನ ಇಳಿಹೊತ್ತಿನಲ್ಲಿ ಕುಸುಮೆ ನೀರು ತರಲು ಹೊರಟಾಗ, ೧೨–೧೩ ವರ್ಷದ ಹುಡುಗನೊಬ್ಬನು ಅತ್ತಿತ್ತ ನೋಡುತ್ತ ಬಂದು "ಕುಂಜ ಬೈರಾಗಿಯ ಮನೆಯೆಲ್ಲಿದೆಯಮ್ಮಾ ?" ಎಂದು ಕೇಳಿದ

"ಯಾಕೆ ? ಎಲ್ಲಿಂದ ಬಂದೆ ? ಏನು ಬೇಕಾಗಿದೆ" ಎಂದು ಕೇಳಿದಳು ಕುಸುಮಾ

"ನಾನು ಬಾಡಾಲಿನಿಂದ ಬಂದೆ ಕುಂಜ ಬೈರಾಗಿಯವರ ವಿಳಾಸಕ್ಕೆ ಈ ಕಾಗದ ಕೊಟ್ಟು ಬರಲು ಪಂಡಿತರು ಹೇಳಿದ್ದಾರೆ" ಎಂದು ಆ ಹುಡುಗ ತನ್ನ ಸೆಲ್ಲೆಯ ಚುಂಗಿನೊಳಗಿಂದ ಪತ್ರ ಹೊರದೆಗೆದು ಕುಸುಮೆಯ ಕೈಗಿತ್ತನು ಕುಸುಮೆಯ ನೆತ್ತರು ವೇಗವಾಗಿ ಹರಿಯತೊಡಗಿತು ಕಾಗದದ ಮೇಲೆ ತನ್ನ ಹೆಸರೇ ಇತ್ತು ತೆರೆದು ನೋಡಿದರೆ ಬಹು ದೊಡ್ಡ ಪತ್ರ-ಅದೂ ವೃಂದಾವನನದು

ಕಾಗದವನ್ನೋದಲು ಹಾತೊರೆಯುತ್ತಿರುವ ಮನಸ್ಸನ್ನು ಹತ್ತಿಕ್ಕಿ ಹುಡುಗನನ್ನು ಒಳಗೆ ಕರೆದೊಯ್ದು, "ಪಂಡಿತರೆಂದರೆ ಯಾರು? ಈ ಕಾಗದ ಯಾರು ಕೊಟ್ಟರು?" ಎಂದು ಕೇಳಿದಳು

ಹುಡುಗ ವಿಸ್ಮಿತನಾಗಿ "ಪಂಡಿತರು ಕೊಟ್ಟಿದ್ದಾರೆ" ಎಂದನು

ಕುಸುಮೆಗ ಸಾಲೆಯ ಸಮಾಚಾರ ತಿಳಿದಿರಲಿಲ್ಲ, ಆದುದರಿಂದ ಅವಳಿಗೆ ಯಾವುದೂ ಗೊತ್ತಾಗದಂತಾಯಿತು ಅವಳು "ನಿನಗ ಚರಣನ ತಂದೆಯವರು ಗೊತ್ತೇ?" ಎಂದು ಕೇಳಿದಳು

"ಗೊತ್ತು ಅವರೇ ನಮ್ಮ ಪಂಡಿತರು"

"ಅವರು ನಿಮಗೆ ಪಾಠ ಹೇಳಿಕೊಡುತ್ತಾರೆಯೆ?"

"ಹೌದು, ನನಗೊಬ್ಬನಿಗೇ ಅಲ್ಲ, ಇನ್ನೂ ಎಷ್ಟೋ ಹುಡುಗರಿಗೆ ಹೇಳಿಕೊಡುತ್ತಾರೆ"

ಕುಸುಮೆ ಇನ್ನಿಷ್ಟು ಉತ್ಸಾಹದಿಂದ ಪ್ರಶ್ನೆಯ ಮೇಲೆ ಪ್ರಶ್ನೆಯನ್ನು ಕೇಳಿ ಈ ವಿಚಾರವಾಗಿ ಎಲ್ಲವನ್ನೂ ತಿಳಿದುಕೊಂಡಳು ಪಾಠಶಾಲ ಪಂಡಿತರ ಮನೆಯಲ್ಲೇ ಸ್ಥಾಪಿತವಾಗಿದೆಯೆಂದು ತಿಳಿದಳು ಹುಡುಗರು ಶುಲ್ಕ ಕೊಡಬೇಕಾದುದಿಲ್ಲ, ಹಗಲು ಬಿಡುವು ದೊರೆಯದ ಮಕ್ಕಳು ರಾತ್ರಿ ಓದು ಹೇಳಿಸಿಕೊಳ್ಳುತ್ತಾರೆ, ದೇವರ ಪೂಜೆಯಾದ ಮೇಲೆ ಪ್ರಸಾದ ತೆಗೆದುಕೊಂಡು ನೆಗೆಯುತ್ತ ಕೆಲೆಯುತ್ತ ಮನೆಗೆ ತೆರಳುತ್ತಾರೆ ಸ್ವಲ್ಪ ದೊಡ್ಡವರಾದ ಇಬ್ಬರು ವಿದ್ಯಾರ್ಥಿಗಳು ಇಂಗ್ಲಿಷು ಕಲಿಯುತ್ತಾರೆ, ಮುಂತಾದ ಎಲ್ಲ ವಿಷಯಗಳನ್ನೂ ತಿಳಿದುಕೊಂಡಳು ಹುಡುಗನನ್ನು ಬೆಂಡು ಬೆತ್ತಾಸು ಕೊಟ್ಟು ಕಳುಹಿ, ಕುಸುಮೆ ಪತ್ರವನ್ನು ಓದತೊಡಗಿದಳು

ಆದರೆ ಕುಸುಮೆಯ ಹೊಂಗನಸು ಸಂಪೂರ್ಣವಾಗಿ ಭಂಗವಾಯಿತು ಪತ್ರ ಬರೆದಿದ್ದುದು ತನಗೇ ಆದರೆ ಅದರಲ್ಲಿ ಯಾವ ಬಗೆಯ ಸಂಬೋಧನೆಯೂ ಇಲ್ಲ, ಸ್ನೇಹದ ಒಂದು ನೊಲ್ಲೂ ಇಲ್ಲ, ಆಶೀರ್ವಾದದ ಮಾತಂತೂ

ಇಲ್ಲವೇ ಇಲ್ಲ ಆದರೂ ಇದೇ ಅವನ ಮೊದಲನೆಯ ಪತ್ರ! ತನಗೆ ಇದು ವರೆಗೆ ಯಾರಿಂದಲೂ ಪತ್ರ ಬಾರದಿದ್ದರೂ, ತನ್ನ ಗೆಳತಿಯರಿಗೆ ಬಂದ ಪತ್ರ ಗಳನ್ನು ಆಕೆ ನೋಡಿದ್ದಳು ಆ ಪತ್ರಗಳಿಗೂ ಇದಕ್ಕೂ ಅದೆಷ್ಟು ಅಂತರ! ಇದರಲ್ಲಿರುವುದು ಮೊದಲಿನಿಂದ ಕೊನೆಯವರೆಗೆ ಕೆಲಸದ ಮಾತುಗಳೆ ಮುಖ್ಯವಾದ ಮಾತು ಕುಂಜನಾಥನ ಮದುವೆಯದು ಇದನ್ನು ಹೇಳುವು ದಕ್ಕಾಗಿಯೆ ನಿನ್ನೆ ವೃಂದಾವನ ಬಂದುದು ತನ್ನ ತಾಯಿ ಕುಂಜನಾಥನ ಮದುವೆ ನಿಶ್ಚಯಿಸಿದ್ದಾಳೆ, ವೆಚ್ಚದ ಎಲ್ಲ ಭಾರವನ್ನೂ ತಾನೇ ಹೊರಲು ಸಿದ್ಧಳು ಈ ಮದುವೆ ಸರ್ವ ದೃಷ್ಟಿಯಿಂದಲೂ ಬೇಗ ಆಗುವುದು ಒಳಿತು ಏಕೆಂದರೆ ಕುಂಜನ ಮತ್ತು ಕುಸುಮೆಯ ಸಾಂಸಾರಿಕ ಕಷ್ಟಗಳು ಇದ ರಿಂದ ದೂರಾಗುವವು ಈ ಎಲ್ಲ ಸಂಗತಿ ಆ ಕಾಗದದಲ್ಲಿತ್ತು

ಒಮ್ಮೆ ಅದನ್ನು ಓದಿದ ಮೇಲೆ ಮತ್ತೊಮ್ಮೆ ಓದಲು ಪ್ರಯತ್ನಿಸಿದಳು. ಆದರೆ ಈ ಸಲ ಎಲ್ಲ ಅಕ್ಷರಗಳೂ ತನ್ನ ಕಣ್ಮುಂದೆ ಕುಣಿಯುತ್ತಿರುವವೊ ಎಂಬಂತೆ ಅವಳಿಗನಿಸಿತು ಹಾಗೂ ಹೀಗೂ ಪತ್ರವನ್ನು ಮಡಿಚಿ, ತನ್ನ ಕೋಣೆಗೆ ಬಂದು ಬಿದ್ದುಕೊಂಡಳು ಇಷ್ಟು ದೊಡ್ಡ ಸೌಭಾಗ್ಯದ ಸಂಭವ ಕೂಡ ಕುಸುಮೆಯ ಮನದಲ್ಲಿ ಆನಂದದ ಒಂದಿಷ್ಟು ಆಭಾಸವನ್ನೂ ಮೂಡಿಸಲಾರದೆ ಹೋಯಿತು

## ೬

ಕುಂಜನಾಥನ ಮದುವೆಯಾಗಿ ಸುಮಾರು ಒಂದು ತಿಂಗಳಾಯಿತು. ಅಂದಿನಿಂದ ವೃಂದಾವನ ಕುಂಜನ ಮನೆಗೆ ಕಾಲಿಡಲಿಲ್ಲ ಜ್ವರದ ನೆವವನ್ನು ಮುಂದೊಡ್ಡಿ ಮದುವೆಗೂ ಬಂದಿರಲಿಲ್ಲ ಅವನ ತಾಯಿಯೂ ಮದುವೆಗೆ ಒಂದು ದಿನದ ಮಟ್ಟಿಗೆ ಬಂದಿದ್ದಳು ಏಕೆಂದರೆ ಅವಳಿಗೆ ಕುಲದೇವತೆ ಯನ್ನು ಬಿಟ್ಟು ಇರುವುದು ಒಗ್ಗುತ್ತಿರಲಿಲ್ಲ ಚರಣನೊಬ್ಬನು ಮಾತ್ರ ಐದಾರು ದಿನ ಇದ್ದ ತನ್ನ ಮನಸ್ಸಿಗೆ ಒಪ್ಪಿದಂತಹ ತಾಯಿ ದೊರೆತುದ ರಿಂದಲೊ ನದಿಯಲ್ಲಿ ಸ್ನಾನ ಮಾಡಲು ಸಿಕ್ಕುವುದರಿಂದಲೊ, ಅವನು ಊರಿಗೆ ಹೋಗಲು ಬಯಸಲಿಲ್ಲ ತಂದೆಯ ಒತ್ತಾಯಕ್ಕೆ ಕಟ್ಟುಬಿದ್ದು

ಮನೆಗೆ ಹೋಗಲೇಬೇಕಾಯಿತು. ಅವನು ಹೋದಂದಿನಿಂದ ಕುಸುಮೆಗೆ ಜೀವನವೇ ಭಾರವಾಯಿತು.

ಮುಂದೆ ಏನಾಗಬಹುದೆಂದು, ಅಣ್ಣನ ಮದುವೆಯ ಮೊದಲೇ ಅವಳು ಯೋಚಿಸಿದ್ದಳೊ ಅದೆಲ್ಲವೂ ಒಂದೊಂದಾಗಿ ನಡೆಯತೊಡಗಿತು ಅಣ್ಣನ ಸ್ವಭಾವ ಅವಳಿಗೆ ಗೊತ್ತು ಅತ್ತೆಯ ಮಾತಿಗೆ ಮರುಳಾಗಿ, ಕಷ್ಟಸಾಧ್ಯವಾದ ಇಲ್ಲಿಯ ಜೀವನವನ್ನು ಬಿಟ್ಟು, ಕುಂಜ ತನ್ನ ಅತ್ತೆಯ ಮನೆಗೆ ಹೋಗಿ ಇರಲು ಬಯಸುವನೆಂಬುದನ್ನು ಅವಳು ಅರಿತಿದ್ದಳು ಅದರಂತೆಯೆ ಆಯಿತು ಬಾಸಿಗ ಕಟ್ಟಿಕೊಂಡ ತಲೆಯ ಮೇಲೆ ಬುಟ್ಟಿಯನ್ನಿಟ್ಟುಕೊಳ್ಳುವುದು ಅವನಿಗೆ ಒಗ್ಗಲಿಲ್ಲ ಅಲ್ಲದೆ ನಲಡಾಂಗೆಯ ಜನರು ಏನೆಂದಾರು? ಮದುವೆಯ ಕಾಲದಲ್ಲಿ ಇವನಿಗೆ ವೃಂದಾವನನ ತಾಯಿ ಕೆಲವು ರೂಪಾಯಿ ಕೊಟ್ಟಿದ್ದಳು ಅದೇ ಹಣದಿಂದ ಅವನು ಕೆಲವು ಸಾಮಾನುಗಳನ್ನು ಕೊಂಡು ತಂದು, ಮನೆಯ ಹೊರಗೆ ಚಪ್ಪರ ಹಾಕಿ, ಒಂದು ಮಣಿಗಾರ ಅಂಗಡಿಯನ್ನು ತೆರೆದನು ಆದರೆ ಅಲ್ಲಿ ಒಂದು ಕಾಸಿನ ವ್ಯಾಪಾರವೂ ಆಗಲಿಲ್ಲ ಹೊಸ ಹೊಸ ಬಟ್ಟೆ, ಮೆಟ್ಟು ಹಾಕಿಕೊಂಡು ಅತ್ತೆಯ ಮನೆಗೆ ಈ ಒಂದು ತಿಂಗಳಲ್ಲಿಯೆ, ನಾಲ್ಕಾರು ಸಲ ಹೋಗಿಯೂ ಬಂದ ಕುಸುಮೆಯನ್ನು ಕಂಡರೆ ಮೊದಲು ಭಯವಿದ್ದಿತು, ಆದರೆ ಈಗ ಹಾಗಿಲ್ಲ "ಮನೆಯಲ್ಲಿ ಅಕ್ಕಿ ಇಲ್ಲ, ಬೇಳೆಯಿಲ್ಲ" ಎಂದು ಹೇಳಿದರೆ ಮರುಮಾತಾಡದೆ ಅಂಗಡಿಗೆ ಹೋಗಿಬಿಡುತ್ತಿದ್ದ, ಇಲ್ಲವೆ ಎತ್ತ ಕಡೆಗೊ ಜಾರಿಬಿಡುತ್ತಿದ್ದ, ಸಂಜೆಯವರೆಗೆ ಮನೆಗೇ ಬರುತ್ತಿರಲಿಲ್ಲ ಈ ಪರಿಸ್ಥಿತಿಗೆ ಕುಸುಮೆ ಗಾಬರಿಗೊಂಡಳು ಅವಳಲ್ಲಿದ್ದ ಅಲ್ಪ ಸ್ವಲ್ಪ ಹಣವೂ ವೆಚ್ಚವಾಗುತ್ತ ಬಂತು ಆದರೂ ಕುಂಜನಿಗೆ ಲಕ್ಷ್ಯವೇ ಇಲ್ಲ ಇಡಿಯ ದಿನ ಅಂಗಡಿಯಲ್ಲಿ ಕುಳಿತು ಹೊಗೆಸೊಪ್ಪು ಸೇದುತ್ತ ತೂಕಡಿಸುತ್ತಿದ್ದ ಅಂಗಡಿಗೆ ಬಂದವರನ್ನು ಕುಳ್ಳಿರಿಸಿಕೊಂಡು ಅತ್ತೆಮನೆಯ ಸಮಾಚಾರ ಬಣ್ಣಿಸುತಿದ್ದ, ಅಲ್ಲಿಯ ಆಸ್ತಿ-ವಾಸ್ತಿಯ ಬಗೆಗೆ ಕೊಚ್ಚಿಕೊಳ್ಳುತ್ತಿದ್ದ

ಒಂದು ದಿನ ಕುಂಜ ತನ್ನ ಕಾಲ್ಮರೆಗಳಿಗೆ ಎಣ್ಣೆತಿಕ್ಕಿ ಮಿರುಗು ಕೊಡುತ್ತಲಿದ್ದ ಅದನ್ನು ಸ್ವಲ್ಪ ಹೊತ್ತು ನೋಡುತ್ತ ನಿಂತು, ಕುಸುಮೆ "ಈ ದಿನ ಮತ್ತೆ ನಲಡಾಂಗೆಗೆ ಹೊರಟಂತೆ ಕಾಣುತ್ತದೆ" ಎಂದಳು.

ಅವನು ತನ್ನ ಕೆಲಸದಲ್ಲಿಯೆ ನಿರತನಾಗಿದ್ದು ಬರಿ "ಹೂಂ" ಗುಟ್ಟಿದ.

ಕುಸುಮೆ ಸ್ವಲ್ಪ ಕೋಮಲ ಸ್ವರದಿಂದ " ಅಣ್ಣ, ಅತ್ತೆಯ ಮನೆಗೆ ನೀನು ಮೊನ್ನೆ ತಾನೆ ಹೋಗಿದ್ದೆ, ಇಂದು ನನ್ನ ಚರಣನನ್ನು ಸ್ವಲ್ಪ ನೋಡಿ ಕೊಂಡು ಬರಬಾರದೆ? ಬಹಳ ದಿನಗಳಾದವು, ಅವನ ಸುದ್ದಿಯೆ ಇಲ್ಲ. ನನ್ನ ಜೀವ ತಳಮಳಿಸುತ್ತದೆ" ಎಂದಳು.

ಕುಂಜ ಸ್ವಲ್ಪ ಸಿಡಿಮಿಡಿಗೊಂಡು " ನಿನ್ನ ಜೀವ ಯಾವಾಗಲೂ ತಳ ಮಳಿಸುತ್ತದೆ ಅವನು ಚೆನ್ನಾಗಿಯೆ ಇದ್ದಾನೆ "

ಕುಸುಮೆಗೂ ಸಿಟ್ಟು ಬಂದಿತು ಆದರೂ ಅದನ್ನು ತಡೆಹಿಡಿದು, " ಅವನು ಚೆನ್ನಾಗಿಯೆ ಇರಲಿ ಆದರೂ ನೀನೊಮ್ಮೆ ನೋಡಿಕೊಂಡು ಬಾ ನಿನ್ನ ಅತ್ತೆಯ ಮನೆಗೆ ನಾಳೆ ಹೋಗು" ಎಂದಳು

ಕುಂಜ ಕೊಂಚ ರೇಗಿ " ನಾಳೆ ಹೋದರೆ ಹೇಗೆ? ಅಲ್ಲಿ ಗಂಡಸರು ಯಾರೂ ಇಲ್ಲ ಮನೆ-ಮಠ, ಆಸ್ತಿ-ವಾಸ್ತಿ ನೋಡುವ ಭಾರ ನನ್ನ ಮೇಲೆಯೆ ಬಿದ್ದಿದೆ ಇರುವವನು ನಾನೊಬ್ಬ, ಎಲ್ಲಿಗೆಂದು ಹೋಗಲಿ, ಏಷ್ಟೆಂದು ಮಾಡಲಿ?" ಎಂದ

ಅಣ್ಣನ ಮಾತಿಗೆ ಸಿಟ್ಟುಬಂದಿದ್ದರೂ ಕುಸುಮೆ ನಕ್ಕುಬಿಟ್ಟಳು ಅವಳು ನಗುತ್ತ ನಗುತ್ತ— "ಇಲ್ಲಣ್ಣ, ನೀನೆಲ್ಲ ಸಂಬಾಳಿಸಬಲ್ಲ ನಿನ್ನ ಕಾಲಿಗೆ ಬೀಳುವೆ, ಇಂದು ಒಂದು ದಿನ ಹೋಗಿ ಚರಣನನ್ನು ನೋಡಿಕೊಂಡು ಬಾ. ಇಂದು ನನ್ನ ಮನಸ್ಸಿನಲ್ಲಿ ಅವನಿಗಾಗಿ ಇಷ್ಟೇಕೆ ಕಳವಳವೊ ತಿಳಿಯದು"

ಕುಂಜ— "ವೃಂದಾವನ ನನ್ನ ಮದುವೆಗೆ ಬರಲಿಲ್ಲ ನಮ್ಮ ಮನೆಗೆ ಬರದಿರುವಷ್ಟು ದೊಡ್ಡ ಮನುಷ್ಯನೇನು ಅವನು? ನನ್ನಿಂದಂತೂ ಅವನ ಮನೆಗೆ ಹೋಗುವುದಾಗುವುದಿಲ್ಲ" ಎಂದು ಮೆಟ್ಟುಗಳನ್ನು ಒಂದು ಬದಿಗೆ ಕೋಪದಿಂದ ಸರಿಸುತ್ತ ನುಡಿದ

ಕುಂಜನ ಒಂದೊಂದು ಮಾತೂ ಕುಸುಮೆಗೆ ಅಸಹ್ಯವೆನಿಸುತ್ತ ಸಾಗಿ ದರೂ ಅವಳು ಶಾಂತಚಿತ್ತದಿಂದ— "ಆ ದಿನ ಅವರಿಗೆ ಜ್ವರ ಬಂದಿತ್ತು" ಎಂದಳು

"ಜ್ವರವೂ ಇಲ್ಲ ಏನೂ ಇಲ್ಲ ಇದು ಸುಳ್ಳೆಂದು ನಮ್ಮ ಅತ್ತೆ ನಲಡಾಂಗೆ ಯಲ್ಲಿದ್ದೇ ಹೇಳಿದಳು ಆಕೆ ಹಾಗೆ ಸುಲಭವಾಗಿ ಮೋಸಹೋಗುವವಳಲ್ಲ. ಮನೆಯಲ್ಲಿದ್ದೇ ಅವಳು ದೇಶದೊಳಗಿನ ಎಲ್ಲ ಸುದ್ದಿಯನ್ನು ತಿಳಿದುಕೊಳ್ಳುವ ಳೆಂಬುದು ನಿನಗೆ ಗೊತ್ತೇನು? ಅವನು ಕೃತಘ್ನನೇ ಸರಿ. ಅವನ ಮೋರೆ

ನೋಡುವ ಇಚ್ಛೆಯೂ ನನಗಿಲ್ಲ" ಎಂದು ಮೂದಲಿಸುತ್ತ ಕುಂಜನಾಥ ಎದ್ದು ನಿಂತು ಮೆಟ್ಟುಗಳನ್ನು ಹಾಕಿಕೊಂಡ

ಕುಸುಮೆಗೆ ಸಿಡಿಲು ಬಡಿದಂತಾಯಿತು ಅವಳು ಸ್ವಲ್ಪ ಹೊತ್ತು ಸುಮ್ಮನಿದ್ದು ಮೆಲ್ಲಗೆ ಎಂದಳು—"ಅವರು ಕೃತಘ್ನರೆ! ಸ್ವತಃ ನೀನೆ ಅವರನ್ನು ಮನೆಗೆ ಊಟಕ್ಕೆ ಕರೆದು ಬಹಳ ಕೃತಜ್ಞನಾಗಿದ್ದೆಯಲ್ಲವೆ? —ಮನೆಯಿಂದ ಹೇಳದೆ ಕೇಳದೆ ಓಡಿಹೋಗಿದ್ದೆಯಲ್ಲ, ಅಂದು! ಅಣ್ಣಾ, ನೀನು ಹೀಗಾಗುವೆ ಎಂದು ನಾನು ಕನಸು ಮನಸಿನಲ್ಲಿಯೂ ಎಣಿಸಿರಲಿಲ್ಲ."

ಮಾತಿನ ಈ ಪೆಟ್ಟಿಗೆ ಕುಂಜನಲ್ಲಿ ಏನೂ ಉತ್ತರವಿರಲಿಲ್ಲ ಆದುದರಿಂದ ಅದನ್ನು ಕೇಳಿಯೂ ಕೇಳದವನಂತೆ ಸುಮ್ಮನಾಗಿಬಿಟ್ಟ

ಕುಸುಮೆಗೆ ಅಲ್ಲಿಗೂ ಸಮಾಧಾನವಾಗಲಿಲ್ಲ ಅವಳು ಮತ್ತೆ—"ಯಾವುದಕ್ಕೆ ನಿನ್ನ ಆಸ್ತಿ, ಮನೆ-ಮಠ ಎಂದು ತಿಳಿದುಕೊಂಡಿರುವೆಯೊ ಅದು ನಿನ್ನ ಮದುವೆಯಾಗಿರದಿದ್ದರೆ ಯಾರದಾಗುತಿತ್ತು? ನಿನ್ನ ಮದುವೆ ಮಾಡಿಸಿದವರಾದರೂ ಯಾರು?" ಎಂದು ನುಡಿದಳು

"ಯಾರ ಮದುವೆ ಯಾರು ಮಾಡಿಸಬಲ್ಲರು? ಅತ್ತೆಯೆನ್ನುತ್ತಿದ್ದಳು-ಅರಳುವ ಹೂವನ್ನು ಯಾರಾದರೂ ತಡೆಯಬಲ್ಲರೆ? ಎಂದು ಮದುವೆ ಯಾಗುವುದಿದ್ದರೆ ಆಗಿಯೆ ಹೋಗುವುದು"

"ತನ್ನಿಂದ ತಾನೇ ಆಗಿಹೋಗುವುದೆ?"

"ಅಹುದು"

ಕುಸುಮೆ ಏನೂ ಮಾತನಾಡಲಿಲ್ಲ, ತನ್ನ ಕೋಣೆಗೆ ಹೊರಟು ಹೋದಳು. ನಾಚಿಕೆ, ತಿರಸ್ಕಾರಗಳಿಂದ ಅವಳ ಎದೆ ಉರಿಯತೊಡಗಿತು. ಛೀ! ಛೀ! ಈ ಮಾತು ಎಲ್ಲಾದರೂ ಅವರ ಕಿವಿಗೆ ಬಿದ್ದರೆ! ಅಣ್ಣ-ತಂಗಿ ಇಬ್ಬರೂ ಒಂದೇ ಪಡಿಯಚ್ಚಿನವರು ಎಂದು ಖಂಡಿತವಾಗಿ ತಿಳಿಯುವರು!

ಇಪ್ಪತ್ತು ನಿಮಿಷಗಳ ಬಳಿಕ ಕುಸುಮೆಗೆ ಮೆಟ್ಟಿನ ಸದ್ದು ಕೇಳಬಂದಿತು. ಆಗ ಅವಳು ಹೊರಗೆ ಬಂದು "ಹಿಂತಿರುಗಿ ಯಾವಾಗ ಬರುವೆ?" ಎಂದು ಕೇಳಿದಳು.

"ನಾಳೆ ಬೆಳಿಗ್ಗೆ."

"ನನ್ನೊಬ್ಬಳನ್ನೇ ಹೀಗೆ ಮನೆಯಲ್ಲಿ ಬಿಟ್ಟು ಹೋಗುವುದಕ್ಕೆ ನಿನಗೆ ದಿಗಿಲಾಗುವುದಿಲ್ಲವೆ? ನಾಚಿಕೆಯಾಗುವುದಿಲ್ಲವೆ?"

" ಅದೇನು ? ಇಲ್ಲೇನಾದರೂ ಹುಲಿ - ಕರಡಿಗಳಿವೆಯೆ ? ನಾನು ಬೆಳಿಗ್ಗೆಯೆ ಬಂದು ಬಿಡುವೆ " ಎಂದು ಕುಂಜ ಅತ್ತೆಯ ಮನೆಗೆ ಹೊರಟು ಬಿಟ್ಟ.

ಕುಸುಮೆ ಒಳಗೆ ಬಂದು ಉರಿಯುವ ಒಲೆಯನ್ನು ಆರಿಸಿ ಕೋಣೆಗೆ ಹೋಗಿ ಹಾಸಿಗೆಯ ಮೇಲೆ ಬಿದ್ದುಕೊಂಡಳು

೭

ದುಷ್ಕರ್ಮಿ ಪಶ್ಚಾತ್ತಾಪಪಟ್ಟು, ನಿರುಪಾಯನಾಗಿ ಎಂತಹ ಮುಖ-ಮುದ್ರೆಯಿಂದ ಅಪರಾಧವನ್ನು ಒಪ್ಪಿಕೊಳ್ಳುವನೊ ಅಂತಹ ಮುಖಮುದ್ರೆಯಿಂದ ವೃಂದಾವನ ತನ್ನ ತಾಯಿಯ ಬಳಿಗೆ ಹೋಗಿ " ಅಮ್ಮಾ, ನನ್ನನ್ನು ಕ್ಷಮಿಸು, ನಿನಗೆ ಒಳ್ಳೆಯ ಮನೆಗೆಲಸದವಳೊಬ್ಬಳನ್ನು ಗೊತ್ತುಮಾಡುತ್ತೇನೆ ನೀನು ಹೀಗೆ ಮನೆಯ ಎಲ್ಲ ಭಾರವನ್ನು ಹೊತ್ತು-ಹೊತ್ತು ಸೊರಗಿ ಸಾಯುವುದನ್ನು ನಾನು ನೋಡಲಾರೆ " ಎಂದು ನುಡಿದನು

ದೇವರ ಕೋಣೆಯಲ್ಲಿ ಪೂಜೆಯ ಸಾಮಾನುಗಳನ್ನು ಸಿದ್ಧಗೊಳಿಸುತ್ತಿದ್ದ ತಾಯಿ ತಲೆಯೆತ್ತಿ " ಏನು ? ಏನು ಮಾಡುವೆ ? " ಎಂದು ಕೇಳಿದಳು.

" ನಿನಗಾಗಿ ಒಬ್ಬ ಕೆಲಸದವಳನ್ನು ತರುವೆ ಅವಳು ಚರಣನನ್ನು ನೋಡಿಕೊಳ್ಳುವಳು ನಿನ್ನ ಸೇವೆ ಮಾಡುವಳು ಅವಶ್ಯವೆನಿಸಿದಾಗ ದೇವರ ಪೂಜೆಯ ಸಾಮಾನುಗಳನ್ನೂ ಅಣಿಮಾಡಿ ಕೊಡುವಳು ಕರೆತರಲೆ ? " ಎಂದು ವೃಂದಾವನ ವ್ಯಥಿತ, ಉತ್ಸುಕದೃಷ್ಟಿಯಿಂದ ತನ್ನ ತಾಯಿಯ ಮುಖವನ್ನು ನೋಡತೊಡಗಿದ

ತಾಯಿಗೆ ಮಗನ ಮಾತಿನ ಅರ್ಥವಾಯಿತು ಎಂದರೆ ಈ ಮನೆಯಲ್ಲಿ ಸ್ವಜಾತೀಯಳ ಹೊರತು ಬೇರೆ ಜಾತಿಯವಳು ದಾಸಿಯಾಗಲಾರಳು. ತಾಯಿ ಸ್ವಲ್ಪ ಹೊತ್ತು ಸುಮ್ಮನಿದ್ದು ಕೇಳಿದಳು " ಇದು ನಿಜವೆ ? "

" ನಿಜವಲ್ಲದೆ ಏನು ? ನಿನ್ನೆದುರಿಗೆ ನಾನು ಸುಳ್ಳಾಡಿರುವೆನೆ ? ನನಗೆ ತಿಳಿಯತೊಡಗಿದ ಮೇಲೆ ನಾನು ಎಂದಾದರೂ ಸುಳ್ಳಾಡಿದುದನ್ನು ನೀನು ಬಲ್ಲೆಯಾ ? "

" ಸ್ವಲ್ಪ ಯೋಚಿಸಿ ಉತ್ತರ ಕೊಡುವೆ ? " ಎಂದು ವೃಂದಾವನನ ತಾಯಿ ನಸುನಕ್ಕು ಕೆಲಸದಲ್ಲಿ ತೊಡಗಿದಳು

ವೃಂದಾವನ ತಾಯಿಯ ಹತ್ತಿರ ಹೋಗಿ ಕುಳಿತು " ಇಲ್ಲಮ್ಮಾ, ಇದು ಸಾಧ್ಯವಿಲ್ಲ ವಿಚಾರ ಮಾಡಲು ನಾನು ನಿನಗೆ ಅವಕಾಶ ಕೊಡುವುದಿಲ್ಲ ನಿನ್ನಿಂದ ಅಪ್ಪಣೆ ಪಡೆದೇ ಈ ಕೋಣೆಯಿಂದ ಹೊರಬೀಳಬೇಕೆಂದು ಗೊತ್ತು ಮಾಡಿಕೊಂಡಿದ್ದೇನೆ " ಎಂದ

" ಯೋಚನೆಗೆ ಏಕೆ ಅವಕಾಶ ಕೊಡುವುದಿಲ್ಲ ? "

"ಅದಕ್ಕೊಂದು ಕಾರಣವಿದೆಯಮ್ಮಾ, ನೀನು ವಿಚಾರ ಮಾಡಿ ಹೇಳಿದರೆ, ಅದು ನಿನ್ನ ಮಾತಾಗುವುದು, ನನ್ನ ತಾಯಿಯ ಒಪ್ಪಿಗೆಯಾಗಲಾರದು ನನಗೆ ಒಳಿತು-ಕೆಡುಕಿನ ವಿಷಯಗಳು ಬೇಡ ನನಗೆ ಬೇಕಾದುದು ನಿನ್ನ ಒಪ್ಪಿಗೆ ಮಾತ್ರ "

ತಾಯಿ ತಲೆಯೆತ್ತಿ ವೃಂದಾವನನ ಕಡೆಗೆ ಸ್ವಲ್ಪಹೊತ್ತು ನೋಡುತ್ತ " ವೃಂದಾವನ, ಒಂದು ದಿನ ನಾನು ನಿನಗ ಅನುಮತಿ ಕೊಟ್ಟಿದ್ದೆ, ಚೆನ್ನಾಗಿ ತಿಳಿಸಿಯೂ ಹೇಳಿದ್ದೆ ಆದರೆ ನೀನು ಅದನ್ನು ಕೇಳಲೇ ಇಲ್ಲ, ಗೊತ್ತೆ ?" ಎಂದಳು

" ಇದು ನನಗೆ ಗೊತ್ತು ನಾನು ಈಗ ಉಣ್ಣುತ್ತಿರುವುದು ಅದೇ ಪಾಪದ ಫಲ " ಎಂದು ವೃಂದಾವನ ತಲೆತಗ್ಗಿಸಿದ

ಮಗನ ಈ ಪ್ರಸ್ತಾವನೆ ಕೇವಲ ತನ್ನನ್ನು ಸುಖದಲ್ಲಿರಿಸುವುದಕ್ಕಾಗಿ ಎಂಬುದನ್ನು ಅವಳು ಅರಿತಳು ಈ ಮಾತನ್ನು ಕಾರ್ಯದಲ್ಲಿ ತರುವಾಗ ಅವನಿಗೆ ಎಂತಹ ಅನುಭವ ಬಂದೀತೆಂಬುದನ್ನು ನೆನೆದುಕೊಂಡಾಗ ಅವಳ ಕಣ್ಣುಗಳಲ್ಲಿ ನೀರು ತುಂಬಿ ಬಂದಿತು ಅವಳು ' ಈಗ ಇರಲಿ ಬಿಡು ವೃಂದಾವನ, ಒಂದೆರಡು ದಿನ ಹೋಗಲಿ' ಎಂದು ಸಂಕ್ಷೇಪವಾಗಿ ಹೇಳಿದಳು

ವೃಂದಾವನ ತನ್ನ ಹಟವನ್ನು ಬಿಡದೆ " ನೀನು ಯಾವ ಮಾತಿಗಾಗಿ ಇಷ್ಟು ಹಿಂದುಮುಂದೆ ನೋಡುತ್ತಿರುವೆಯೊ ಅದು ಎರಡು ದಿನಗಳ ಮೇಲೂ ಫಲಿಸುವುದಿಲ್ಲ ನಿನ್ನನ್ನು ಯಾವಳು ಅಪಮಾನ ಮಾಡಿರುವಳೊ ಅವಳನ್ನು ನೀನು ಬೇಕಾದರೆ ಕ್ಷಮಿಸಿಬಿಡು. ನಾನು ಮಾತ್ರ ಕ್ಷಮಿಸಲಾರೆ ಇನ್ನು ನಾನು ಸಹಿಸಲಾರೆ ಒಪ್ಪಿಗೆ ಕೊಟ್ಟುಬಿಡು, ಎಂದರೆ ಮಾತ್ರ ನಾನು ಸುಖವಾಗಿ ಬಾಳಬಹುದು " ಎಂದ

ತಾಯಿ ತಲೆಯೆತ್ತಿ ಬಿಸುಸುಯ್ದು, "ಆಗಲಿ ಹೋಗು, ಅನುಮತಿ ಕೊಟ್ಟಿರುವೆ" ಎಂದಳು.

ವೃಂದಾವನನಿಗೆ ಈ ನೀಳವಾದ ಉಸಿರಿನ ಅರ್ಥವಾಯಿತು ಅವನು ಮತ್ತೆ ಯಾವ ಮಾತನ್ನೂ ಆಡದೆ ತಾಯಿಯ ಪಾದಧೂಳಿಯನ್ನು ಸಿರಸಾವಹಿಸಿ ಕೋಣೆಯಿಂದ ಹೊರಗೆ ಬಂದ

ಇಷ್ಟರಲ್ಲಿ ಸಾಲೆಯ ಒಬ್ಬ ಹುಡುಗನು ಬಂದು ಅವನ ಕೈಗೆ ಒಂದು ಪತ್ರ ಕೊಟ್ಟು, ಎಂದ--"ಪಂಡಿತರೆ, ಇಕೊಳ್ಳಿ ನಿಮಗೊಂದು ಪತ್ರ"

ವೃಂದಾವನನಿಗೆ "ಯಾರ ಪತ್ರವಪ್ಪಾ ಅದು?" ಎಂದು ತಾಯಿ ಕೇಳಿದಳು

"ಗೊತ್ತಿಲ್ಲಮ್ಮ? ನೋಡಿ ಹೇಳುವೆ" ಎಂದು ವ್ಯಗ್ರಮನಸ್ಸಿನಿಂದ ವೃಂದಾವನ ತನ್ನ ಕೋಣೆಗೆ ಹೋಗಿ ಪತ್ರ ಒಡೆದು ನೋಡಿದ ನೋಡಿದರೆ ಯಾವಳೊ ಒಬ್ಬ ಹೆಂಗುಸಿನ ಸುಂದರವಾದ ಸ್ಪಷ್ಟವಾದ ಅಕ್ಷರಗಳು ಅದರಲ್ಲಿ ಅಕ್ಷರದೋಷವೂ ಇಲ್ಲ, ತಪ್ಪು ಹೊಡೆದು ಹಾಕಿದ ಗೆರೆಗಳೂ ಇಲ್ಲ ಮೇಲೆ "ಶ್ರೀ ಚರಣ ಕಮಲೇಷು" ಎಂದು ಬರೆದಿದೆ ಆದರೆ ಕೆಳಗೆ ಒಪ್ಪಿತವೇ ಇಲ್ಲ ವೃಂದಾವನ ಈ ಮೊದಲು ಕುಸುಮೆಯ ಬರವಣಿಗೆಯನ್ನು ನೋಡಿರಲಿಲ್ಲ ಆದರೂ ಇದು ಆಕೆಯ ಪತ್ರವೇ ಎಂದು ಅವನು ಕೂಡಲೇ ತಿಳಿದುಕೊಂಡ

ಆ ಪತ್ರದಲ್ಲಿ ಹೀಗೆ ಬರೆದಿದ್ದಿತು—"ನನ್ನ ಅಣ್ಣನನ್ನು ನೋಡಿದರೆ ನಿಮಗೆ ಅವನ ಗುರುತೂ ಸಿಕ್ಕಲಾರದು ಅದೇಕೆಂಬುದನ್ನು ಬೇರೆಯವರಲ್ಲಿ ಹೇಳುವಂತಿಲ್ಲ, ನಿಮ್ಮಲ್ಲಿ ಹೇಳುವುದಕ್ಕೂ ನನಗೆ ಅತ್ಯಂತ ನಾಚಿಕೆಯಾಗುತ್ತದೆ ಇಂದು ಅವನು ಪುನಃ ಅತ್ತೆಯ ಮನೆಗೆ ಹೋಗಿದ್ದಾನೆ ನಾಳೆ ಮುಂಜಾನೆ ಬರಲೂ ಬಹುದು, ಬರದಿರಲೂ ಬಹುದು. ಹೋಗುವಾಗ "ಇಲ್ಲಿ ಹುಲಿ-ಕರಡಿಗಳಿಲ್ಲ" ಎಂದು ಹೇಳಿ ಹೋಗಿದ್ದಾನೆ ಒಬ್ಬಳನ್ನೇ ಬಿಟ್ಟು ಹೋದರೆ, ನನ್ನನ್ನು ಹುಲಿ-ಕರಡಿಗಳು ತಿಂದಾವು ಎಂಬ ಭಯವೂ ಅವನಿಗಿಲ್ಲ. ನಿಮಗೆ ಈ ಭಯವಿದ್ದರೆ ನೀವು ನನ್ನ ಚರಣನನ್ನು ಇಲ್ಲಿ ಬಿಟ್ಟು ಹೋಗಬೇಕು"

ಕುಸುಮೆ ಬೆಳಿಗ್ಗೆ ಅಣ್ಣನೊಂದಿಗೆ ಜಗಳವಾಡಿ ಸೆಡವಿನಿಂದ ಆರಿಸಿದ ಒಲೆಯನ್ನು ಪುನಃ ಹೊತ್ತಿಸಲೇ ಇಲ್ಲ ಇಡಿಯ ದಿನ ಊಟಮಾಡದೆ

ಹಾಗೆಯೆ ಇದ್ದುಬಿಟ್ಟಿದ್ದಳು ಅವಳು ಅಂಜಿಕೆಯಿಂದಲೂ ಚಿಂತೆಯಿಂದಲೂ ಹಲವೊಮ್ಮೆ ಹೊರಗೆ ಬಂದಳು, ಒಳಗೆ ಹೋದಳು ಸಂಜೆಯಾಗುತ್ತ ಬಂದರೂ ಯಾರೂ ಸುಳಿಯದಿದ್ದುದನ್ನು ಕಂಡು, ಇಡೀ ರಾತ್ರಿ ಒಬ್ಬಳೇ ಕಳೆಯಬೇಕಾಗುವುದೆಂಬ ಯೋಚನೆಯಿಂದ ಅವಳ ಮೈ ಜುಮ್ಮೆಂದಿತು ಅಷ್ಟರಲ್ಲಿ ಹೊರಗಿನಿಂದ ಚರಣನ "ಅಮ್ಮಾ, ಅಮ್ಮಾ" ಎಂಬ ಕೂಗು ಕೇಳಬಂದಿತು ಆಗ, ಆಳವಾದ ನೀರಿನಲ್ಲಿ ಮುಳುಗುತ್ತಿರುವವನಿಗೆ ನಿಲ್ಲಲು ಸ್ವಲ್ಪ ಎಡೆ ಸಿಕ್ಕಂತಾಯಿತು ಅವಳ ಸ್ಥಿತಿ

ಅವಳು ಓಡುತ್ತ ಹೊರಗೆ ಬಂದು ಚರಣನನ್ನು ಎತ್ತಿಕೊಂಡಳು ಆ-ಮೇಲೆ ಅವನ ಮುಖಕ್ಕೆ ತನ್ನ ಮುಖವನ್ನು ಹಚ್ಚಿಕೊಂಡು ಇನ್ನು ತಾನು ಒಬ್ಬೊಂಟಿಗಳಾಗಿ ಇರಬೇಕಾದುದಿಲ್ಲವೆಂಬ ಭಾವನೆಯಿಂದ ಹಿಗ್ಗಿದಳು

ಚರಣ ಆಳುಮಗನೊಂದಿಗೆ ಬಂದಿದ್ದ ಊಟವಾದ ಮೇಲೆ ಕುಂಜನ ಕೋಣೆಯಲ್ಲಿ ಅವನ ಮಲಗುವ ವ್ಯವಸ್ಥೆಯಾಯಿತು ಮಲಗಿದಾಗ ಚರಣನನ್ನು ತನ್ನ ಎದೆಯ ಬಳಿ ಎಳೆದುಕೊಂಡು ಕುಸುಮೆ ಅವನಿಗೆ ಅನೇಕ ಪ್ರಶ್ನೆಗಳನ್ನು ಕೇಳಿದಳು ಕೊನೆಗೆ ಮೆಲ್ಲಗೆ "ಏನಪ್ಪಾ ಚರಣ, ನಿಮ್ಮಪ್ಪ ಏನು ಮಾಡುತ್ತಾರೆ ?" ಎಂದಳು

ಕೂಡಲೆ ಚರಣನು ಚಟ್ಟನೆಎದ್ದು ತನ್ನ ಕೋಟಿನ ಬೊಕ್ಕಣದೊಳಗಿಂದ ಒಂದು ಚಿಕ್ಕ ಗಂಟನ್ನು ತೆಗೆದುಕೊಂಡು ಬಂದ ಅದನ್ನು ಕುಸುಮೆಯ ಕೈಗೆ ಕೊಟ್ಟು "ಅಮ್ಮಾ, ನಾನು ಮರೆತುಬಿಟ್ಟಿದ್ದೆ ಅಪ್ಪ ಇದನ್ನು ನಿನಗೆ ಕೊಡಲು ಹೇಳಿದ್ದ"

ಆ ಗಂಟನ್ನು ಹಿಡಿದ ಕೂಡಲೆ ಅದು ಹಣದ ಗಂಟೆಂದು ಅವಳಿಗೆ ಕೂಡಲೇ ತಿಳಿಯಿತು

ಚರಣನೆಂದ "ಇದನ್ನು ಕೊಟ್ಟ ಕೂಡಲೆ ಅಪ್ಪ ಹೊರಟು ಹೋದ"

ಕುಸುಮೆ ವ್ಯಗ್ರಳಾಗಿ "ಅವರು ಎತ್ತಕಡೆ ಹೋದರು ?" ಎಂದು ಕೇಳಿದಳು

ಚರಣನು ಕೈ ತೋರಿಸಿ "ಅತ್ತಕಡೆ" ಎಂದನು

"ನದಿಯ ಈಚೆಯ ದಂಡೆಗೂ ಬಂದಿದ್ದರೇನು ?"

"ಹೌದು ಬಂದಿದ್ದರು"— ಚರಣ ತಲೆಯಲ್ಲಾಡಿಸುತ್ತ ಎಂದ

ಕುಸುಮೆ ಮತ್ತೆ ಯಾವ ಪ್ರಶ್ನೆಯನ್ನೂ ಕೇಳಲಿಲ್ಲ ಅವಳು ಅಭಿ

ಮಾನದಿಂದ ಸ್ತಬ್ಧಳಾಗಿ ಒರಗ್ಗಿದ್ದಳು ಆ ದಿನ ಅವರು ಮನೆಗೆ ಬಂದಿದ್ದರೂ ಒಂದು ಗುಟುಕು ನೀರನ್ನೂ ಕುಡಿದು ಹೋಗಲಿಲ್ಲ, ಇವಳೂ ಸೆಡವಿನಿಂದ ಹೆಚ್ಚು ಆಗ್ರಹ ಮಾಡಲಿಲ್ಲ ಆದರೆ ಕೆಲ ಕಟುಮಾತುಗಳನ್ನು ಆಡಿದ್ದಳು ಅಂದಿನಿಂದ ವೃಂದಾವನ ಇತ್ತ ಕಡೆಗೆ ಬರಲೇ ಇಲ್ಲ ಮೊದಲು ಈ ದಾರಿಯಲ್ಲಿ ಬರಹೋಗುವ ನೂರಾರು ಕೆಲಸಗಳು ಇರುತ್ತಿದ್ದವು ಅವನಿಗೆ ಈಗ ಹಾಗೆ ಬರಹೋಗುವುದರಿಂದ ವೃಂದಾವನನಿಗೆ ಪ್ರಯೋಜನವಿಲ್ಲ ಆದರೆ ಅವಳು ಅವನ ದಾರಿಕಾಯುತ್ತ ಹೇಗೆ ದಿನಗಳೆಯುವಳು, ಅವಳ ನಾಡಿಗಳಲ್ಲಿ ರಕ್ತವು ಎಷ್ಟು ವೇಗವಾಗಿ ಹರಿಯತೊಡಗುವುದು, ಎಂಬುದನ್ನು ಅಂತರ್ಯಾಮಿಯೆ ಬಲ್ಲ! ಅಣ್ಣನ ಮದುವೆಗೆ ಅವರು ಬರಲಿಲ್ಲ ಇಂದು ಇಲ್ಲಿಯ ವರೆಗೆ ಬಂದರೂ ಮನೆಗೆ ಬಾರದೆ ಹಾಗೆಯೆ ಹೊರಟು ಹೋದರು!

ಆಮೇಲೆ ಕುಂಜನೊಂದಿಗೆ ಬಳೆಗಳನ್ನು ಕಳಿಸಿದ ದಿನವೂ, "ತಮ್ಮ ವಸ್ತುವನ್ನು ತಮಗೆ ಮರಳಿಸಿ ಪರಮಾತ್ಮ ನಮ್ಮನ್ನು ಎಚ್ಚರಿಸಿದನು" ಎಂಬ ವೃಂದಾವನನ ಮಾತೂ ಅವಳಿಗೆ ನೆನಪಾಯಿತು

"ಅವರ ಮನಸ್ಸಿನ ಭಾವನೆ ನಿಜವಾಗಿಯೂ ಹೀಗೆಯೆ ಇರಬಹುದೆ? ನಾನು ಅಂದು ಎಳ್ಳಷ್ಟೂ ಹಿಂಜರಿಯದೆ ಅವರನ್ನು ಗಾಸಿಗೊಳಿಸಿದ್ದೇನೆ. ಆಗಾಗ್ಗೆ ಅವರಿಗೆ ಎದುರಾಡಿದ್ದೇನೆ ಅತ್ತೆಯ ಅಪಮಾನ ಮಾಡಲೂ ಹಿಂದೆಗೆಯಲಿಲ್ಲ ಆ ದಿನ ಇಂಥ ದುರ್ಬುದ್ಧಿ ನನಗೆ ಹೇಗೆ ಬಂದಿತೆಂಬುದೇ ತಿಳಿಯಲಿಲ್ಲ!" ಹೀಗೆ ಅವಳು ಯೋಚಿಸತೊಡಗಿದಳು ಇಲ್ಲಿಯ ವರೆಗೆ ಅವಳು ವೃಂದಾವನನ ಸಂಬಂಧವನ್ನು ಹಟದಿಂದ ನಿರಾಕರಿಸುತ್ತ ಬಂದಿದ್ದಾಳೆ ಆದರೆ ಇಂದು ಅದೇ ಹಟದ ವಿರುದ್ಧವಾಗಿ ಅವಳ ದೇಹ-ಮನಸ್ಸುಗಳೆರಡೂ ಬಂಡು ಹೂಡಿವೆ ಅವಳು ಬಹಳ ರೇಗಿ ಯೋಚಿಸತೊಡಗಿದಳು–

"ಏನು? ನಾನು 'ಇಲ್ಲ-ಇಲ್ಲ' ವೆಂದು ತಿರಸ್ಕರಿಸಿದೊಡನೆ ಹರಿದು ಹೋಗಲು ಇದೇನು ನಾನೇ ಕೂಡಿಸಿದ ಸಂಬಂಧವೆ? ಒಂದುವೇಳೆ ಹಾಗೆ ಹರಿದು ಹೋಗುವುದಾದರೆ, ಅವರು ನನ್ನ ಸ್ವಾಮಿಯೆ ಅಲ್ಲವಾದರೆ, ನನ್ನ ಹೃದಯದಲ್ಲಿ ಅವರಿಗಾಗಿ ಇಷ್ಟೊಂದು ಭಕ್ತಿ ಪ್ರೇಮ ವಿಶ್ವಾಸಗಳೆಲ್ಲ ಏಕೆ ಹುಟ್ಟಬೇಕು? ಸಾಂಸಾರಿಕ ಬಂಧನದ ಒಂದೇ ಒಂದು ದಿನದ ಚಿಲ್ಲರೆ ಮಾತುಕತೆಗಳಿಂದ, ಒಂದೇ ಒಂದು ಸಲದ ಅತ್ಯಲ್ಪ ಸೇವೆಯಿಂದ, ನನ್ನ

ಹೃದಯದಲ್ಲಿ ಅವರಿಗಾಗಿ ಇಷ್ಟೊಂದು ಪ್ರೇಮವು ಎಲ್ಲಿಂದ ಬಂದಿತು ? ”
ಅವಳು ಮತ್ತೆ ಮತ್ತೆ ಒತ್ತೊತ್ತಿ ಎಂದುಕೊಳ್ಳತೊಡಗಿದಳು, “ ನಾನು ಎಲ್ಲಿ
ಬೇಕಾದರೂ ಪ್ರಮಾಣ ಮಾಡಿ ಹೇಳಬಲ್ಲೆ— ಇದು ಸುಳ್ಳು, ನನ್ನ ಹೆಸ
ರಿಗೆ ಹತ್ತಿದ ಅಪವಾದ ಕೇವಲ ಸುಳ್ಳು, ಎಂದು, ನನ್ನ ತಾಯಿ, ಸುಮ್ಮನೆ
ಅಪಮಾನದ ಹೊಟ್ಟೆಯುರಿಯಿಂದ ವಿವೇಕ ಕೆಟ್ಟು, ನನ್ನ ತಲೆಯ ಮೇಲೆ
ಇಂಥ ಅಳಿಸಲಾರದ ಕಲಂಕವನ್ನು ಹೊರಿಸಿ ಹೋಗಿದ್ದಾಳೆ, ಎಂದು ”

ಸ್ವಲ್ಪ ಹೊತ್ತು ಸುಮ್ಮನಿದ್ದು ತಿರುಗಿ ಮನದಲ್ಲಿಯೆ ಯೋಚಿಸತೊಡ
ಗಿದಳು “ ನನ್ನ ತಾಯಿ ತೀರಿಹೋಗಿದ್ದಾಳೆ ದಿಟ ಯಾವುದು ಸಟೆ
ಯಾವುದು ಎಂಬುದನ್ನು ಸಿದ್ಧಮಾಡುವ ಯಾವ ಹಾದಿಯೂ ಈಗ ಉಳಿ
ದಿಲ್ಲ ನಾನು ಬೇಕಾದುದನ್ನು ಹೇಳಬಹುದು ಆದರೆ ನಾನೇ ತಮ್ಮ ಧರ್ಮ
ಪತ್ನಿಯೆಂಬುದು ಅವರಿಗೆ ಗೊತ್ತಿದೆ ಹೀಗಿರುವಾಗ ಅವರು ನನ್ನ ಈ
ಅಯೋಗ್ಯ ನಡತೆಯನ್ನೇಕೆ ತಾಳಿಕೊಳ್ಳಬೇಕು ? ಇಲ್ಲಿಗೆ ಬಂದು ನನ್ನ
ದರ್ಪವನ್ನು ಬಲವಂತದಿಂದ ಮೆಟ್ಟಿ ತಮ್ಮ ಇಚ್ಛೆ ಇರುವಲ್ಲಿಗೆ ನನ್ನನ್ನೇಕೆ
ಎಳೆದೊಯ್ಯಬಾರದು ? ಒಪ್ಪಲು ಅಥವಾ ಒಪ್ಪದಿರಲು ನನಗೇನು ಅಧಿ-
ಕಾರ ? ನನ್ನ ನಿರಾಕರಣೆಯನ್ನೊಪ್ಪಲು ಅವರಿಗಾದರೂ ಅಧಿಕಾರವೆಲ್ಲಿ ? ”

ಅವಳ ಶರೀರ ಒಮ್ಮೆಲೆ ನಡುಗಿತು ಅದರಿಂದ ಅವಳನ್ನಪ್ಪಿಕೊಂಡು
ಮಲಗಿದ್ದ ಚರಣನ ನಿದ್ರಾಭಂಗವಾಯಿತು ಆಗ ಅವನು “ ಏನಮ್ಮಾ? ”
ಎಂದ

ಅವನನ್ನು ಎದೆಗಪ್ಪಿಕೊಂಡು ಕುಸುಮೆ ಕೇಳಿದಳು– “ಮಗೂ ಚರಣ,
ನೀನು ಯಾರನ್ನು ಹೆಚ್ಚು ಪ್ರೀತಿಸುವೆ ಹೇಳು ? ನನ್ನನ್ನೊ ನಿನ್ನ ಅಪ್ಪ-
ನನ್ನೊ ? ”

ಚರಣ ಕೂಡಲೇ “ ನಿನ್ನನ್ನು ” ಎಂದ

“ ದೊಡ್ಡವನಾದ ಮೇಲೆ ನಿನ್ನ ಅಮ್ಮನನ್ನು ಸಾಕುವೆಯಾ ಚರಣ ? ”

“ ಹೂಂ, ಸಾಕುತ್ತೇನೆ ”

“ ನಿನ್ನ ತಂದೆ ನನ್ನನ್ನು ಹೊರಗೆ ಹಾಕಿದರೆ ನೀನು ನನಗೆ ಆಶ್ರಯ
ಕೊಡುವೆಯಾ ? ”

“ ಓಹೊ, ಅದರಲ್ಲೇನು ? ”

ಯಾವ ಕಾಲದಲ್ಲಿ ತಾಯಿಗೆ ಯಾವ ನೆರವು ಬೇಕಾಗಬಹುದೆಂಬುದು

ಚರಣನಿಗೆ ತಿಳಿಯುತ್ತಿರಲಿಲ್ಲ ಆದರೆ ತನ್ನ ಈ ಹೊಸ ತಾಯಿಗೆ ಯಾವ ಕಾಲಕ್ಕೂ ಯಾವ ಕೊರತೆಯೂ ಆಗಲಾರದೆಂದು ಅವನು ಚೆನ್ನಾಗಿ ಭಾವಿಸಿ ಕೊಂಡ

ಕುಸುಮೆಯ ಕಣ್ಣಿನಿಂದ ನೀರು ಹನಿ-ಹನಿಯಾಗಿ ಹರಿಯತೊಡಗಿತು. ಚರಣನು ನಿದ್ರಿಸತೊಡಗಿದ ಬಳಿಕ ಕಂಬನಿಗಳನ್ನೊರೆಸಿಕೊಂಡು ಅವನ ಮುಖವನ್ನೇ ನೋಡುತ್ತ ಮನದಲ್ಲಿಯೇ ಎನ್ನತೊಡಗಿದಳು— "ನನಗೇತರ ಅಂಜಿಕೆ? ನನಗೆ ಯಾರೂ ಆಶ್ರಯ ಕೊಡದಿದ್ದರೇನಾಯಿತು? ನನ್ನ ಮಗನಿದ್ದಾನೆ, ಅವನು ಕೊಟ್ಟೇ ಕೊಡುವನು"

ಮರುದಿನ ಮುಂಜಾನೆ ತಾಯಿ ಮಗು ಇಬ್ಬರೂ ನದಿಯಲ್ಲಿ ಸ್ನಾನ ಮಾಡಿ ಮನೆಗೆ ತಿರುಗಿ ಬರುವಾಗ ಅಂಗಳದಲ್ಲಿ ಒಬ್ಬ ಪ್ರೌಢ ಹೆಂಗುಸು ನಿಂತು ಅನೇಕ ಪ್ರಶ್ನೆಗಳನ್ನು ಕೇಳುತ್ತಿದ್ದಳು ಕುಂಜನಾಥ ವಿನಯದಿಂದ ಸಮರ್ಪಕ ಉತ್ತರವನ್ನು ಕೊಡುತ್ತಿದ್ದ ಅವಳೇ ಕುಂಜನಾಥನ ಅತ್ತೆ ಅವಳು ಇಲ್ಲಿಗೆ ಬಂದದ್ದು ಕೇವಲ ಅಳಿಯನ ಮನೆ-ಮಠವನ್ನು ನೋಡುವ ಕುತೂಹಲದಿಂದ ಮಾತ್ರವಲ್ಲ, ತನ್ನ ಪ್ರೀತಿಯ ಏಕಮಾತ್ರ ಪುತ್ರಿಯನ್ನು ಇಲ್ಲಿಗೆ ಕಳಿಸುವುದು ಸರಿಯೊ ಅಲ್ಲವೊ ಎಂಬದನ್ನು ತಿಳಿಯುವುದಕ್ಕಾಗಿಯೂ

ಬರುತ್ತಿರುವ ಕುಸುಮೆಯನ್ನು ಅವಳು ಆಶ್ಚರ್ಯದಿಂದ ನೋಡುತ್ತ ನಿಂತಳು ಅವಳ ಒದ್ದೆಯಾದ ಬಟ್ಟೆಯಿಂದ ತಾರುಣ್ಯ ತೂರಿ ಬರುತ್ತಿದ್ದಿತು ಶರೀರದ ಬಂಗಾರದಂತಹ ಬಣ್ಣವು ಹೊರ-ಹೊಮ್ಮುತಿದ್ದಿತು ತೊಯ್ದ ಕೂದಲು ಬೆನ್ನಮೇಲೆಲ್ಲ ಹರಡಿ ಮೊಳಕಾಲವರೆಗೆ ಉಯ್ಯಾಲೆಯಾಡುತಿದ್ದವು ಎಡಬಗಲಿನಲ್ಲಿ ತುಂಬಿದ ಕೊಡವಿದ್ದಿತು, ಬಲಗೈಯಿಂದ ಚರಣನ ಕೈ ಹಿಡಿ ದಿದ್ದಳು ಚರಣನ ಕೈಯಲ್ಲೂ ನೀರು ತುಂಬಿದ ಒಂದು ಚಿಕ್ಕ ಗಿಂಡಿಯಿದ್ದಿತು ಪ್ರಪಂಚದಲ್ಲಿ ಇಂತಹ ಮಾತೃಮೂರ್ತಿಯ ದರ್ಶನವಾಗುವುದು ಅಪರೂಪ ಒಂದು ವೇಳೆ ದರ್ಶನವಾದರೆ, ಅತ್ತಕಡೆಗೇ ಅವಾಕ್ಕಾಗಿ ನೋಡುವುದು ಸಹಜವಾದುದು ಕುಂಜನಾಥನೂ ನೆಟ್ಟನೋಟದಿಂದ ಅವಳನ್ನು ನೋಡುತ್ತ ನಿಂತ ಇದರಿಂದ ಕುಸುಮೆಗೆ ಬಹಳ ನಾಚಿಕೆಯಾಯಿತು ಅವಳು ಲಗು-ಬಗೆಯಿಂದ ಮನೆಯೊಳಗೆ ಹೋಗುತ್ತಿದ್ದಳು ಅಷ್ಟರಲ್ಲಿ ಕುಂಜನಾಥನ ಅತ್ತೆ "ಇವಳೇ ಕುಸುಮೆಯೆಂದು ತೋರುತ್ತದೆ?" ಎಂದಳು

ಕುಂಜನು ಪ್ರಸನ್ನನಾಗಿ "ಹೌದಮ್ಮಾ, ಇವಳೇ ನನ್ನ ತಂಗಿ" ಎಂದ.

ಮನೆಯ ಅಂಗಳವೆಲ್ಲ ಸಾರಿಸಲ್ಪಟ್ಟಿದ್ದಿತು ಆದುದರಿಂದ ಕೊಡವನ್ನು ಅಲ್ಲಿಯೇ ಇಟ್ಟು ಕುಸುಮೆ ಆಕೆಗೆ ನಮಸ್ಕಾರ ಮಾಡಿದಳು. ತಾಯಿಯನ್ನು ಅನುಸರಿಸಿ ಚರಣನೂ ನಮಸ್ಕಾರ ಮಾಡಿದ

ಆಕೆ ಎಂದಳು— "ನಾನೆಲ್ಲೊ ಈ ಹುಡುಗನನ್ನು ನೋಡಿದಂತಿದೆ." ಅಷ್ಟರಲ್ಲಿ ಚರಣನು "ನಾನು ಚರಣ, ಅಜ್ಜಿಯ ಕೂಡ ಮಾಮನ ಹೆಂಡತಿ ಯನ್ನು ನೋಡಲು ನಿಮ್ಮ ಮನೆಗೆ ಬಂದಿದ್ದಿಲ್ಲವೆ?'' ಎಂದು ತನ್ನ ಪರಿಚಯ ಮಾಡಿಕೊಟ್ಟ

ಕುಸುಮೆ ನಗುತ್ತ ವಾತ್ಸಲ್ಯದಿಂದ ಚರಣನನ್ನು ತನ್ನೆಡೆಗೆ ಸೆಳೆದು ಕೊಂಡು "ಹಾಗೆ ಹೇಳಬಾರದು ಮಗೂ? ಅತ್ತೆಯನ್ನು ನೋಡಲಿಕ್ಕೆ ಬಂದಿದ್ದೆ ಎಂದು ಹೇಳಬೇಕು" ಎಂದಳು

ಕುಂಜನ ಅತ್ತೆ 'ಇವನು ವೃಂದಾವನನ ಮಗನಲ್ಲವೆ? ಈ ಚೋಟುದ್ದ ಹುಡುಗನ ಮಾತು ಹೇಗಿದೆ ನೋಡು!'' ಎಂದಳು

ಕುಸುಮೆಯ ನಗುಮುಖ ಅತ್ಯಂತ ದಾರುಣ ವಿಸ್ಮಯದಿಂದ ಕಪ್ಪಾ ಯಿತು ಆಕೆ ಒಂದು ಸಲ ತನ್ನ ಅಣ್ಣನ ಮುಖದ ಕಡೆಗೆ, ಒಮ್ಮೆ ಆ ಅಶಿ-ಕ್ಷಿತ ಅಪ್ರಿಯವಾದಿನಿಯ ಮುಖದ ಕಡೆಗೆ ನೋಡಿದಳು ಬಳಿಕ ಹುಡುಗನ ಕೈಹಿಡಿದುಕೊಂಡು ಕೊಡದೊಂದಿಗೆ ಅಡುಗೆಮನೆಗೆ ಹೋದಳು ಒಮ್ಮೆಲೆ ಇದೇನಾಗಿ ಹೋಯಿತು!

ಕುಂಜ ತಿಳಿವಳಿಕೆ ಇಲ್ಲದವನಾದರೂ ಅವನಿಗೆ ತನ್ನ ಅತ್ತೆಯ ಮಾತು ಕಠೋರವೆನಿಸಿದುವು ತನ್ನ ತಂಗಿಯ ಸ್ವಭಾವ ಅವನಿಗೆ ಚೆನ್ನಾಗಿ ಗೊತ್ತು. ಆದುದರಿಂದ ಆಕೆಯ ಮುಖವನ್ನು ನೋಡಿ ಆಕೆಯ ಮನಸ್ಸಿಗೆ ಎಷ್ಟು ನೋವಾಗಿರಬಹುದೆಂಬುದನ್ನು ಅರಿತುಕೊಂಡ ಅವನಿಗೆ ಮನಸ್ಸಿನಲ್ಲಿಯೆ ಮಿಡುಕುಂಟಾಯಿತು.

ಕುಸುಮೆ ಇನ್ನು ತನ್ನ ಅತ್ತೆಯ ಮುಖನೋಡಲಾರಳೆಂದು ಅವನು ತಿಳಿದುಕೊಂಡನು ಅವನ ಅತ್ತೆಗೂ ಮನದಲ್ಲಿಯೆ ನಾಚಿಕೆಯಾಯಿತು. ಹೀಗೆ ಮಾತನಾಡಬೇಕೆಂದು ಅವಳು ಬಗೆದಿರಲಿಲ್ಲ ಶಿಕ್ಷಣ ಮತ್ತು ರೂಢಿಯ ಬಲದಿಂದ ಇಂತಹ ಮಾತು ಅವಳ ಬಾಯಿಯಿಂದ ಹೊರಬಿದ್ದುಬಿಟ್ಟಿತು.

ಅಡುಗೆಮನೆಯೊಳಗಿಂದ ಕುಸುಮೆ ಗೋಕುಲನ ಹೆಂಡತಿಯನ್ನು ಚೆನ್ನಾಗಿ ನೋಡಿದಳು ಅವಳಿಗೆ ಇನ್ನೂ ನಾಲ್ವತ್ತು ಮಿಕ್ಕಿಲ್ಲ ಸೀರೆ ಅಂಚಿಲ್ಲ

ದುದು, ಬೆಳ್ಳಗಿನದು ಆದರೆ ಕೊರಳಲ್ಲಿ ಚಿನ್ನದ ಹಾರ, ಕಿವಿಯಲ್ಲಿ ಓಲೆ, ಕೈಗಳಲ್ಲಿ ಒಂಕಿ, ನಾಗಮುರಿಗೆ, ಪಾಟಲಿಗಳಿದ್ದವು ತನ್ನ ಅತ್ತೆಯೊಡನೆ ಈಕೆಯನ್ನು ಹೋಲಿಸಿದಾಗ, ಕುಸುಮೆಗೆ ಈಕೆಯ ವಿಷಯಕ್ಕೆ ತಿರಸ್ಕಾರ ವುಂಟಾಯಿತು

ಆಕೆ ಕುಂಜನೊಡನೆ ಮಾತನಾಡುತ್ತಿದ್ದಳು ಅದು ಕುಸುಮೆಗೆ ಸರಿ ಯಾಗಿ ಕೇಳಿಬರದಿದ್ದರೂ ತನ್ನನ್ನು ಕುರಿತೇ ಎಂಬುದನ್ನು ಅವಳು ಖಂಡಿತ ವಾಗಿ ತಿಳಿದಳು

ಕುಂಜನ ಅತ್ತೆ ಎಲೆ ಮತ್ತು ಕಾಚು ಹೆಚ್ಚಾಗಿ ತಿನ್ನುವಳು ಈ ಕೆಲಸ ಮುಂಜಾವಿನಿಂದ ಸಂಜೆಯವರೆಗೂ ಹಾಗೆಯೇ ಸಾಗುವುದು ಅವಳ ಸ್ನಾನ ವಾದ ಮೇಲೆ ತಿಲಕ ಸೇವೆಯ* ಅನುಷ್ಠಾನವೂ ಚೆನ್ನಾಗಿಯೆ ಸಾಗಿತು. ಈ ಅನುಷ್ಠಾನದ ಸರ್ವಸಾಮಗ್ರಿಯನ್ನು ಆಕೆ ತನ್ನೊಂದಿಗೆ ತಂದಿದ್ದಳು ತನ್ನ ಮುಖನೋಡಿಕೊಳ್ಳುವುದಕ್ಕಾಗಿ ಚಿಕ್ಕ ಕನ್ನಡಿಯನ್ನು ತರಲೂ ಮರೆ ತಿರಲಿಲ್ಲ

ಕುಸುಮೆ ತನ್ನ ನಿತ್ಯಪೂಜೆ ತೀರಿಸಿಕೊಂಡು ಅಡುಗೆಮಾಡಲು ಕುಳಿ ತಿದ್ದಳು ಅತ್ತೆ ಅಲ್ಲಿಗೆ ಬಂದು ಹತ್ತಿರ ಕುಳಿತಳು ಆಮೇಲೆ ನಸುನಕ್ಕು "ಇದೇನು, ನಿನ್ನ ಕೊರಳಲ್ಲಿ ಮಾಲೆಯೂ ಇಲ್ಲ, ತಿಲಕಸೇವೆಯನ್ನೂ ಮಾಡಿಲ್ಲ? ನೀನೆಂಥ ವೈಷ್ಣವನ ಮಗಳಮ್ಮ!" ಎಂದಳು

ಕುಸುಮೆ ಸಂಕ್ಷೇಪವಾಗಿ "ನಾನು ಇದನ್ನೆಲ್ಲ ಮಾಡುವುದಿಲ್ಲ" ಎಂದು ಉತ್ತರವಿತ್ತಳು

"ಇಲ್ಲವೆಂದರೆ ಹೇಗಮ್ಮ? ನಿನ್ನ ಕೈಯಿಂದ ಯಾರೂ ನೀರು ಸಹ ಕುಡಿಯಲಿಕ್ಕಿಲ್ಲ!"

"ಹಾಗಾದರೆ ನಾನು ನಿಮಗೆ ಬೇರೆ ಅಡುಗೆಯ ವ್ಯವಸ್ಥೆ ಮಾಡಿ ಕೊಡಲಾ?"

"ನಾನು ಮನೆಯವಳು, ನೀನು ಮಾಡಿದ್ದನ್ನೇ ಉಣ್ಣುವೆ. ಆದರೆ ಬೇರೆಯವರು ಬಂದರೆ?"

ಕುಸುಮೆ ಉತ್ತರವನ್ನೇ ಕೊಡಲಿಲ್ಲ

---

* ವೈಷ್ಣವರು ಇಡಿಯ ಅಂಗವನ್ನು ಚಂದನದಿಂದ ತೊಡೆಯುವ ಕ್ರಿಯೆ ಈ ಪದ್ಧತಿ ಬಂಗಾಲದಲ್ಲಿದೆ

ಅಷ್ಟರಲ್ಲಿ ಕುಂಜನು ಬಂದು "ಚರಣ ಯಾವಾಗ ಬಂದ ಕುಸುಮಾ?" ಎಂದು ಕೇಳಿದ

"ನಿನ್ನೆ ಸಾಯಂಕಾಲ"

ಕುಂಜನ ಅತ್ತೆ "ವೃಂದಾವನ ಈಕೆಯನ್ನು ಕರೆದೊಯ್ಯುವುದಿಲ್ಲ ವೆಂದು ಇನ್ನೂ ಇದೇ ಈಗ ಕೇಳಿರುವೆ, ಆದರೆ ಮಗನನ್ನು ಮಾತ್ರ ಆಳಿನ ಕೂಡ ಇಲ್ಲಿಗೆ ಕಳಿಸಿದ್ದಾನೆ!" ಎಂದಳು

ಕುಂಜ ಚಕಿತನಾಗಿ ಕೇಳಿದ- "ಇದನ್ನು ಯಾವಾಗ ಕೇಳಿದಿರಿ ಅತ್ತೆ!"

ಅತ್ತೆ ಗಂಭೀರಳಾಗಿ "ನನಗೆ ಇನ್ನೂ ನಾಲ್ಕು ಕಣ್ಣು, ನಾಲ್ಕು ಕಿವಿ ಗಳಿವೆ ಮಗೂ, ನಾನು ಕೇಳಿದುದು ಸತ್ಯವಾದುದು ಅವರು ಎಷ್ಟು ತಿಳಿಸಿ ಹೇಳಿದರೂ, ಮನೆಗೆ ಬಂದರೂ ನಿನ್ನ ತಂಗಿ ಒಪ್ಪಲಿಲ್ಲ ಜನರಂತೂ ವಿಚಿತ್ರ ಮಾತುಗಳನ್ನಾಡುವರು ಸುತ್ತುಮುತ್ತು ಎಷ್ಟೋ ತರುಣರು ಇರುವರು ನಿನ್ನ ತಂಗಿಗೂ ಬಂಗಾರದಂತಹ ಬಣ್ಣ, ಅಲ್ಲದೆ ಏರುತ್ತಿರುವ ತಾರುಣ್ಯ ಜನರು ಹೇಳುವ ವಾಡಿಕೆಯುಂಟು— ಮನಸ್ಸೂ ಮುತ್ತೂ ಒಂದೇ ತರಹ ಎಂದು ಕಾಲು ಜಾರುವುದಕ್ಕೆ, ಮನಸ್ಸು ಚಂಚಲವಾಗುವುದಕ್ಕೆ ಎಷ್ಟು ಹೊತ್ತು ಬೇಕು ಮಗೂ?" ಎಂದು ನುಡಿದಳು

"ಹೌದು ಹೌದು, ನೀವು ಹೇಳುವುದು ಸರಿಯಮ್ಮ"

ಕುಸುಮೆ ಕೂಡಲೇ ತಲೆಯೆತ್ತಿ "ಅಣ್ಣ, ನೀನು ಇಲ್ಲಿ ಕುಳಿತು ಏನು ಮಾಡುತ್ತಿರುವೆ? ಹೊರಟು ಹೋಗು ಇಲ್ಲಿಂದ" ಎಂದಳು

ಕುಂಜ ಕಕ್ಕಾವಿಕ್ಕಿಯಾಗಿ ಅಲ್ಲಿಂದ ಏಳತೊಡಗಿದ ಆದರೆ ಅವನ ಅತ್ತೆ ಕೋಪದಿಂದ "ನಾವು ಕಣ್ಣು ಮುಚ್ಚಿಕೊಂಡರೆ ಜನರಿಗೆ ಕಾಣುವು ದಿಲ್ಲವೆಂದು ತಿಳಿದೆಯಾ ತಂಗಿ? ಇದೀಗ ನೀನು ಮಿಂದು, ಕೂದಲನ್ನು ಹರವಿಕೊಂಡು, ಒದ್ದೆ ಬಟ್ಟೆಯಿಂದಲೇ ನದಿಯಿಂದ ಮನೆಗೆ ಬಂದಿಲ್ಲವೆ? ನಿನ್ನನ್ನು ಈ ಅವಸ್ಥೆಯಲ್ಲಿ ನೋಡಿ ಮುನಿಗಳ ಮನಸ್ಸೂ ಹೊಯ್ದಾಡು ವುದೋ ಇಲ್ಲವೋ ಎಂದು ನಿನ್ನ ಅಣ್ಣ ಬೇಕಾದರೆ ಹೇಳಲಿ" ಎಂದಳು.

ಕುಸುಮೆ ಗಟ್ಟಿಯಾಗಿ ಕೂಗಿ "ನಿನ್ನ ಕಾಲಿಗೆ ಬೀಳುವೆ ಅಣ್ಣಾ, ಹೊರಟು ಹೋಗಬಾರದೆ? ನಿಂತು ನಿಂತು ಏನನ್ನು ಕೇಳುತ್ತಿರುವೆ?" ಎಂದಳು

ಆಕೆಯ ಮುಖಭಾವವನ್ನೂ, ಕೂಗುವುದನ್ನೂ ನೋಡಿ, ಕುಂಜ ಗಾಬರಿಯಾಗಿ ಅಲ್ಲಿಂದ ಜಾರಿಬಿಟ್ಟ ಕುಸುಮೆಯೂ ಪಲ್ಲೆಯ ಪಾತ್ರೆಯನ್ನು ಒಲೆಯಿಂದ ಧೊಪ್ಪನೆ ಇಳಿಸಿ ಸರಸರನೆ ಹೊರಗೆ ಹೋಗಿಬಿಟ್ಟಳು

ಕುಂಜನ ಅತ್ತೆಯ ಮುಖ ಕಪ್ಪಿಟ್ಟಿತು ಅವಳು ಅಲ್ಲಿಯೆ ಕುಳಿತಿದ್ದಳು. ತನಗಿಂತ ಹೆಚ್ಚಿನ ಜಗಳಗಂಟಿ ಜಗತ್ತಿನಲ್ಲಿ ಯಾರೂ ಇಲ್ಲವೆಂದು ತಿಳಿದಿದ್ದಳು ಈ ಸಹಾಯಹೀನ ಬಡ ಹುಡಿಗ ತನ್ನನ್ನು ಮುಖಭಂಗ ಮಾಡಿ ಹೊರಟು ಹೋಗುವಳೆಂದು ಅವಳು ಕನಸು ಮನಸಿನಲ್ಲಿಯೂ ಎಣಿಸಿರಲಿಲ್ಲ.

೮

ಆ ದಿನ ತನ್ನ ಅಣ್ಣನ ಅತ್ತೆ ಜಗಳಾಡಬೇಕೆಂಬ ನಿಶ್ಚಯದಿಂದಲೇ ಬಂದಿದ್ದಳೆಂಬುದರಲ್ಲಿ ಕುಸುಮೆಗೆ ಸಂದೇಹ ಉಳಿಯಲಿಲ್ಲ ಆದರೆ ಏಕೆ ಎಂಬುದು ಮಾತ್ರ ತಿಳಿಯಲಿಲ್ಲ. ಆಕೆಯ ಮಾತಿನ ಅರ್ಥವಿಷ್ಟೆ ಇರಬಹುದು ವೃಂದಾವನನಿಗೆ ಕುಸುಮೆಯನ್ನು ಸ್ವೀಕರಿಸಿ ಕರೆದೊಯ್ಯುವ ಇಚ್ಛೆ ಇದ್ದರೂ ಯಾವುದೊ ಒಂದು ಗೂಢ ಕಾರಣದಿಂದ ಕುಸುಮೆ ಅಲ್ಲಿಗೆ ಹೋಗಲಿಲ್ಲ ಆ ಗೂಢ ಕಾರಣ ಅತ್ತೆಗೆ ತಿಳಿಯದೆ ಇಲ್ಲ ವೃಂದಾವನನಿಗೂ ಅದರ ಸುಳಿವು ಹತ್ತಿದ್ದರಿಂದಲೇ ಅವಳನ್ನು ಕರೆದೊಯ್ಯುವ ವಿಚಾರ ಬಿಟ್ಟು ಬಿಟ್ಟಿದ್ದಾನೆ ಈ ಸಂಕೇತವೇ ಕುಸುಮೆಯನ್ನು ಇಷ್ಟು ರೇಗಿಸಿದುದು ಅಲ್ಲದೆ ತಾನು ಅಡುಗೆಮನೆಯಿಂದ ಹೀಗೆ ಹೊರಟು ಹೋದುದು ಸರಿಯಾಗಲಿಲ್ಲವೆಂದೂ ಅವಳಿಗೆ ತೋರಿತು.

ಕುಂಜನ ಅತ್ತೆ ಇಡೀ ದಿನ ಊಟ ಮಾಡಲಿಲ್ಲ ಬಹಳ ಬೇಡಿಕೊಂಡ ಬಳಿಕ ರಾತ್ರಿ ಊಟ ಮಾಡಿದಳು ಅತ್ತೆಯ ಮರ್ಯಾದೆ ಉಳಿಸುವುದಕ್ಕಾಗಿ ಕುಂಜ ತನ್ನ ತಂಗಿಯನ್ನು ಹಲವು ಬಗೆಯಿಂದ ತೆಗಳಿದ ಇದೆಲ್ಲವೂ ಮುಗಿದ ಮೇಲೆಯೂ ಅವನು ತಂಗಿಗೆ ಊಟ ಮಾಡಲು ಒಮ್ಮೆಯೂ ಹೇಳಲಿಲ್ಲ ಮರುದಿನ ಕುಂಜನ ಅತ್ತೆ ಊರಿಗೆ ಹೊರಡಲು ಸಿದ್ಧಳಾದಾಗ ಕುಸುಮೆ ಅವಳಿಗೆ ನಮಸ್ಕರಿಸಿ ಪಾದಧೂಳಿಯನ್ನು ತಲೆಗೆ ಹಚ್ಚಿಕೊಂಡು

ಬದಿಯಲ್ಲಿ ನಿಂತಳು ಆದರೂ ಕುಂಜನ ಅತ್ತೆ ಇವಳೊಂದಿಗೆ ಮಾತನಾಡ ಲಿಲ್ಲ ತನ್ನ ಅಳಿಯನನ್ನು ಕುರಿತು ಮಾತ್ರ "ನೀನು ನಿನ್ನ ಹೊಲ, ಮನೆ, ಆಸ್ತಿ ಮುಂತಾದುದನ್ನು ನೋಡಿಕೊಳ್ಳಬೇಕು ಇಲ್ಲಿ ತಂಗಿಯ ಹತ್ತರ ಕುಳಿತುಕೊಳ್ಳುವುದರಿಂದ ಕಾರ್ಯವಾಗದು!" ಎಂದಳು

ಈ ಸಂಗತಿ ನಡೆದು ಸುಮಾರು ಎರಡು ತಿಂಗಳು ಕಳೆದವು ಈ ಮಧ್ಯ ಕುಂಜನ ಅತ್ತೆ ಸಂಪೂರ್ಣವಾಗಿ ಅವನನ್ನು ತನ್ನ ಕಡೆಗೆ ಎಳೆದು ಕೊಂಡು ಬಿಟ್ಟಿದ್ದಾಳೆ ಆದುದರಿಂದ ಕುಂಜ ಈಗ ಇಲ್ಲಿ ಇರುತ್ತಿಲ್ಲ ಇದ್ದಾಗ ಸರಿಯಾಗಿ ಮಾತಾಡುವುದೂ ಇಲ್ಲ "ಎಂತಹ ಮನುಷ್ಯ ಹೇಗೆ ಆಗಿಹೋದ!" ಎಂದು ಕುಸುಮೆ ಯೋಚಿಸುತ್ತಿದ್ದಾಳೆ ಪ್ರಪಂಚದಲ್ಲಿ ಇಂತಹ ಜನರು ಹೀಗೆಯೆ ಆಗುವರು, ಕುಂಜನಂತಹ ಸರಳ ಮತ್ತು ಅಲ್ಪ-ಬುದ್ಧಿಯ ಜನರಲ್ಲಿ ಇಂತಹ ಬದಲಾವಣೆ ಆಗಬಲ್ಲುದು ಎಂಬುದನ್ನು ಅವಳು ಅರಿತಿದ್ದರೆ ಅವಳಿಗೆ ಇಷ್ಟು ಅಸಹನೀಯ ದುಃಖವಾಗುತ್ತಿರಲಿಲ್ಲ ಅಣ್ಣ ತಂಗಿಯರಲ್ಲಿ ಈಗ ಮೊದಲಿನ ಆ ಸ್ನೇಹ ಉಳಿದಿಲ್ಲ, ಜಗಳವೂ ಆಗುತ್ತಿಲ್ಲ ಜಗಳವಾಡಲು ಕುಸುಮೆಗೆ ಮನಸ್ಸೂ ಇಲ್ಲ, ಸಾಹಸವೂ ಇಲ್ಲ ಆ ರಾತ್ರಿ ಒಬ್ಬಳೇ ಮನೆಯಲ್ಲಿ ಇರಬೇಕಾದ ಹೊತ್ತು ಬಂದಾಗ ಅವಳು ಭಯದಿಂದ ವ್ಯಾಕುಲಗೊಂಡಿದ್ದಳು ಈಗ ಅದೆಷ್ಟು ರಾತ್ರಿಗಳನ್ನು ಒಬ್ಬಳೇ ಕಳೆಯಬೇಕಾಗುವುದೊ ಯಾರು ಬಲ್ಲರು? ಈಗ ದುಃಖದಲ್ಲಿಯೆ ಮುಳು ಗುವ ಹೊತ್ತು ಬಂದುದರಿಂದ ಅವಳಿಗೆ ಭಯವೂ ಇಲ್ಲದಂತಾಗಿದೆ

ಇವೆಲ್ಲ ದುಃಖಗಳ ಕಡೆಗೆ ಅವಳು ಅಷ್ಟು ಗಮನ ಕೊಡುತ್ತಿಲ್ಲ ಆದರೆ ತಾನು ಅಣ್ಣನ ಕುತ್ತಿಗೆಗೆ ಉರುಲಾಗಿರುವೆನೆಂಬ ಮಾತೇ ಅವಳಿಗೆ ಕುಳಿ ತಾಗ ನಿಂತಾಗ ಚುಚ್ಚುತ್ತಿರುವುದು ತಾನು ಒಮ್ಮಿಂದೊಮ್ಮೆಗೇ ಸತ್ತರೆ ಅಣ್ಣನ ಕಣ್ಣುಗಳಲ್ಲಿ ಒಂದು ಹನಿ ನೀರೂ ಬರಲಾರದೆಂದು ಅವಳು ಯೋಚಿ ಸುವಳು. ಅಣ್ಣನ ಮುಂದಾಗುವ ನಿಷ್ಠುರ ನಡತೆಯ ದೋಷವನ್ನು ಕಣ್ಣೀರಿ ನಿಂದ ತೊಳೆಯುವುದಕ್ಕಾಗಿ ಅವಳು ಒಮ್ಮೊಮ್ಮೆ ಬಾಗಿಲನ್ನು ಮುಚ್ಚಿ ಕುಳಿತುಕೊಳ್ಳುವಳು, ಇಡೀ ದಿನ ಬಾಗಿಲನ್ನೇ ತೆರೆಯುವುದಿಲ್ಲ ಮನಸ್ಸು ಭಾರವಾದಾಗ ಚರಣನನ್ನು ಯೋಚಿಸುವಳು. ಅವನೊಬ್ಬನೇ ಆಗಾಗ್ಗೆ "ಅಮ್ಮಾ" ಎಂದು ಓಡಿಬರುವನು, ಅವಳನ್ನು ಬಿಟ್ಟುಹೋಗಲು ಬಯಸು ವುದೇ ಇಲ್ಲ.

ಕುಸುಮೆ ಎಲ್ಲ ಸಂಕೋಚವನ್ನು ತೊರೆದು ವೃಂದಾವನನಿಗೆ ಚರಣನೊಂದಿಗೆ ಒಂದು ಪತ್ರ ಕಳಿಸಿದ್ದಳು ಆದರೆ ಅದರ ಉದ್ದೇಶ ನಿಷ್ಫಲವಾಯಿತು. ಏಕೆಂದರೆ ತಾನು ಉತ್ಸಾಹದಿಂದ ನಿರೀಕ್ಷಿಸುತ್ತಿರುವ ಒಳ್ಳೆಯ ಮಾತುಗಳಂತೂ ಇರಲಿ, ಒಂದೆರಡು ಸಾಲಿನ ಉತ್ತರಸಹ ಬರಲಿಲ್ಲ ಆದರೆ ಬಂದುದು ಕೇವಲ ಕೆಲ ರೂಪಾಯಿಗಳು ಮಾತ್ರ ಕುಸುಮೆ ಮುಂಗಾಣದೆ ಅವುಗಳನ್ನು ಸ್ವೀಕರಿಸಬೇಕಾಯಿತು

ನಿನ್ನೆ ರಾತ್ರಿ ಮನೆಗೆ ಕುಂಜನ ಆಗಮನವಾಗಿದೆ ಈದಿನ ನಸುಕಿನಲ್ಲಿ ಅವನು ಪುನಃ ಹೊರಡಲು ಸಿದ್ಧನಾಗಿದ್ದಾಗ ಕುಸುಮೆ ಅವನ ಬಳಿಗೆ ಹೋದಳು ಇತ್ತಿತ್ತ ಅವಳು ಅಣ್ಣನನ್ನು ಯಾವ ಸಂಗತಿಗೂ ಆಗ್ರಹಪಡಿಸುವುದಿಲ್ಲ, ಒತ್ತಾಯಪಡಿಸುವುದೂ ಇಲ್ಲ ಆದರೆ ಇಂದು ಅದೇಕೋ ಕೋಮಲ ಸ್ವರದಿಂದ “ ಅಣ್ಣ, ಇಷ್ಟು ಬೇಗನೆ ಹೋಗುವೆಯಾ ? ಅಡುಗೆಗೆ ತಡವಿಲ್ಲ ಸ್ವಲ್ಪ ಊಟಮಾಡಿ ಹೋಗಬಾರದೆ ? ’’ ಎಂದಳು

ಕುಂಜ ಮುಖ ಮುದುಡಿ— “ ನಾನು ಯೋಚಿಸಿದಂತೆಯೆ ಆಯಿತು. ಹೊರಡುವಾಗ ಅಡ್ಡಬರುವುದೆ ? ” ಎಂದ

ಅಸಹಾಯಾವಸ್ಥೆಯಲ್ಲಿದ್ದು ಕುಸುಮೆಗೆ ತಾಳ್ಮೆ ಚೆನ್ನಾಗಿ ಒಂಟಿಕೊಂಡಿತ್ತು ಆದರೆ ಕಾರಣವಿಲ್ಲದ ಈ ಸಿಡುಕುತನದಿಂದ ಅವಳು ಕೆರಳಿದಳು ಹಾಗಿದ್ದರೂ ಅವಳು ಮುಖವನ್ನು ಮುದುಡಲಿಲ್ಲ ಆದರೆ ಅತ್ಯಂತ ಕಠೋರವಾಗಿ “ಹೆದರಬೇಡ ಅಣ್ಣ, ನೀನು ಖಂಡಿತ ಸಾಯುವುದಿಲ್ಲ ಇಂದಿನ ವರೆಗೆ ನೀನು ಹೊರಡುವಾಗ ಎಷ್ಟು ಸಲ ಅಡ್ಡಬಂದೆನೋ ಏನೋ ? ಮನುಷ್ಯರಾಗಿದ್ದರೆ ಅವರು ಎಂದೋ ಸತ್ತುಹೋಗುತ್ತಿದ್ದರು ! ’’ ಎಂದಳು.

“ ನಾನೇನು ಮನುಷ್ಯನಲ್ಲವೆ ? ’’

“ಅಲ್ಲ, ನರಿ-ನಾಯಿಯೂ ಅಲ್ಲ ಅವು ನಿನಗಿಂತಲೂ ಮಿಗಿಲು ನಿನ್ನ ಹಾಗೆ ಅವು ಕೃತಘ್ನವಲ್ಲ” ಎಂದು ಕುಸುಮೆ ಕೋಣೆಗೆ ಹೋಗಿ ಗಟ್ಟಿಯಾಗಿ ಬಾಗಿಲು ಹಾಕಿಬಿಟ್ಟಳು ಕುಂಜ ಸ್ವಲ್ಪಹೊತ್ತು ಮೂಢನಂತೆ ನಿಂತು ಮೆಲ್ಲ-ಮೆಲ್ಲಗೆ ಹೊರಟು ಹೋದ

ಮುಂಬಾಗಿಲು ಹಾಗೆಯೆ ತೆರೆದಿದ್ದಿತು ಸುಮಾರು ಒಂದು ಗಂಟೆಯ ನಂತರ ಅದೇ ಬಾಗಿಲಿಂದ ವೃಂದಾವನ ಪ್ರವೇಶಿಸಿ, ಯಾರೂ ಕಾಣದಿದ್ದುದನ್ನು ಕಂಡು ಚಕಿತನಾದ

ಕುಂಜನ ಕೋಣೆಗೆ ಬೀಗ ಹಾಕಿದ್ದಿತು ಕುಸುಮೆಯ ಕೋಣೆಗೆ ಒಳಗಿನಿಂದ ಚಿಲಕ ಹಾಕಿದ್ದಿತು ಅಡುಗೆಯ ಮನೆ ತೆರೆದೇ ಇದ್ದಿತು. ಅಲ್ಲಿ ಇಣಿಕಿ ನೋಡುತ್ತಲೆ, ತಿನ್ನುತ್ತಿದ್ದ ಅನ್ನವನ್ನು ಬಿಟ್ಟು, ನಾಯಿಯೊಂದು ಕುಯ್ಗುಡುತ್ತ ನಾಚಿಕೆಯಿಂದಲೂ, ಅಸಮಾಧಾನದಿಂದಲೂ ಹೊರಬಿದ್ದು ಹೋಯಿತು

ಅಡುಗೆ ಅರ್ಧಮಾತ್ರ ಅಟ್ಟಿದ್ದಿತು, ಇನ್ನೂ ಪೂರ್ಣವಾಗಿರಲಿಲ್ಲ. ಒಲೆ ಆರಿ ಹೋಗಿದ್ದಿತು ಚರಣ ಆಳುಮಗನೊಂದಿಗೆ ನಡೆಯುತ್ತ ಬರುತ್ತಿದ್ದ ಆದುದರಿಂದ ಅವನು ಸ್ವಲ್ಪ ಹಿಂದೆ ಉಳಿದಿದ್ದ. ಸುಮಾರು ಹತ್ತು ನಿಮಿಷಗಳ ನಂತರ ಅವನು ತಾನು ಬಂದ ಸಮಾಚಾರ ಅಕ್ಕಪಕ್ಕದವರಿಗೆ ತಿಳಿಯುವಂತೆ ಗಟ್ಟಿಯಾಗಿ " ಅಮ್ಮಾ, ಅಮ್ಮಾ " ಎಂದು ಕೂಗುತ್ತ ಮನೆಯೊಳಕ್ಕೆ ಬಂದ ಮಗು ಕೂಗುವುದನ್ನು ಕೇಳಿ ಕುಸುಮೆ ಬಾಗಿಲು ತೆರೆದ ಕೂಡಲೆ ಅವಳ ಕಂಬನಿದುಂಬಿದ ಕಣ್ಣುಗಳ ಶ್ರಾಂತ, ವಿಪನ್ನದೃಷ್ಟಿ ವೃಂದಾವನನ ವಿಸ್ಮಯ–ವಿಹ್ವಲಪೂರಿತ ಜಿಜ್ಞಾಸು ದೃಷ್ಟಿಯ ಮೇಲೆ ಬಿದ್ದಿತು

ಇವರು ಹೀಗೆ ಬರಬಹುದೆಂದು ಕುಸುಮೆ ಎಣಿಸಿರಲಿಲ್ಲ, ಅವಳಿಗೆ ಆ ಕಲ್ಪನೆಯೂ ಇರಲಿಲ್ಲ ಒಂದು ಹೆಜ್ಜೆ ಹಿಂದೆ ಸರಿದು ತಲೆಯ ಮೇಲೆ ಸೆರಗನ್ನು ಎಳೆದುಕೊಳ್ಳುತ್ತ, ಕೋಣೆಯೊಳಗಿನ ಒಂದು ಚಾಪೆಯನ್ನು ತಂದು ಹಾಸಿದಳು ಇಷ್ಟರಲ್ಲಿ ಚರಣ ಓಡುತ್ತ ಬಂದು ಆಕೆಯ ಕಾಲುಗಳಿಗೆ ಅಪ್ಪುಗೆ ಹಾಕಿದ ಕುಸುಮೆ ಅವನನ್ನು ಎತ್ತಿಕೊಂಡು ಮುಖವನ್ನು ಮುದ್ದಿಡುತ್ತ ಒಂದು ಕಂಬದ ಮರೆಗೆ ಸರಿದು ನಿಂತಳು

ತಾಯಿಯ ಮುಖವನ್ನು ನೋಡಿ ಚರಣ ಅಳುದನಿಯಲ್ಲಿ ಎಂದ— " ಅಪ್ಪಾ, ಅಮ್ಮ ಅಳುತ್ತಿರುವಳು "

ವೃಂದಾವನನಿಗೆ ಇದು ಗೊತ್ತಾಗಿದ್ದಿತು ಅವನು " ಏನಾಯಿತು ? ಏತಕ್ಕಾಗಿ ಕರೆಕಳುಹಿದ್ದೆ ? " ಎಂದು ಕೇಳಿದ.

ಕುಸುಮೆಗೆ ಈವರೆಗೆ ಸಂಬಾಳಿಸಿಕೊಳ್ಳಲಾಗಿರಲಿಲ್ಲ, ಆದುದರಿಂದ ಅವಳಿಂದ ಉತ್ತರವೀಯಲು ಸಾಧ್ಯವಾಗಲಿಲ್ಲ ವೃಂದಾವನ ಪುನಃ ಕೇಳಿದ– " ಬಂದು ಅಣ್ಣನನ್ನು ಬೆಟ್ಟಿಯಾಗಬೇಕೆಂದು ಪತ್ರದಲ್ಲಿ ಬರೆದಿರಲಿಲ್ಲವೆ ? ಅವನೆಲ್ಲಿ ? "

ಅವಳು ಗದ್ಗದ ಕಂಠದಿಂದ " ಸತ್ತು ಹೋದ ! " ಎಂದಳು.

" ಸತ್ತನೆ ? ಏನಾಗಿದ್ದಿತು ? "

ಅವನ ಗಂಭೀರ ಸ್ವರದಲ್ಲಿ ಅಡಗಿದ ವ್ಯಂಗ್ಯ, ಈ ದುಃಖಕಾಲದಲ್ಲಿ ಕುಸುಮೆಯ ಹೃದಯದೊಳಗೆ ಇನ್ನಷ್ಟು ತೀಕ್ಷ್ಣವಾಗಿ ನೆಟ್ಟಿತು ಅವಳು ತನ್ನ ಈಗಿನ ಸ್ಥಿತಿಯನ್ನು ಮರೆತು ಕೋಪದಿಂದ " ನೋಡಿ, ನಗೆಯಾಡ ಬೇಡಿ. ಈ ಸಮಯದಲ್ಲಿ ಇಂತಹ ಮಾತು ಸರಿಯಲ್ಲ ನಿಮ್ಮನ್ನು ಕರೆ-ಕಳುಹಿದ್ದುದು ನಿಜ ಅದಕ್ಕಾಗಿ ಹೀಗೆ ಸೇಡನ್ನು ತೀರಿಸಿಕೊಳ್ಳುವಿರಾ ? " ಎಂದು ಗಟ್ಟಿಯಾಗಿ ಅತ್ತುಬಿಟ್ಟಳು

ಆಕೆ ಅದುಮಿ ಅಳುವುದನ್ನು ವೃಂದಾವನ ಚೆನ್ನಾಗಿ ಆಲಿಸಿದ. ಆದರೂ ಆ ಅಳುವು ಅವನ ಮನಸ್ಸನ್ನು ಸ್ವಲ್ಪವೂ ಕದಡಲಿಲ್ಲ ಸ್ವಲ್ಪ ಹೊತ್ತಾದಮೇಲೆ ಅವನು ಪುನಃ ಕೇಳಿದ– "ನನ್ನನ್ನು ಕರೆಕಳುಹಿದ್ದೇಕೆ ? "

ಕುಸುಮೆ ಕಂಬನಿಗಳನ್ನೊರೆಸುತ್ತ ಭಾರವಾದ ಸ್ವರದಿಂದ "ನೀವಂತೂ ಇತ್ತ ಬರುವುದೇ ಇಲ್ಲ ನಾನು ಯಾರಿಗೆ ಹೇಳಲಿ ? ಮೊದಲು ನೀವು ಕೆಲ ಸದ ಸಲುವಾಗಿಯಾದರೂ ಇತ್ತ ಬರುತ್ತಿದ್ದಿರಿ, ಆದರೆ ಈಗ ಮರೆತಾದರೂ ಬರುವುದಿಲ್ಲವಲ್ಲ ? " ಎಂದಳು.

" ಮರೆತಿಲ್ಲವೆಂದೇ ನಾನು ಇತ್ತ ಬರುತ್ತಿಲ್ಲ ಮರತಿದ್ದರೆ ಬರುತ್ತಿದ್ದೆ. ಇರಲಿ ಈ ಮಾತು ಏತಕ್ಕಾಗಿ ಕರೆಯಿಸಿದ್ದೆ ಹೇಳಬಾರದೆ ? "

" ಹೀಗೆ ಹಂಗಿಸಿ ಮಾತನಾಡಿದರೆ ಹೇಗೆ ಹೇಳಲಿ ? "

"ಹಂಗಿಸುವುದೂ ಇಲ್ಲ, ಭಂಗಿಸುವುದೂ ಇಲ್ಲ ಸರಳಭಾವದಿಂದಲೇ ಕೇಳುತ್ತಿದ್ದೇನೆ ಆಗಲಿ, ನಿನಗೆ ಹೇಗೆ ಅನುಕೂಲವೆನಿಸುತ್ತದೊ ಹಾಗೆ ಹೇಳಿಬಿಡು"— ನಗುತ್ತ ವೃಂದಾವನ ನುಡಿದ.

" ನಾನು ಬಹಳ ದಿನಗಳಿಂದ ನಿಮ್ಮನ್ನು ಒಂದು ಸಂಗತಿ ಕೇಳ ಬೇಕೆಂದಿದ್ದೆ ನಾನು ಬೀದಿಯಲ್ಲಿ, ತಲೆಹರವಿಕೊಂಡು ಸೌಂದರ್ಯ ಪ್ರದ ರ್ಶನ ಮಾಡುತ್ತ ಅಲೆಯುವೆನೆಂಬ ಮಾತನ್ನು ಹುಟ್ಟಿಸಿದ್ದು ಯಾರು ? "

ಈ ಪ್ರಶ್ನೆಯನ್ನು ಕೇಳಿ ವೃಂದಾವನ ಸ್ವಲ್ಪಹೊತ್ತು ದಿಗಿಲುಗೊಂಡ. ಬಳಿಕ ಅವನು " ನಾನೇ. ಆಮೇಲೆ ? " ಎಂದ.

" ನೀವು ಈ ಮಾತನ್ನು ಹಬ್ಬಿಸಿರುವಿರೆಂದು ನಾನು ಹೇಳಲಿಲ್ಲ ನನ್ನ ಮನಸ್ಸಿನಲ್ಲಿ ಈ ಬಗೆಯ ಕಲ್ಪನೆಯೂ ಇಲ್ಲ ಆದರೆ "

ಮಾತು ಮುಗಿಯುವ ಮೊದಲೇ ವೃಂದಾವನ " ಆದರೆ ಆದಿನ ನೀನು

ಹೇಳಿಯೂ ಇದ್ದೆ, ಯೋಚಿಸಿಯೂ ಇದ್ದೆ. ನಾನು ದೊಡ್ಡ ಮನುಷ್ಯನಾಗಿ ದ್ದರೂ ನಿನ್ನನ್ನು ಕಾಡಿಸಲಿಕ್ಕೆಂದೇ ತಾಯಿಯನ್ನೂ ಸಹೋದರರನ್ನೂ ಕರೆದು ಕೊಂಡು ಇಲ್ಲಿಗೆ ಊಟಕ್ಕಾಗಿ ಬಂದಿದ್ದೆ. ಅಂದು ಮಾಡಿದಂತೆ ಇಂದೂ ಮಾಡಲಾರೆನೇನು ? ನನ್ನ ಈ ಅಪರಾಧಕ್ಕೆ ನನ್ನ ತಾಯಿಯನ್ನು ದಂಡಿ ಸಲು ನೀನೂ ಮರೆಯಲಿಲ್ಲ ! " ಎಂದ

ಕುಸುಮೆ ಬಹಳ ನೊಂದುಕೊಂಡು ನಾಚಿಕೆಯಿಂದ ಮೆಲ್ಲನೆ ನುಡಿ ದಳು– " ನನ್ನಿಂದ ಬಹಳ ದೊಡ್ಡ ತಪ್ಪಾಗಿಹೋಯಿತು ಆಗ ನಿಮ್ಮನ್ನು ತಿಳಿಯಲಾರದೆ ಹೋದೆ. "

" ಈಗ ಸರಿಯಾಗಿ ತಿಳಿದುಕೊಂಡೆಯಾ ? "

ಕುಸುಮೆ ಸುಮ್ಮನಾದಳು ವೃಂದಾವನನೂ ಸ್ವಲ್ಪ ಹೊತ್ತು ಸುಮ್ಮ ನಿದ್ದು ಪುನಃ " ಅದು ಸರಿ, ಇದೇ ಈಗ ಒಂದು ನಾಯಿ ನಿಮ್ಮ ಅಡುಗೆ-ಮನೆಗೆ ಹೋಗಿ ಅಡುಗೆಯನ್ನೆಲ್ಲ ಮುಟ್ಟಿ ಹೋಯಿತಲ್ಲ ? " ಎಂದ

ಕುಸುಮೆ ಉದ್ವೇಗವನ್ನೂ ಚಿಂತೆಯನ್ನೂ ಎಳ್ಳಷ್ಟೂ ಪ್ರಕಟಿಸದೆ ಶಾಂತಳಾಗಿ " ಹೋಗಲಿ ಬಿಡಿ, ನಾನಂತೂ ಉಣ್ಣುವುದೇ ಇಲ್ಲ ಮೊದಲೇ ಗೊತ್ತಾಗಿದ್ದರೆ ಅಡುಗೆಯನ್ನೇ ಮಾಡುತ್ತಿರಲಿಲ್ಲ " ಎಂದಳು

" ಅದೇನು ? ಇಂದು ಏಕಾದಶಿಯೆ ?* "

ಕುಸುಮೆ ತಲೆ ಬಾಗಿಸಿಕೊಂಡು " ಯಾರಿಗೆ ಗೊತ್ತು ? ಅದೆಲ್ಲ ನಾನು ಮಾಡುವುದಿಲ್ಲ " ಎಂದಳು.

" ಏಕಾದಶಿ ಮಾಡುವುದಿಲ್ಲವೆ ? "

ಕುಸುಮೆ ತಲೆಬಾಡಿಸಿಕೊಂಡು ಸುಮ್ಮನೆ ನಿಂತಿದ್ದಳು.

ವೃಂದಾವನ ಸಂದಿಗ್ಧ ಸ್ವರದಿಂದ " ಮೊದಲು ಮಾಡುತ್ತಿದ್ದೆ, ಈಗ ಒಮ್ಮೆಲೆ ಏಕೆ ಬಿಟ್ಟುಬಿಟ್ಟೆ ? " ಎಂದು ಕೇಳಿದ.

ಕ್ಷಣಕ್ಷಣಕ್ಕೂ ಬೀಳುತ್ತಿರುವ ಈ ಮಾತಿನ ಪೆಟ್ಟುಗಳಿಂದ ಕುಸು-ಮೆಯ ಧೈರ್ಯ ಉಡುಗಿಹೋಗಿತ್ತು. ಆದರೂ ಅವಳು ಸೆಡವಿನಿಂದ " ಮಾಡುವುದೂ ಬಿಡುವುದೂ ನನ್ನ ಇಚ್ಛೆ ಬುದ್ಧಿ ಇದ್ದವರು ಯಾರೂ ತಮ್ಮ ಸರ್ವನಾಶ ಮಾಡಿಕೊಳ್ಳಬಯಸುವುದಿಲ್ಲ, ಆದುದರಿಂದಲೆ ಮಾಡುವು

---

* ಬಂಗಾಲದಲ್ಲಿ ವಿಧವೆಯರು ಏಕಾದಶಿಯನ್ನು ಮಾಡುವರು. ಮುತ್ತೈದೆ ಯರು ಮಾಡುವುದಿಲ್ಲ

ದಿಲ್ಲ. ಅಣ್ಣನ ವ್ಯವಹಾರ ಸಾಕಾಗಿ ಹೋಗಿದೆ ನಿಮ್ಮ ವ್ಯವಹಾರದಿಂದಂತೂ ನಿಜವಾಗಿಯೂ, ಉರುಲು ಹಾಕಿಕೊಂಡು ಸಾಯಲೆ, ಎನಿಸುತ್ತಿದೆ. ”

“ ಛೆ, ಛೆ, ಹಾಗೆ ಮಾಡಬೇಡ ನನ್ನ ವ್ಯವಹಾರ ಹಾಗಿರಲಿ, ಅದರಿಂದೇನೂ ಹಾನಿಯಿಲ್ಲ ಆದರೆ ಅಣ್ಣನ ನಡತೆಗೇಕೆ ನೊಂದುಕೊಳ್ಳಬೇಕು?”

ಕುಸುಮೆ ಬಹಳ ಉತ್ತೇಜಿತಳಾಗಿ “ ಅದೊಂದು ದೊಡ್ಡ ಕತೆ ಅದನ್ನು ಹೇಳುವಷ್ಟು ಧೈರ್ಯ ನನ್ನಲ್ಲಿಲ್ಲ ಒಟ್ಟಿನಲ್ಲಿ ಇಷ್ಟೇ – ಅವನು ಆ ಮನೆ-ಮಠ ಬಿಟ್ಟು ಈ ಮನೆಯನ್ನೇಕೆ ನೋಡಿಕೊಳ್ಳುತ್ತಾನೆ? ಇದಲ್ಲದೆ ಅತ್ತೆಯ ಅಪ್ಪಣೆ ಬೇಡವೆ? ಈಗ ನನ್ನ ಹೊಟ್ಟೆ-ಬಟ್ಟೆಯ ಚಿಂತೆಯನ್ನೂ ಬಿಟ್ಟುಬಿಟ್ಟಿದ್ದಾನೆ. ಚರಣ ತನ್ನ ತಾಯಿಯ ಭಾರವನ್ನು ಹೊತ್ತುಕೊಂಡಿರದಿದ್ದರೆ ಇಷ್ಟರಲ್ಲೇ ನಾನು ಸೊರಗಿ ಸತ್ತು ಹೋಗುತ್ತಲಿದ್ದೆ ಈಗ ನಾನು- ... ” ಇಷ್ಟಕ್ಕೆ ಅವಳು ಸುಮ್ಮನಾಗಿ ಮುಂದೆ ಹೇಳಬೇಕೋ ಬೇಡವೊ ಎಂದು ಯೋಚಿಸತೊಡಗಿದಳು ಆ ಮೇಲೆ ಪುನಃ “ ಈಗ ನಾನು ಸಂಪೂರ್ಣವಾಗಿ ನಿಮ್ಮ ಮರೆಹೊಕ್ಕಿದ್ದೇನೆ ಇನ್ನು ಒಂದು ದಿನ, ಒಂದು ಕ್ಷಣವೂ ಇಲ್ಲಿರಲಾರೆ ” ಎಂದಳು

ವೃಂದಾವನ ನಗುತ್ತ “ ಈ ಕಾರಣದಿಂದಲೇ ಇಲ್ಲಿರಲಾರೆಯಾ ? ” ಎಂದು ಕೇಳಿದ

ಕುಸುಮೆ ಒಂದು ಸಲ ದೃಷ್ಟಿಯನ್ನು ಮೇಲಕ್ಕೆತ್ತಿ ಕೆಳಗೆ ಚೆಲ್ಲಿದಳು. ಈ ಸಹಜ ಹಾಸ್ಯದ ಪ್ರಶ್ನೆಯಲ್ಲಿದ್ದ ಹರಿತ ವ್ಯಂಗ್ಯವು ಅವಳನ್ನು ಚುಚ್ಚಿತು.

“ ಚರಣ ತನ್ನ ತಾಯಿಯ ಹೊಣೆಯನ್ನು ಅವಶ್ಯವಾಗಿ ಹೊತ್ತು-ಕೊಳ್ಳುವನೆನ್ನೋಣ. ಆದರೆ ನೀನು ಎಲ್ಲಿರಬೇಕೆನ್ನುವೆ ? ”

“ ನನಗೇನು ಗೊತ್ತು ? ಅವರಿಗೇ ಗೊತ್ತು ” ಎಂದಳು

“ ಅವರೇ ಎಂದರೆ ಯಾರು ?—ನಾನೇ ? ”

ಕುಸುಮೆ ತಲೆಯಲ್ಲಾಡಿಸುತ್ತ “ ಹೌದು ” ಎಂದು ಸೂಚಿಸಿದಳು.

“ ಅದು ಸಾಧ್ಯವಿಲ್ಲ ನಿನಗೆ ಸಂಬಂಧಿಸಿದ ಯಾವ ವಿಷಯದಲ್ಲೂ ನಾನು ಕೈಹಾಕಲಾರೆ ನನ್ನ ತಾಯಿ ಮಾತ್ರ ಹಾಗೇನಾದರೂ ಮಾಡ ಬಲ್ಲಳು ಆಕೆಯ ವಿಷಯದಲ್ಲಿ ನೀನು ಬೇಕಾದಂತೆ ನಡೆದಿರಬಹುದು ಆದರೂ ನೀನು ಚರಣನೊಂದಿಗೆ ಅವಳ ಬಳಿಗೆ ಹೋದರೆ ಖಂಡಿತ ವಾಗಿಯೂ ಅವಳು ದಾರಿ ತೋರಿಸುವಳು ಆದರೆ ನಿನ್ನ ಅಣ್ಣ—. . ? ”

ಉದುರುತ್ತಿರುವ ಕಂಬನಿಗಳನ್ನು ಒರೆಸಿಕೊಳ್ಳುತ್ತ ಕುಸುಮೆಯು "ಅಣ್ಣನು ನನ್ನ ಪಾಲಿಗೆ ಇಲ್ಲದಂತಾಗಿರುವನೆಂದು ಹೇಳಿಯೆ ಇದ್ದೇ-ನಲ್ಲವೇ ? ಆದರೆ ನಡುಹಗಲಿನಲ್ಲಿ ನಡೆಯುತ್ತ ಭಿಕ್ಷುಕಿಯಂತೆ ನಿಮ್ಮ ಊರಿಗೆ ಹೇಗೆ ಹೋಗಲಿ ?" ಎಂದಳು

"ಇದು ನನಗೆ ಗೊತ್ತಿಲ್ಲ, ಆದರೆ ಹೋಗುವುದು ಒಳಿತು ಇದರ ಹೊರತು ಬೇರೆ ಯಾವ ಒಳ್ಳೆಯ ದಾರಿಯೂ ನನಗೆ ತೋಚದು "

ಕುಸುಮೆ ಸ್ವಲ್ಪ ಹೊತ್ತು ಸುಮ್ಮನಿದ್ದು "ಇದು ಸಾಧ್ಯವಿಲ್ಲ" ಎಂದಳು

"ಹಾಗಿದ್ದರೆ ನಿನ್ನಿಚ್ಛೆ "

ಉತ್ತರ ಬಹಳ ಸಂಕ್ಷಿಪ್ತವಾದುದು ಇದರಲ್ಲಿ ಗೂಢ ಇಲ್ಲವೆ ಅಸ್ಪಷ್ಟ ವಾದುದೇನೂ ಇರಲಿಲ್ಲ ಈಗ ಕುಸುಮೆ ನಿಜವಾಗಿಯೂ ಹೆದರಿದಳು

ವೃಂದಾವನ ಇನ್ನೇನಾದರೂ ಹೇಳಬಹುದೇ ಎಂದು ಅವಳು ಸ್ವಲ್ಪ ಹೊತ್ತು ತಲೆಯೆತ್ತಿಕೊಂಡೇ ನಿಂತಿದ್ದಳು ಬಳಿಕ ಅತ್ಯಂತ ನಮ್ರವಾಗಿ ಮೆಲ್ಲನೆ "ಇನ್ನು ನನಗೆ ನಿಲ್ಲಲಿಕ್ಕೆ ಇಲ್ಲಿಯೂ ಸ್ಥಳವಿಲ್ಲ ಅಣ್ಣನಿಗೆ ದೋಷ ವನ್ನೇಕೆ ಕೊಡಲಿ ? ತಾನು ಹಾಳಾಗಿ ಇತರರಿಗೆ ಯಾರೂ ಕಲ್ಯಾಣ ಮಾಡ ಬಯಸುವುದಿಲ್ಲ ಆದುದರಿಂದ ಅವನಿಗೆ ದೋಷ ಕೊಡುವುದರಲ್ಲಿ ಅರ್ಥ ವಿಲ್ಲ ಆದರೆ ನೀವು ಮಾತ್ರ ಹೀಗೆ ನನ್ನನ್ನು ಒದ್ದುಬಿಡುವುದು ತರವಲ್ಲ" ಎಂದಳು

ವೃಂದಾವನ ಯಾವ ಉತ್ತರವನ್ನೂ ಕೊಡದೆ ಎದ್ದು ನಿಲ್ಲುತ್ತ "ಈಗ ಹೊತ್ತಾಗಿದೆ ಚರಣ, ನೀನು ಬರುವವನೋ ಇಲ್ಲಿಯೆ ಇರುವವನೊ ? ಇರು ವೆಯಾ ? ಹಾಗೆಯೆ ಆಗಲಿ, ಇದ್ದು ಬಿಡು ನೀನು ಮಾತ್ರ ಮನಸ್ಸಿ ದ್ದರೆ ಬಾ ಚರಣನ ಕೈ ಹಿಡಿದುಕೊಂಡು ತಾಯಿಯ ಎದುರಿಗೆ ಹೋಗಿ ನಿಂತರೆ ನಿನಗೆ ಅಂತಹ ದೊಡ್ಡ ಅಪಮಾನವಾಗುವುದಿಲ್ಲ ಇರಲಿ, ಇನ್ನು ನಾನು ಹೊರಡುವೆ" ಎಂದ ಆಮೇಲೆ ಅವನು ಹೆಜ್ಜೆ ಇಡುವಷ್ಟರಲ್ಲಿ ಕುಸುಮೆ ಚರಣನನ್ನು ಕೂಡಲೆ ಇಳಿಸಿ ನೆಟ್ಟಗೆ ನಿಂತು "ಇಂದು ನನಗೆ ಚೆನ್ನಾಗಿ ತಿಳಿಯಿತು ಇಷ್ಟು ದುಃಖವನ್ನು ತೋಡಿಕೊಂಡರೂ 'ಹೊತ್ತಾ ಯಿತು, ಹೊರಡುವೆ' ಎನ್ನುವಿರಿ ನಾನೆಷ್ಟು ಗತಿಗೇಡಿಯೆಂಬುದನ್ನು ತಿಳಿದ ಮೇಲೂ ಆಶ್ರಯವನ್ನು ಕೊಡಲು ನಿರಾಕರಿಸಿದಿರಿ ಇನ್ನು ನಾನು ನಿಮಗೆ

ಹೇಳಬೇಕಾದುದಾಗಲಿ ನಿಮ್ಮಿಂದ ಬಯಸಬೇಕಾದುದಾಗಲಿ ಏನೂ ಇಲ್ಲ ಆದರೂ ನಾನು ನಿಮಗೊಂದು ಮಾತನ್ನು ಕೇಳುವುದಿದೆ ಸರಿಯಾಗಿ ಹೇಳುವಿರಲ್ಲವೇ ? " ಎಂದಳು

ವೃಂದಾವನ ಕ್ಷುಬ್ಧನಾಗಿ ಆಶ್ಚರ್ಯದಿಂದ ತಲೆಯೆತ್ತಿ " ಹೇಳುವೆ ಆಶ್ರಯ ಕೊಡಲು ನಾನು ನಿರಾಕರಿಸಲಿಲ್ಲ ಆದರೆ ಆಶ್ರಯ ಪಡೆಯಲು ನೀನೆ ನಿರಾಕರಿಸಿದೆ " ಎಂದ

ಆಗ ಕುಸುಮೆ ದೃಢತೆಯಿಂದ " ಇದು ಸುಳ್ಳು ದುರ್ದೈವದಿಂದ ಆಗ ನನ್ನ ಮನಸ್ಸಿನಲ್ಲಿ ಯಾವ ದುರ್ಬುದ್ಧಿ ಬಂದಿತೊ ಏನೋ, ಅತ್ತೆಯ ಮನಸ್ಸಿಗೆ ಪೆಟ್ಟು ಹಾಕಿ ನಾನು ದೊಡ್ಡ ಅಪರಾಧ ಮಾಡಿದೆ ಆ ಪಶ್ಚಾತ್ತಾಪ ಸತ್ತಮೇಲೆಯೂ ದೂರವಾಗದೆಂಬುದನ್ನು ಆ ಅಂತರ್ಯಾಮಿಯೆ ಬಲ್ಲ ಆದುದರಿಂದಲೇ ಅತ್ತೆ, ಗಂಡ, ಮಗ, ಮನೆ-ಹೊಲ ಎಲ್ಲವೂ ಇದ್ದರೂ ಗತಿಗೇಡಿಯಾಗಿರುವೆ, ಎರಡನೆಯವರಿಗೆ ಭಾರವಾಗಿರುವೆ ಇಂದಿನವರೆಗೂ ಅತ್ತೆಯ ಮನೆಯ ಮುಖವನ್ನು ಕಾಣಲಾರದವಳಾದೆ ನನ್ನ ತಪ್ಪು ಎಷ್ಟು ದೊಡ್ಡದಿದ್ದರೂ ನಾನು ಆ ಮನೆಯ ಸೊಸೆ ಎಂದ ಮೇಲೆ ಭಿಕ್ಷುಕಿಯಂತೆ ಅಲ್ಲಿಗೆ ಹೋಗಬೇಕೆಂದು ನೀವು ಹೇಳುವುದು ಸರಿಯೆ ? ನಿಮಗೆ ಬೇರೆ ಯಾವ ಸರಿಯಾದ ದಾರಿಯೂ ತೋಚಲಿಲ್ಲ ಏಕೆ ಗೊತ್ತೆ ? ನಾವು ಬಡವರು, ನಮ್ಮ ತಾಯಿ ಭಿಕ್ಷ ಬೇಡಿ ನಮ್ಮಿಬ್ಬರನ್ನು ಸಾಕಿ ಸಲಹಿ ದೊಡ್ಡವರನ್ನಾಗಿ ಮಾಡಿದಳು ನಮ್ಮ ಅಣ್ಣ ದಿನಗಳೆಯುತಿದ್ದುದೂ ಕೀಳುವೃತ್ತಿಯಿಂದಲೇ ಆದುದರಿಂದ ' ಭಿಕ್ಷುಕಿಯ ಮಗಳು ಭಿಕ್ಷುಕಿಯಂತೆಯೆ ಹೋದರೆ ತಪ್ಪೇನು ! ' ಎಂಬುದನ್ನೆ ನೀವು ಯೋಚಿಸಿದಿರಿ ಇದು ನಿಮ್ಮ ತಪ್ಪು ಮಾತ್ರವಲ್ಲ, ಮಹಾ ದರ್ಪವೂ ಆಗಿದೆ ಇಲ್ಲಿಯೇ ಇದ್ದುಕೊಂಡು ನಾನು ಉಪವಾಸ ಸತ್ತರೂ ಅಡ್ಡಿ ಇಲ್ಲ, ಆದರೆ ನಿಮ್ಮೆದುರಿಗೆ ಕೈಯೊಡ್ಡಿ ನಿಮ್ಮೆಲ್ಲರ ಹಾಸ್ಯಕ್ಕೆ ಗುರಿಯಾಗಲಾರೆ " ಎಂದಳು

ವೃಂದಾವನ ಅವಾಕ್ಕಾಗಿ ನಿಂತು ಕೇಳುತ್ತಿದ್ದ ಆ ಬಳಿಕ " ಒಳ್ಳೇದು ಹೋಗುವೆ. ನಾನು ಇದಕ್ಕೂ ಹೆಚ್ಚಿಗೆ ಹೇಳುವುದು ಏನೂ ಇಲ್ಲ " ಎಂದ

ಕುಸುಮೆಯೂ ಹಾಗೆಯೇ ಉತ್ತರವಿತ್ತಳು— " ಸ್ವಲ್ಪ ನಿಲ್ಲಿರಿ. ಇನ್ನೊಂದುಮಾತು ದಯವಿಟ್ಟು ಸುಳ್ಳುಹೇಳಬೇಡಿರಿ ನನ್ನ ಸಂಬಂಧವಾಗಿ ನಿಮಗೇನಾದರೂ ಸಂದೇಹವುಂಟಾಗಿದೆಯೆ ? ಒಂದು ವೇಳೆ ಆಗಿದ್ದರೆ, ನಾನು ನಿಮ್ಮೆದುರಿಗೆ ನಿಂತು ಆಣೆಮಾಡಿ ಹೇಳುವೆ " ಎಂದಳು

ಎರಡು ಹೆಜ್ಜೆ ಮುಂದೆ ಹೋದ ವೃಂದಾವನ ತಟ್ಟನೆ ನಿಂತು ಅತ್ಯಂತ ಆಶ್ಚರ್ಯದಿಂದ ನಡುವೇ ಬಾಯಿಹಾಕಿ "ಇದೇನಿದು ? ವ್ಯರ್ಥವಾಗಿ ಆಣೆಯನ್ನೇಕೆ ಮಾಡುವೆ ? ನಾನು ನಿನ್ನ ವಿಷಯವಾಗಿ ಯಾವ ಸುದ್ದಿಯನ್ನೂ ಕೇಳಿಲ್ಲ." ಎಂದು ಪುನಃ ಅವಳ ಮುಖದ ಕಡೆಗೆ ನೋಡಿ ಮೃದುವಾಗಿಯೂ ದೃಢವಾಗಿಯೂ ನುಡಿದ— " ಯಾರ ನಡತೆ-ನಡಾವಳಿಯನ್ನೂ ಪರೀಕ್ಷಿಸುವುದು ನನ್ನ ಸ್ವಭಾವವಲ್ಲ, ಇದು ಉಚಿತವೂ ಅಲ್ಲ ನಿನ್ನ ಸ್ವಭಾವ, ನಡತೆ, ಚರಿತ್ರೆಯ ವಿಷಯದಲ್ಲಿ ನನಗೆ ಕುತೂಹಲವಿಲ್ಲ ಅದನ್ನು ಕುರಿತು ಆಲೋಚಿಸಲೂ ಇಚ್ಛೆಯಿಲ್ಲ ನನಗೆ ಎಲ್ಲರೂ ಒಳ್ಳೆಯವರೇ ಆದ್ದರಿಂದ ನಿನ್ನನ್ನು ಕೆಟ್ಟವಳೆಂದು ಹೇಗೆ ತಿಳಿಯಲಿ ? "

ಹೀಗೆ ಹೇಳಿ ವೃಂದಾವನ ಮೆಲ್ಲನೆ ಹೊರಟು ಹೋದ ಕುಸುಮೆ ಬೆಪ್ಪಾಗಿ ನಿಂತುಬಿಟ್ಟಳು

ಚರಣ– " ಅಮ್ಮಾ, ನದಿಗೆ ಸ್ನಾನಕ್ಕೆ ಹೋಗುವುದಿಲ್ಲವೆ ? " ಎಂದು ಕೇಳಿದ

ಕುಸುಮೆ ಏನೂ ಉತ್ತರವೀಯಲಿಲ್ಲ ಅವನನ್ನು ಕರೆದುಕೊಂಡು ಮೆಲ್ಲಗೆ ತನ್ನ ಕೋಣೆಗೆ ಹೋದಳು ಆಮೇಲೆ ಮಂಚದ ಮೇಲೆ ಬಿದ್ದುಕೊಂಡು, ಚರಣನನ್ನು ಬಿಗಿದಪ್ಪಿಕೊಂಡು ಬಿಕ್ಕಿ-ಬಿಕ್ಕಿ ಅಳತೊಡಗಿದಳು

## ೯

ಎಷ್ಟೋ ದಿನ ಕಳೆದಿವೆ ಮಾಘವು ಹೋಗಿ ಫಾಲ್ಗುಣ ಆರಂಭವಾಗಿದೆ. ಆಗ ಹೋದ ಚರಣ ಮರಳಿ ಬರಲೇ ಇಲ್ಲ. ಅವನನ್ನು ಬರದಂತೆ ತಡೆದಿರುವರೆಂಬುದರಲ್ಲಿ ಸಂದೇಹವಿಲ್ಲ ಕುಸುಮೆಯೊಂದಿಗೆ ಇನ್ನು ಯಾವ ಸಂಬಂಧ ವಿಡುವುದೂ ಸರಿಯಲ್ಲವೆಂದು ಅವರು ತಿಳಿದಿದ್ದಾರೆ ಅಲ್ಲಿಯ ಸುದ್ದಿಯೆ ಈಗ ತಿಳಿಯುತ್ತಿಲ್ಲ. ಕುಸುಮೆಯೂ ಈಗ, ಕಾಗದಗಳನ್ನು ಬರೆದು ಅಪಮಾನಕ್ಕೆ ಗುರಿಯಾಗಕೂಡದೆಂದು ನಿರ್ಧರಿಸಿದ್ದಾಳೆ ಅಣ್ಣನೊ! ತನ್ನ ಪ್ರಪಂಚದಲ್ಲೇ ಮುಳುಗಿದ್ದಾನೆ. ಹೀಗೆ ಕುಸುಮೆಗೆ ಸುತ್ತಲೂ ದಿಗ್ಬಂಧನವಾದಂತಾಯಿತು. ಆದುದರಿಂದ ಇತ್ತಿತ್ತ ಅವಳು ಜನರ ಕಣ್ಣಿಗೆ ಬೀಳುವುದನ್ನೂ ಮೊದಲಿನಂತೆ

ಗೆಳತಿಯರಲ್ಲಿ ಹೋಗಿ-ಬರುವುದನ್ನೂ ನಿಲ್ಲಿಸಿಬಿಟ್ಟಿದ್ದಾಳೆ ಈಗ, ಬೆಳಕು ಹರಿಯುವ ಮೊದಲೇ ನದಿಗೆ ಹೋಗಿ ಮಿಂದು ನೀರು ತರುತ್ತಾಳೆ ಅವಳಿಗಾಗಿ ಗೋಪಾಲನ ತಾಯಿ ಸಂತೆಯಿಂದ ಎಲ್ಲ ಸಾಮಾನನ್ನೂ ತರುತ್ತಾಳೆ. ಹೀಗೆ, ಹೊರಗಿನ ತನ್ನ ಎಲ್ಲ ವ್ಯವಹಾರವನ್ನೂ ನಿಲ್ಲಿಸಿ ಆ ದೀರ್ಘ ದಿನಗಳನ್ನು ಬಹಳ ಕ್ಲೇಶದಿಂದ ಕಳೆಯುತ್ತಿದ್ದಾಳೆ.

ಕುಸುಮೆ ಹೊಲಿಗೆಯನ್ನು ಚೆನ್ನಾಗಿ ಬಲ್ಲಳು ಈಗ ಅದೇ ಅವಳ ಜೀವನಾಧಾರ ಹೊಲಿಗೆಯ ಕೂಲಿಯೆಂದು ಕೊಟ್ಟಷ್ಟನ್ನು ತೆಗೆದುಕೊಳ್ಳುತ್ತಾಳೆ ಕೊಡಲು ಮರೆತರೆ ಕೇಳಲು ತಾನೂ ಮರೆಯುತ್ತಾಳೆ. ಈ ಎಲ್ಲ ಗುಣಗಳಿಗಾಗಿ ಅಕ್ಕ-ಪಕ್ಕದ ಎಲ್ಲ ಜನರ ಸೊಳ್ಳೆತೆರೆ, ದಿಂಬಿನ ಹೊದಿಕೆ ಮುಂತಾದುವುಗಳನ್ನು ಕುಸುಮೆಯೆ ಹೊಲಿಯುತ್ತಾಳೆ ಇಂದು ಇಳಿಹೊತ್ತಿನಲ್ಲಿ, ಅರ್ಧಹೊಲಿದ ಒಂದು ಸೊಳ್ಳೆತೆರೆಯನ್ನು ಮುಗಿಸಲು ತನ್ನ ಮನೆಯ ಅಂಗಳದಲ್ಲಿ ಕುಳಿತಿದ್ದಳು ಅಷ್ಟರಲ್ಲಿ ಅವಳ ಕೈಯೊಳಗಿನ ಸೂಜಿ ತಟ್ಟನೆ ನಿಂತುಬಿಟ್ಟಿತು ಹಾಗೆಯೆ ಅವಳ ಮನಸ್ಸು ಕೆಲವು ದಿನಗಳ ಹಿಂದೆ ನಡೆದ ಮೊಟ್ಟಮೊದಲಿನ ಘಟನೆಯೊಡನೆ ಚಿನ್ನಾಟವಾಡತೊಡಗಿತು.

ತನ್ನ ತಿಳಿಗೇಡಿ ಅಣ್ಣನ ಆಮಂತ್ರಣವನ್ನು ಸ್ವೀಕರಿಸಿ ಯಾವ ದಿನ ವೃಂದಾವನ ತನ್ನ ಆಪ್ತರೊಂದಿಗೆ ಬಂದಿದ್ದನೊ, ಯಾವ ದಿನ ತನ್ನ ಗಂಡನ ಕೂಡ ನಾಚಿಕೆ ಬಿಟ್ಟು ನಿರ್ವಾಹವಿಲ್ಲದೆ ಮೊಟ್ಟಮೊದಲ ಸಲ ಮಾತನಾಡಬೇಕಾಯಿತೊ, ಆ ದಿನದ ಎಲ್ಲ ಸಂಗತಿಗಳು ಅವಳಿಗೆ ನೆನಪಾದುವು. ದುಃಖವು ಉಕ್ಕಿಬಂದಾಗ ಅವಳು ಎಲ್ಲ ಕೆಲಸಗಳನ್ನೂಬಿಟ್ಟು ಈ ನೆನಪನ್ನೆ ಸವಿಯುತ್ತ ಸುಮ್ಮನೆ ಕುಳಿತುಕೊಳ್ಳುತ್ತಾಳೆ ತಾಯಿ ಹೇಗ ತನ್ನ ಮಗುವನ್ನು ಎತ್ತಿಕೊಂಡು ಉಯ್ಯಾಲೆಯಾಡಿಸುತ್ತ ಮುದ್ದಾಡುವಳೊ ಹಾಗೆಯೆ ಇವಳೂ ತನ್ನ ಏಕಮಾತ್ರ ಸ್ಮೃತಿಯನ್ನು ಅನಿರ್ವಚನೀಯ ಪ್ರೇಮದಿಂದ ಹಿಗ್ಗಿಸಿ ಹೊರಳಿಸಿ ಎಲ್ಲಮೀರಿದ ತೃಪ್ತಿಯನ್ನು ಅನುಭವಿಸುತ್ತಾಳೆ ಅದರಿಂದ ಆಕೆಯ ದುಃಖ ಸ್ವಲ್ಪ ಮರೆತಂತಾಗುತ್ತದೆ. ಅಂದಿನ ಅವರಿಬ್ಬರ ವಾದ-ಪ್ರತಿವಾದ, ಯಾರಿಗೂ ತಿಳಿಯದಂತೆ ಮಾಡಿದ ಊಟದ ವ್ಯವಸ್ಥೆ, ಅಡುಗೆ ಮಾಡಿ ಗಂಡನಿಗೂ ಮೈದುನರಿಗೂ ಬಡಿಸಿದುದು, ಅತ್ತೆಯ ಸೇವೆ, ಕಟ್ಟಕಡೆಯಲ್ಲಿ ಸಾಯಂಕಾಲ ತನಗೆ ಉಳಿದ ಆರಿದ ಅಡುಗೆ, ಇವೆಲ್ಲವನ್ನೂ ಅವಳು ನೆನೆದುಕೊಳ್ಳುತ್ತಾಳೆ.

ಕುಸುಮೆಯ ಕಣ್ಣಿನಿಂದ ನೀರು ಬಳಬಳನೆ ಉದುರತೊಡಗಿತು. ಸ್ತ್ರೀಯಾಗಿ ಹುಟ್ಟಿದುದಕ್ಕೆ ಅವಳಿಗೆ ಇದಕ್ಕೂ ಹೆಚ್ಚಿನ ಸುಖದ ಯೋಚನೆಯೂ ಇಲ್ಲ, ಬಯಕೆಯೂ ಇಲ್ಲ ಈ ಕೆಲಸವನ್ನು ದಿನವೂ ಮಾಡುವ ಹೆಂಗುಸಿಗೆ ಸಂಸಾರದಲ್ಲಿ ಇನ್ನೇನೂ ಬೇಕಿಲ್ಲ ಎಂದೇ ಅವಳ ಭಾವನೆ

ಆಮೇಲೆ ಅವಳಿಗೆ ಅವನು ಎಲ್ಲ ಸಂಬಂಧವನ್ನು ತೊರೆದು ಹೋದ ದಿನದ ನೆನವು ಬಂದಿತು ಅಂದು ಸಂಬಂಧ ಮುರಿಯಲು ಅವಳೂ ಸಹಾಯ ಮಾಡಿದಳೆ ಹೊರತು ಅದನ್ನು ತಡೆಯಲಿಲ್ಲ ಇದಲ್ಲದೆ ಅವಳು ಚರಣನನ್ನು ಕುರಿತು ಯೋಚಿಸಿರಲಿಲ್ಲ ಮಾತ್ರವಲ್ಲ, ಅವನೂ ಹೀಗೆ ಅಗಲಿ ಹೋಗುವನೆಂಬ ಮಾತು ಅತಿ ಅಭಿಮಾನದ ಮೂಲಕ ಅವಳಿಗೆ ಹೊಳೆಯಲಿಲ್ಲ. ದಿನಗಳು ಉರುಳಿದಂತೆ, ಚರಣನು ಇನ್ನು ಇಲ್ಲಿಗೆ ಬರುವನೊ ಇಲ್ಲವೊ ಎಂಬ ಭಯದಿಂದ ಕೊರಗುತ್ತಿದ್ದಾಳೆ "ಅವನು ಎಂದಿಗೂ ಬರದಿದ್ದರೆ ಕ್ಷಣಮಾತ್ರವಾದರೂ ನಾನು ಬದುಕಬಲ್ಲೆನೇ ?" ಅವಳ ಮನಸ್ಸಿನಲ್ಲಿ ಮನೆಮಾಡಿಕೊಂಡಿದ್ದ ಈ ಸಂದೇಹ, ಕಷ್ಟಕಾಲದ ಈ ದಿನಗಳಲ್ಲಿ ವೇದನೆಯನ್ನು ಹೆಚ್ಚಿಸುತ್ತಿರುವ ಈ ಸಂದೇಹ, ದೃಢವಾದುದು ಹೆಚ್ಚಿನ ದುಃಖದ ಸಂಗತಿ ಅವಳ ಹೃದಯದಲ್ಲಿ ಪವಡಿಸಿದ್ದ ನಂಬುಗೆ ಈಗ ಎಚ್ಚತ್ತು ಹಗಲಿರುಳೂ ಕಿವಿಯಲ್ಲಿ ಹೀಗೆ ಹೇಳುತ್ತಿರುವುದು—" ಎಲ್ಲವೂ ಮಿಥ್ಯೆ, ತನಗೆ ಬಾಲ್ಯದಲ್ಲಿ ತಗಲಿದ ಕಲಂಕ, ಕೆಟ್ಟ ಹೆಸರು, ಎಲ್ಲವೂ ಸುಳ್ಳು ತಾನು ಹಿಂದೂ ಕನ್ಯೆ, ಆದುದರಿಂದ ಪಾಪ-ಅನ್ಯಾಯ ಯಾವುದೂ ತನ್ನ ಮನಸ್ಸನ್ನು ಪ್ರವೇಶಿಸಲಾರದು ತಿಳಿದಾಗಲಿ, ತಿಳಿಯದೆ ಆಗಲಿ, ಹಿಂದೂ ಕನ್ಯೆ ತನ್ನ ಗಂಡನನ್ನು ಬಿಟ್ಟು, ಉಳಿದವರನ್ನು ಎಷ್ಟೂ ಪ್ರೀತಿಸಲಾರಳು ಬೇರೆ ಯಾರ ಸೇವೆ-ಶುಶ್ರೂಷೆ ಮಾಡಲೂ ಆಕೆಯ ಮನಸ್ಸು ಹೀಗೆ ತವಕಗೊಳ್ಳದು ಒಂದು ವೇಳೆ ಅವರು ನನ್ನ ಸ್ವಾಮಿಯಾಗಿರದಿದ್ದರೆ ದೇವರು ನನಗೆ ನಿಶ್ಚಯವಾಗಿಯೂ ಸನ್ಮಾರ್ಗವನ್ನು ತೋರಿಸುತ್ತಿದ್ದ ನನ್ನ ಹೃದಯದಲ್ಲಿ ನಾಚಿಕೆಯ ಚಿಕ್ಕ ತರಂಗವನ್ನಾದರೂ ಎಬ್ಬಿಸಿ ನನ್ನನ್ನು ಈ ಕೆಲಸದಿಂದ ಹಿಂದೂಡುತ್ತಲಿದ್ದ "

ಇಂದು ಸಂತೆ ಗೋಪಾಲನ ತಾಯಿ ಸಂತೆಗೆ ಹೋಗಿ ಬಹಳ ಹೊತ್ತಾಗಿದೆ ಅವಳು ಈಗ ಬರುವ ಹೊತ್ತು ಆದುದರಿಂದಲೇ ಕುಸುಮೆಯ ಮನೆಯ ಬಾಗಿಲು ತೆರೆದಿದೆ ಇಷ್ಟರಲ್ಲಿ ಕುಂಜನಾಥ ಬೂಟಿನ ಜರ್-ಜರ್ ಸಪ್ಪಳದೊಂದಿಗೆ ಅಕ್ಕ-ಪಕ್ಕದವರಿಗೆ ಅಸೂಯೆಯನ್ನೂ ವಿಸ್ಮಯವನ್ನೂ

ಹುಟ್ಟಿಸುತ್ತ ಮನೆಯನ್ನು ಹೊಕ್ಕ ಅವನೊಂದಿಗೆ ಒಬ್ಬ ಆಳುಮಗನೂ ಇದ್ದ. ಕುಸುಮೆಗೆ ಅಣ್ಣ ಬಂದನೆಂಬುದು ಗೊತ್ತಾಯಿತು ಆದರೆ ಅವಳು ಕಂಬನಿದುಂಬಿದ ಕಣ್ಣುಗಳನ್ನು ಮೇಲಕ್ಕೆತ್ತಲಿಲ್ಲ

ಕುಂಜ ನೇರವಾಗಿ ತಂಗಿಯ ಎದುರಿಗೆ ಹೋಗಿ " ನಿನ್ನ ವೃಂದಾವನ ನಿಗೆ ಪುನಃ ಮದುವೆ! " ಎಂದ

ಕುಸುಮೆಯ ಹೃದಯಸ್ಪಂದನ ಒಮ್ಮೆಲೆ ನಿಂತು ಹೋದಂತಾಯಿತು ಆಕೆ ತಲೆಬಾಗಿಸಿಕೊಂಡು ಕಟ್ಟಿಗೆಯ ಗೊಂಬೆಯಂತೆ ಕುಳಿತುಬಿಟ್ಟಳು

ಕುಂಜ ತನ್ನ ದನಿಯನ್ನು ಇನ್ನಷ್ಟು ಏರಿಸಿ-" ನೀರಲ್ಲಿದ್ದುಕೊಂಡು ಮೊಸಳೆಯ ಕೂಡ ಹೇಗೆ ಹಗೆತನ ಕಟ್ಟಿಕೊಳ್ಳುವನೊ ನೋಡೋಣ ನಂದ ವೈಷ್ಣವ ನಮ್ಮ ಜಹಗೀರಿನಲ್ಲಿದ್ದು ನಮ್ಮ ಅವಮಾನ ಮಾಡಲು ಅವನೇನು ಬಾಜಿರಾಯನ ಮೊಮ್ಮಗನೆ? " ಎಂದು ಮತ್ತೆ ನುಡಿದ

ಕುಸುಮೆಗೆ ಈ ಮಾತಿನ ಅರ್ಥವಾಗಲಿಲ್ಲ ಆಕೆ ಅತ್ಯಂತ ಖೇದ ದಿಂದ ಕೇಳಿದಳು- " ನಂದವೈಷ್ಣವ ಯಾರು? "

" ನಂದವೈಷ್ಣವ ನಮ್ಮ ಒಕ್ಕಲು ನಮ್ಮ ಕೆರೆಯ ಬಳಿಯಲ್ಲಿ ತನ್ನ ಮನೆ ಕಟ್ಟಿಕೊಂಡಿದ್ದಾನೆ ನಾನು ಅವನ ಮನೆಗೆ ಕೊಳ್ಳಿ ಇಟ್ಟೇನು! ಈಗ ನಿಶ್ಚಯವಾದುದು ಅವನ ಮಗಳೇ ಇದೇ ಫಾಲ್ಗುಣದಲ್ಲಿ ಮದುವೆಯಂತೆ. ಭೂತಾ, ಸ್ವಲ್ಪ ಹೊಗೆಸೊಪ್ಪು ತುಂಬಿಕೊಂಡು ಬಾ! "

ಕುಸುಮೆ ಇದುವರೆಗೆ ದೃಷ್ಟಿ ಮೇಲೆಕ್ಕೆತ್ತಿರಲಿಲ್ಲ ಆದುದರಿಂದ ಅಣ್ಣನ ಕೂಡ ಆಳುಮಗನೂ ಬಂದಿದ್ದು ಅವಳಿಗ ಗೊತ್ತಿರಲಿಲ್ಲ ಈಗ ಅವಳಿಗೆ ಬಹಳ ಸಂಕೋಚವೆನಿಸಿತು

ಕುಂಜ " ಏನು ಭೂತಾ, ನಂದವೈಷ್ಣವನ ಮಗಳು ನೋಡುವುದಕ್ಕೆ ಹೇಗಿದ್ದಾಳೆ? " ಎಂದು ಕೇಳಿದ

ಆಳುಮಗನು ಸ್ವಲ್ಪ ಯೋಚಿಸಿ " ಚೆನ್ನಾಗಿದ್ದಾಳೆ " ಎಂದ

ಕುಂಜ ಸ್ವಲ್ಪ ಸಿಡುಕಿನಿಂದ " ಚೆನ್ನಾಗಿದ್ದಾಳೆ? ಸಾಧ್ಯವೇ ಇಲ್ಲ. ನೋಡಲು ನಮ್ಮ ತಂಗಿಯಂತೆ ಇದ್ದಾಳೇನು? ಹಂ! ನೀನು ಎಂದಾದರೂ ಇಂತಹ ಚೆಲುವೆಯನ್ನು ನೋಡಿರುವೆಯಾ? " ಎಂದು ಕೇಳಿದ

ಭೂತಾ ಉತ್ತರವೀಯುವ ಮೊದಲೆ ಕುಸುಮೆ ಎದ್ದು ಕೋಣೆಗೆ ಹೋದಳು. ಸ್ವಲ್ಪ ಹೊತ್ತಿನ ಮೇಲೆ ಹೊಗೆಸೊಪ್ಪು ಸೇದುತ್ತ, ಕುಂಜನು

ತಂಗಿಯ ಕೋಣೆಯ ಬಾಗಿಲಿನಲ್ಲಿ ನಿಂತು “ ಕುಸುಮಾ, ನಾನು ಮೊದಲೆ ಹೇಳಿರಲಿಲ್ಲವೆ— ವೃಂದಾವನನಷ್ಟು ನೀಚರು, ಕೃತಘ್ನರು ಯಾರೂ ಇಲ್ಲ ವೆಂದು ? ನನ್ನ ಮಾತು ಸರಿಯಾಯಿತಲ್ಲವೇ ? ನಮ್ಮ ಅತ್ತೆ ಆಗಾಗ್ಗೆ ಹೇಳುತ್ತಿರುತ್ತಾಳೆ— ‘ ವೇದ ಸುಳ್ಳಾಗಬಹುದು, ಆದರೆ ನಮ್ಮ ಕುಂಜ ನಾಥನ ಮಾತು ಎಂದೂ ಸುಳ್ಳಾಗುವುದಿಲ್ಲ ’ ಏನೋ ಭೂತಾ, ನಮ್ಮ ಅತ್ತೆ ಹಾಗೆ ಹೇಳಲಿಲ್ಲವೆ ? ” ಎಂದು ಕೇಳಿದ

ಕೋಣೆಯೊಳಗಿಂದ ಉತ್ತರವೇನೂ ಬರಲಿಲ್ಲ ಆದರೆ ಒಂದು ಅಸ್ಪಷ್ಟ ಸ್ವರವು ಕೇಳುತ್ತಲಿತ್ತು

ಕುಂಜನಿಗೆ ಏನು ಯೋಚನೆ ಬಂತೊ ಏನೋ, ಚಿಲುಮೆಯನ್ನು ಅಲ್ಲಿ ಯೇ ಇಟ್ಟು ಕೋಣೆಯನ್ನು ಹೊಕ್ಕ

ಕುಸುಮೆ ಮುಖ ಮುಚ್ಚಿಕೊಂಡು ಹಾಸಿಗೆಯ ಮೇಲೆ ಬಿದ್ದುಕೊಂಡಿ ದ್ದಳು ಕುಂಜನಾಥ ಸ್ವಲ್ಪ ಹೊತ್ತು ಆಕೆಯನ್ನೆ ನೋಡುತ್ತಲಿದ್ದ ಅನೇಕ ದಿನಗಳ ಬಳಿಕ, ಇಂದು ಅವನ ಕಣ್ಣಿನಲ್ಲಿಯೂ ಒಂದೆರಡು ಹನಿಯೊಡೆದವು. ಅವನ್ನು ಒರೆಸಿಕೊಂಡು ಹಾಸಿಗೆಯಮೇಲೆ ಕುಳಿತು ತಂಗಿಯ ತಲೆಯಮೇಲೆ ಕೈಯಿಡುತ್ತ ಮೆಲ್ಲಗೆ— “ ಹೆದರಬೇಡ ಕುಸುಮಾ, ಬೇಕಾದುದಾಗಲಿ ಈ ಮದುವೆ ಆಗಗೊಡುವುದಿಲ್ಲ ನಿನ್ನ ಅಣ್ಣ ಆಡಿದಂತೆ ಮಾಡುವನೊ ಇಲ್ಲವೊ ಎಂಬುದು ನಿನಗೆ ಗೊತ್ತಾಗುವುದು ಆದರೆ ತಂಗಿ, ಅತ್ತೆಯ ಮನೆಗೆ ಹೋ ಗಲು ನೀನು ಒಡಂಬಡಲಿಲ್ಲ ನಮ್ಮ ಯತ್ನ ಬುದ್ಧಿವಾದ ಎಲ್ಲವೂ ವ್ಯರ್ಥ ವಾಯಿತು ” ಎಂದ

ಕೊನೆಯ ಮಾತನ್ನಾಡುವಾಗ ಕುಂಜನ ಕಂಠ ಬಿಗಿದುಬಂದಿತು

ಈಗ ಕುಸುಮೆಗೆ ತಡೆಯುವುದಾಗಲಿಲ್ಲ ಅವಳು ಬಿಕ್ಕಿ ಬಿಕ್ಕಿ ಅಳ- ತೊಡಗಿದಳು ಅಣ್ಣನಿಗೆ ತನ್ನ ವಿಷಯದಲ್ಲಿ ಲವಲೇಶ ಮಮತೆಯೂ ಉಳಿ ದಿಲ್ಲವೆಂದು ಕುಸುಮೆ ಬಹಳ ದಿನಗಳಿಂದಲೂ ತಿಳಿದಿದ್ದಳು

ಕುಂಜನ ಕಣ್ಣಿನಿಂದಲೂ ನೀರು ಹರಿಯತೊಡಗಿತು. ಅವನು ತಂಗಿಯ ತಲೆಯ ಮೇಲೆ ಕೈಯಾಡಿಸುತ್ತ ಧೈರ್ಯಗೊಡುತ್ತಿದ್ದ

ಸಾಯಂಕಾಲವಾಯಿತು ಕುಂಜ ಕೋಟಿನ ಚುಂಗಿನಿಂದ ಕಂಬನಿ ಗಳನ್ನು ಇನ್ನೊಮ್ಮೆ ಒರೆಸಿಕೊಂಡು “ ತಂಗಿ, ಗಾಬರಿಯಾಗಬೇಡ ನಾನು ಈ ಮದುವೆಯನ್ನೆಂದಿಗೂ ಆಗಗೊಡುವುದಿಲ್ಲ, ಇದು ಖಂಡಿತ ” ಎಂದ.

ಕುಸುಮೆ ಈಗ ಬಾಯಿಬಿಚ್ಚಿದಳು. ಅವಳು ಅಳುತ್ತಳುತ್ತ "ಬೇಡಣ್ಣ, ನೀನು ಇದರಲ್ಲಿ ಕೈಹಾಕಬೇಡ" ಎಂದಳು

ಕುಂಜನು ಅಚ್ಚರಿಗೊಂಡು ಕೇಳಿದ— "ಏನೆಂದೆ? ಕೈಹಾಕುವುದು ಬೇಡವೆ? ನಮ್ಮ ಕಣ್ಣೆದುರಿಗೆ ಅವನು ಮದುವೆಯಾಗಬೇಕು, ನಾವು ಮಾತ್ರ ಸುಮ್ಮನೆ ನಿಂತು ಈ ಮೋಜು ನೋಡುತ್ತಿರಬೇಕೆ! ಇದೆಂತಹ ಮಾತು ನಿನ್ನದು?"

"ಬೇಡಣ್ಣ, ನೀನು ಇದಕ್ಕೆಲ್ಲ ಅಡ್ಡಿಮಾಡಬೇಡ."

ಕುಂಜ ಸ್ವಲ್ಪ ಕೋಪದಿಂದ— "ಅಡ್ಡಿಮಾಡಬಾರದೆ? ಅದೇಕೆ? ಇದರಲ್ಲಿ ನಿನ್ನ ಮರ್ಯಾದೆ ಹೋಗದಿದ್ದರೂ, ನನ್ನ ಮರ್ಯಾದೆ ಹೋಗುವುದು ಖಂಡಿತ ಇದನ್ನು ನಾನು ಹೇಗೆ ಸಹಿಸಲಿ? ಅವನು ನಮ್ಮ ಒಕ್ಕಲು. ಜನರು ನಮ್ಮ ಮೇಲೆ ಉಗುಳಲಿಕ್ಕಿಲ್ಲವೆ?" ಎಂದು ನುಡಿದ

ಕುಸುಮೆ ದಿಂಬಿನಲ್ಲಿ ಮುಖ ಮುಚ್ಚಿಕೊಂಡು ಆಗಾಗ್ಗೆ ತಲೆಯಲ್ಲಾಡಿಸಿ— "ಅಣ್ಣ, ಇದರಲ್ಲಿ ಕೈ-ಹಾಕಬೇಡವೆಂದು ನಾನು ನಿನಗೆ ಖಂಡಿತ ಹೇಳುವೆ ನಮ್ಮ-ಅವರ ಸಂಬಂಧವೇನೂ ಈಗ ಉಳಿದಿಲ್ಲ ಜಗಳವಾಡಿ ಕಲಂಕವನ್ನು ಹೆಚ್ಚಿಸುವುದು ಬೇಡ ಮದುವೆಯಾಗುತ್ತಿದ್ದರೆ ಆಗಲಿ ಬಿಡು" ಎಂದಳು

ಕುಂಜ ಬಹಳ ಕೋಪದಿಂದ "ಸಾಧ್ಯವಿಲ್ಲ" ಎಂದ.

"ಅದೇಕೆ ಸಾಧ್ಯವಿಲ್ಲ? ನನ್ನನ್ನು ಬಿಟ್ಟು ಅವರು ಈ ಮೊದಲು ಒಂದು ಮದುವೆ ಮಾಡಿಕೊಂಡಿದ್ದರು ಈಗ ಇನ್ನೂ ಒಂದನ್ನು ಮಾಡಿಕೊಳ್ಳಲಿ ನಮ್ಮ ದೃಷ್ಟಿಯಿಂದ ಎರಡೂ ಒಂದೇ ಅಣ್ಣ, ನಾನು ನಿನ್ನ ಕಾಲಿಗ ಬೀಳುತ್ತೇನೆ, ವ್ಯರ್ಥವಾಗಿ ಅಡ್ಡಿಮಾಡಿ ನನ್ನ ಗೌರವಕ್ಕೆ ಕುಂದು ತರಬೇಡ ಯಾವ ರೀತಿಯಾದರೂ ಸರಿಯೆ, ಅವರು ಸುಖದಿಂದ ಇದ್ದರಾಯಿತು."

ಕುಂಜ ಮೊದಲು 'ಹೂಂ' ಎಂದು ಆಮೇಲೆ ಪುನಃ "ನಿನ್ನನ್ನು ನಾನು ಬಹಳ ದಿನಗಳಿಂದ ಬಲ್ಲೆ ಒಂದು ಸಲ ನಿನ್ನ ಬಾಯಿಂದ 'ಇಲ್ಲ' ಎಂದು ಹೊರಬಿದ್ದ ಬಳಿಕ 'ಹೂಂ' ಎನ್ನಿಸುವುದು ಸಾಧ್ಯವಿಲ್ಲ ನೀನು ಯಾರ ಮಾತನ್ನೂ ಕೇಳುವವಳಲ್ಲ, ನಿನ್ನ ಮಾತನ್ನು ಮಾತ್ರ ಎಲ್ಲರೂ ಕೇಳಬೇಕು" ಎಂದ.

ಕುಸುಮೆ ಸುಮ್ಮನಿದ್ದಳು

ಕುಂಜ ಪುನಃ ಆಡತೊಡಗಿದ–“ ಒಂದು ರೀತಿಯಿಂದ ನೋಡಿದರೆ ಈ ಮಾತೂ ಸುಳ್ಳಲ್ಲ ನೀನು ಅತ್ತೆಯಮನೆಗೆ ಹೋಗದೆ ಇದ್ದರೆ, ಅವರ ಮನೆತನ ನಡೆಯುವುದಾದರೂ ಹೇಗೆ ? ಈಗೇನೊ ವೃಂದಾವನನ ತಾಯಿಯು ಇದ್ದಾಳೆ, ಆದರೆ ಅವಳು ಚಿರಂಜೀವಿಯೇನು ? ”

ಕುಸುಮೆ ಇದಕ್ಕೂ ಉತ್ತರಕೊಡಲಿಲ್ಲ

ಕುಂಜ ಸ್ವಲ್ಪ ಹೊತ್ತು ಸುಮ್ಮನಿದ್ದು ಒಮ್ಮೆಲೆ ಕೇಳಿದ— “ ಆದಿರಲಿ ಕುಸುಮಾ, ಅವನು ಇನ್ನೊಂದು ಮದುವೆ ಮಾಡಿಕೊಳ್ಳಲಿ, ಇಲ್ಲವೆ ಬಿಡಲಿ, ಆದರೆ ನೀನೇಕೆ ಇಷ್ಟು ಅಳುತ್ತಿರುವೆ ? ”

ಕುಸುಮೆಯ ಬಳಿ ಇದಕ್ಕೆ ಉತ್ತರವೇನಿದ್ದಿತು ?

ಕತ್ತಲಾದುದರಿಂದ ಕುಸುಮೆಯ ಕಣ್ಣೀರು ಕಡಿಮೆಯಾದುದು ಕುಂಜನಿಗೆ ಕಾಣಿಸಲಿಲ್ಲ ಆದರೆ ಅಣ್ಣನ ಈ ಪ್ರಶ್ನೆಯಿಂದ ಅದು ಇನ್ನಷ್ಟು ವೇಗವಾಗಿ ಹರಿಯತೊಡಗಿತು

ಕುಂಜನು ಹೋದ ಮೇಲೆ ಆ ದಿನದ ಮಾತುಗಳನ್ನು ನೆನೆಸಿಕೊಂಡು ಕುಸುಮೆ ನಾಚಿಕೆ, ಅನುತಾಪದಿಂದ ಕಂದಿ ಕುಂದಿ ಹೋಗತೊಡಗಿದಳು “ ಛೀ, ಛೀ, ಈ ನಾಚಿಕೆಗೇಡಿತನದಿಂದ ಬಿಡುಗಡೆಯಾಗಲು ಸತ್ತ ಮೇಲೆಯೂ ಮಾರ್ಗವಿಲ್ಲ ಆದುದರಿಂದಲೆ ನನಗೆ ಆಶ್ರಯವನ್ನೀಯುವುದು ಅವರ ಕೈಯೊಳಗಿನ ಮಾತಾಗಿರಲಿಲ್ಲ ನಾನು ಅವರಿಗೆ ಎಷ್ಟು ಬೇದಿಕೊಂಡಿದ್ದೆ ! ಅವರು ಇನ್ನೊಂದು ಮದುವೆಯ ಸಿದ್ಧತೆಯಲ್ಲಿದ್ದಾಗಲೂ ನಾನು ಅವರ ಮನೆಯ ಸೊಸೆಯೆಂದು ಅಭಿಮಾನದಿಂದ ಬಾಯಿಬಿಟ್ಟು ಹೇಳಿದ್ದೆ ! ಅಣುಮಾತ್ರ ಪ್ರೇಮವಿಲ್ಲದಿರುವಲ್ಲಿ ನಾನು ಪರ್ವತ ಪ್ರಮಾಣ ಅಭಿಮಾನಪಟ್ಟುಕೊಂಡಿದ್ದೆ ! ದೇವಾ ! ಇಂತಹ ಅಸಹ್ಯ ದುಃಖದಲ್ಲಿಯೂ ನೀನು ನನ್ನ ತಲೆಯಮೇಲೆ ಎಂತಹ ನಾಚಿಕೆಗೇಡಿತನದ ಭಾರವನ್ನು ಹೊರಿಸಿಬಿಟ್ಟೆ ! ”

ಕುಸುಮೆಯ ಹೃದಯದಿಂದ ನೀಳವಾದ ಉಸಿರೊಂದು ಹೊರಬಿದ್ದಿತು- “ ಓಹೋ, ಅದಕ್ಕೇ ಅವರಿಗೆ ನನ್ನ ಸ್ವಭಾವ - ಚರಿತ್ರೆಯ ಸಂಬಂಧದಲ್ಲಿ ಸ್ವಲ್ಪವಾದರೂ ಕುತೂಹಲವಿಲ್ಲ ! ಆದರೂ ನಾನು ನಾಚಿಕೆಗೆಟ್ಟು ಪ್ರತಿಜ್ಞೆ ಮಾಡ ಹೊರಟಿದ್ದೆ ! ”

೧೦

ವೃಂದಾವನ, ಚಂಚಲಚಿತ್ತನಾಗಿ ಕ್ರೋಧಗೊಳ್ಳುವುದು ವಿಕಾರ ಗೊಳ್ಳುವುದು ಯಾವಾಗಲೂ ಹೇಯವಾದ ಕೆಲಸ ಎಂದು ತಿಳಿದುಕೊಳ್ಳುವ ಸ್ವಭಾವದವನು, ಅದನ್ನು ಯಾವಾಗಲೂ ತಿರಸ್ಕಾರದಿಂದಲೇ ಕಾಣುವವನು ಇಂತಹ ಜನರು ಕ್ರೋಧದ ಬಲೆಯಲ್ಲಿ ಬಿದ್ದಾಗ ಪ್ರತಿಸಲವೂ ತಮ್ಮನ್ನು ತಿದ್ದಿಕೊಳ್ಳಬಲ್ಲರು ತಮ್ಮ ಎದುರಾಳಿಗಳೊಂದಿಗೆ ಕಾದಾಡಿ ಜನ-ಜಾತ್ರೆ ಸೇರಲು ಎಂದೂ ಬಿಡುವವರಲ್ಲ ಹೀಗಿದ್ದರೂ ಅಂದು ವೃಂದಾವನ ಕುಸು-ಮೆಯ ಕಠೋರನಡತೆ ಬಿರುನುಡಿಗಳನ್ನು ಸಹಿಸದೆ ಅವಳೊಡನೆ ನಿರರ್ಥಕ ಮಾತುಗಳನ್ನಾಡಿ ಬಂದ ಇದರಿಂದ ಅವನಿಗಾದ ಮನಸ್ತಾಪಕ್ಕೆ ಮೇರೆಯೆ ಇರಲಿಲ್ಲ ಆದುದರಿಂದಲೇ ಚರಣನನ್ನು ಕರೆತರಲು ಅವನು ಮರುದಿನ ಮುಂಜಾನೆಯೆ ಆಳನ್ನೂ ಬಂಡಿಯನ್ನೂ ಕಳಿಸಿದ ಬುದ್ಧಿಮತಿಯಾದ ಕುಸುಮೆ ಈ ಸಂಕೇತವನ್ನು ತಿಳಿದುಕೊಂಡು ತಮ್ಮ ಮನೆಗೆ ಬಂದರೂ ಬರ ಬಹುದೆಂದು ಅವನಿಗೊಂದು ಆಸೆ ಒಂದು ವೇಳೆ ಅವಳು ಬಂದೇ ಬಿಟ್ಟರೆ ಏನು ಮಾಡಬೇಕು ಎಂಬ ವಿಚಾರವೂ ಅವನ ತಲೆಯಲ್ಲಿ ಸುಳಿಯಿತು— "ಮನೆಯಲ್ಲಿ ತಾಯಿಯಂತೂ ಇದ್ದೇ ಇದ್ದಾಳೆ ಅವಳು ಎಲ್ಲವನ್ನೂ ಸರಿ ಪಡಿಸುವಳು" ತನ್ನ ತಾಯಿಯ ಕಾರ್ಯ--ಕುಶಲತೆಯ ಬಗಗೆ ಅವನಿಗೆ ಅಗಾಧ ವಿಶ್ವಾಸ ತನ್ನ ತಾಯಿ ಎಂತಹ ಬಿಕ್ಕಟ್ಟನ್ನೂ ಬಹು ಜಾಗರೂಕತೆ ಯಿಂದ ಕೌಶಲ್ಯದಿಂದ ಎಲ್ಲರ ಕಲ್ಯಾಣವಾಗುವಂತೆ ಕೊನೆಗಾಣಿಸುವಳು ಎಂಬ ನಂಬುಗೆ ಈ ವಿಶ್ವಾಸದ ಬಲದಿಂದ ಅವನು ತಾಯಿಗೆ ಏನೂ ತಿಳಿ ಸದೆ ಬಂಡಿಯನ್ನು ಕಳಿಸಿ ಆಸೆ, ಆನಂದ, ನಾಚಿಕೆ, ಭಯ, ಇವುಗಳಿಂದ ಅಧೀರನಾಗಿ ದಾರಿ ಕಾಯುತ್ತಿದ್ದ ಕುಸುಮೆ ತಾಯಿಯ ಕ್ಷಮೆ ಕೇಳುವ ಮಟ್ಟಿಗಾದರೂ ಬಂದೇಬರುವಳೆಂದು ಅವನು ತಿಳಿದಿದ್ದ.

ಬಂಡಿಯು ಚರಣಸೊಬ್ಬನನ್ನೇ ಕರೆದುಕೊಂಡು ಮಧ್ಯಾಹ್ನ ತಿರುಗಿ ಬಂದಿತು ವೃಂದಾವನ ಚಂಡೀಮುಂಟಪದ ಮರೆಯಿಂದಲೇ ನೋಡಿ ತಣ್ಣಗಾದ.

ಕೆಲವು ದಿನಗಳಿಂದ ವೃಂದಾವನನ ಪಾಠಶಾಲೆ ನಿಯಮಿತವಾಗಿ ನಡೆ ಯುತ್ತಿಲ್ಲ ಪಂಡಿತರು–ಮಾಸ್ತರು– ಅತ್ತ ಗಮನ ಕೊಡದೆ ಇರುವುದರಿಂದ

ಹುಡುಗರು ತಪ್ಪಿಸತೊಡಗಿದ್ದರು ಬಂದ ಹುಡುಗರ ವೇಳೆ ಪಾಟಿ ತೊಳೆಯು ವುದರಲ್ಲಿಯೆ ಕಳೆಯುತಿದ್ದಿತು ಪೂಜೆ ಮುಗಿದ ಮೇಲೆ ಪ್ರಸಾದ ಸ್ವೀಕಾರದ ಕೆಲಸ ಮಾತ್ರ ಅಚ್ಚುಕಟ್ಟಾಗಿ ಸಾಗಿತ್ತು ಅಕೃತ್ರಿಮ ಭಕ್ತಿಯಿಂದಲೊ ಏನೊ, ಪ್ರಸಾದ ಸ್ವೀಕಾರದ ಕಾಲದಲ್ಲಿ ತಾವು ತಪ್ಪಿಸಿಕೊಂಡು ಗೌರಾಂಗ ಮಹಾಪ್ರಭುವಿನ ಅಪಮಾನ ಮಾಡುವುದು ಒಳಿತಲ್ಲವೆಂದು ಮಕ್ಕಳು ಬಗೆಧಿದ್ದರು.

ಅಂತೂ ವೃಂದಾವನ ಸಾಲೆಯ ಕಡೆಗೆ ಪೂರ್ಣವಾಗಿ ಗಮನ ಕೊಡ-ತೊಡಗಿದ. ಪಾಟಿ ತೊಳೆಯಲು ಹುಡುಗರಿಗೆ ತಗಲುವ ಆರು ಗಂಟೆಯ ಸಮಯವನ್ನು ವೃಂದಾವನ ಹದಿನೈದು ನಿಮಿಷಕ್ಕೆ ಇಳಿಸಿದ ಇಡೀ ದಿನ ಎಲ್ಲಿಯೊ ತಲೆಮರೆಸಿಕೊಂಡು, ಗೌರಾಂಗ ಮಹಾಪ್ರಭುವಿನ ಮೇಲಿನ ಭಕ್ತಿಯಿಂದ ಪೂಜಾಕಾಲದಲ್ಲಿ ಮಾತ್ರ ಜಿಟ್ಟೆಯಂತೆ ಸೇರುವುದು ತರವಲ್ಲವೆಂಬುದನ್ನೂ ತಿಳಿಹೇಳಿದ

ಸುಮಾರು ಹತ್ತು ದಿನಗಳ ನಂತರ ವೃಂದಾವನ ಒಂದು ದಿನ ಮಧ್ಯಾಹ್ನ ಅಂಕೆ-ಮಗ್ಗಿಗಳನ್ನು ಹೇಳಲು ಹುಡುಗರನ್ನು ಸಾಲಾಗಿ ನಿಲ್ಲಿಸಿದ್ದ. ಹುಡುಗರು ಒಬ್ಬನಿಗಿಂತ ಇನ್ನೊಬ್ಬನು ಗಟ್ಟಿಯಾಗಿ ಕೂಗುತ್ತ ಗಣಿತಶಾಸ್ತ್ರದಲ್ಲಿ ಹೊಸ ಉತ್ಪತ್ತಿ ಮಾಡತೊಡಗಿದ್ದರು ಅಷ್ಟರಲ್ಲಿ ಅಲ್ಲಿಗೆ ಸಭ್ಯಗೃಹಸ್ಥರೊಬ್ಬರು ಬಂದರು ವೃಂದಾವನ ಕೂಡಲೆ ಎದ್ದು ಕುಳಿತು-ಕೊಳ್ಳಲು ಆಸನವನ್ನು ಕೊಟ್ಟು ಅವರ ಮುಖವನ್ನು ನೋಡತೊಡಗಿದ ಅವರ ಗುರುತು ಅವನಿಗೆ ಸಿಕ್ಕಲಿಲ್ಲ.

ಬಂದವರು ವಯಸ್ಸಿನಿಂದ ವೃಂದಾವನನಷ್ಟೆ ದೊಡ್ಡವರು ಅವರು ಆಸನವನ್ನಲಂಕರಿಸುತ್ತ ನಸುನಗೆಯಿಂದ " ನನ್ನ ಗುರುತು ಸಿಕ್ಕಲಿಲ್ಲವೆ? " ಎಂದು ಕೇಳಿದರು.

ವೃಂದಾವನ ಸ್ವಲ್ಪ ಸಂಕೋಚಗೊಂಡು " ಇಲ್ಲ " ಎಂದ

" ನಾನು ಬಂದ ಕೆಲಸ ಆಮೇಲೆ ಹೇಳುವೆ ನಮ್ಮ ಮಾವಾ ನಿಮ್ಮನ್ನು ಪ್ರಶಂಸಿಸಿ ನನಗೊಂದು ಕಾಗದ ಬರೆದಿದ್ದರು. ಆದುದರಿಂದಲೆ ಪರದೇಶಕ್ಕೆ ಹೋಗುವ ಮುನ್ನ ನಿಮ್ಮನ್ನು ಕಾಣಬೇಕೆಂದು ಬಂದಿರುವೆ ನನ್ನ ಹೆಸರು ಕೇಶವ "

ವೃಂದಾವನ ಕೂಡಲೆ ಆಸನದಿಂದ ಚಟ್ಟನೆ ಎದ್ದು ತನ್ನ ಬಾಲ್ಯ

ಸ್ನೇಹಿತನನ್ನು ಅಪ್ಪಿಕೊಂಡ. ಕೇಶವ ಇಂಗ್ಲಿಷ್ ಶಿಕ್ಷಕರಾದ ದಿವಂಗತ ದುರ್ಗಾದಾಸರ ಸಹೋದರಿಯ ಮಗ ಆಗ ಇವರೀರ್ವರಲ್ಲಿಯೂ ಬಹಳ ಗೆಳೆತನವಿದ್ದಿತು ದುರ್ಗಾದಾಸರ ಹೆಂಡತಿ ತೀರಿದ ಬಳಿಕ ಕೇಶವ ಹೊರಟು ಹೋಗಿದ್ದ ಆಮೇಲೆ ಇವರಿಬ್ಬರ ಬೆಟ್ಟಿಯಾಗಿರಲಿಲ್ಲ ಆದರೂ ಇಬ್ಬರೂ ಒಬ್ಬರನ್ನೊಬ್ಬರು ಮರೆತಿರಲಿಲ್ಲ ವೃಂದಾವನನಿಗೆ ತನ್ನ ಗುರುಗಳ ಮೂಲಕ ಬಾಲ್ಯ ಸ್ನೇಹಿತನ ಸಮಾಚಾರ ತಿಳಿಯುತ್ತಿದ್ದಿತು

ಐದಾರು ವರ್ಷಗಳಾದುವು, ಕೇಶವ ಎಮ್ ಎ ತೇರ್ಗಡೆಯಾಗಿ ಒಂದು ಕಾಲೇಜಿನಲ್ಲಿ ಅಧ್ಯಾಪಕನಾಗಿದ್ದಾನೆ ಈಗ ಅವನು ಸರಕಾರದ ಒಂದು ಕೆಲಸಕ್ಕಾಗಿ ವಿದೇಶಕ್ಕೆ ಹೋಗಲಿದ್ದಾನೆ

ಕುಶಲ ಪ್ರಶ್ನೆಗಳಾದ ಮೇಲೆ ಕೇಶವನು " ನಿಜ ಹೇಳುವುದಾದರೆ, ನಮ್ಮ ಮಾವಾ ಮುಖಸ್ತುತಿ ಮಾಡುವ ಮನುಷ್ಯರಲ್ಲ ಮೊನ್ನೆ ಅವರು ತಮ್ಮ ಪತ್ರದಲ್ಲಿ ಬರೆದಿದ್ದರು— ' ಇಲ್ಲಿಯವರೆಗೆ ಅನೇಕ ವಿದ್ಯಾರ್ಥಿಗಳಿಗೆ ಕಲಿಸಿದ್ದೇನೆ, ಆದರೆ ವೃಂದಾವನನಷ್ಟು ಯೋಗ್ಯನನ್ನು ನಾನು ಈವರೆಗೂ ಕಂಡಿಲ್ಲ ' ಎಂದು ಇಂದಿನವರೆಗೆ ಅಂತಹ ಯೋಗ್ಯ ಮನುಷ್ಯನನ್ನು ನಾನೂ ನೋಡಿರಲಿಲ್ಲ ಆದುದರಿಂದ ಸ್ವದೇಶವನ್ನಗಲುವ ಮೊದಲು ನಿನ್ನನ್ನು ಕಂಡು ಹೋಗೋಣವೆಂದು ಬಂದೆ " ಎಂದ

'ಇದು ಗೆಳೆಯನಿಂದ ಬಂದ ಮಾತಾಗಿದ್ದರೂ ವೃಂದಾವನನಿಗೆ ಬಹಳ ನಾಚಿಕೆಯಾಯಿತು, ಏನು ಹೇಳಬೇಕೆಂದು ಅವನಿಗೆ ತಿಳಿಯಲಿಲ್ಲ ತನ್ನನ್ನು ಯಾರಾದರೂ ಇಷ್ಟು ಹೊಗಳುವರೆಂಬುದನ್ನು ವೃಂದಾವನ ಕನಸಿನಲ್ಲಿಯೂ ತಿಳಿದಿರಲಿಲ್ಲ ಈ ಸ್ತುತಿ ತನ್ನ ಪರಮಪೂಜ್ಯ ಗುರುಗಳಿಂದಲೇ ಬಂದಿರು ವುದನ್ನು ಕೇಳಿ ಅವನಿಗೆ ಇನ್ನಿಷ್ಟು ನಾಚಿಕೆಯಾಯಿತು, ಅವನ ಬುದ್ಧಿ ಮಂಕಾಯಿತು.

ಕೇಶವ ಇದನ್ನು ಊಹಿಸಿ " ಇರಲಿ ಬಿಡು ನಿನಗೆ ಸಂಕೋಚವಾಗು ವಂತಹ ಮಾತನ್ನು ಇನ್ನು ನಾನು ಆಡುವುದಿಲ್ಲ ಕೇವಲ ಮಾವನವರ ಅಭಿ ಪ್ರಾಯ ಹೇಳಿದೆನಷ್ಟೆ ಇನ್ನು ನಾನು ಬಂದ ಕೆಲಸದ ವಿಷಯ ನೀನು ಇಲ್ಲಿ ಒಂದು ಪಾಠಶಾಲೆ ತೆರೆದಿರುವೆ ಮಕ್ಕಳಿಂದ ಶುಲ್ಕ ತೆಗೆದುಕೊಳ್ಳುವು ದಿಲ್ಲವೆಂದು ಕೇಳಿದ್ದೇನೆ ಅಲ್ಲದೆ ನೀನೆ ಹುಡುಗರಿಗೆ ಬಟ್ಟೆ-ಪುಸ್ತಕ ಕೊಡುವೆ ಯಂತೆ. ನಾನೂ ಹೀಗೆಯೆ ಮಾಡಬೇಕೆಂದಿದ್ದೆ. ಆದರೆ ಹುಡುಗರೆ ಸಿಕ್ಕಲಿಲ್ಲ.

ನೀನು ಇಷ್ಟು ವಿದ್ಯಾರ್ಥಿಗಳನ್ನು ಹೇಗೆ ಕೂಡಿಸಿದೆ ಹೇಳು ನೋಡೋಣ "
ಎಂದ.

ವೃಂದಾವನನಿಗೆ ಅವನ ಮಾತು ತಿಳಿಯಲಿಲ್ಲ ಅವನು ವಿಸ್ಮಿತನಾಗಿ ನೋಡತೊಡಗಿದ

ಕೇಶವ ನಸುನಗುತ್ತ ಎಂದ— " ಇರಲಿ, ನಾನು ಹೇಳುವುದಿಷ್ಟೆ : ಈ ದಿನಗಳಲ್ಲಿ ಮಾಡಲು ಯೋಗ್ಯವಾದ ಯಾವುದಾದರೂ ಕೆಲಸವಿದ್ದರೆ ಅದು ಶಿಕ್ಷಣ— ಜನಸಾಮಾನ್ಯರ ಮಕ್ಕಳಿಗೆ ಜ್ಞಾನದಾನ ಇದನ್ನು ಬಿಟ್ಟು ಇನ್ನು ಯಾವ ಕೆಲಸ ಮಾಗಿದರೂ ವ್ಯರ್ಥ ಮಕ್ಕಳಿಗೆ ಓದು-ಬರಹ ಕಲಿಸಿ ಬಿಟ್ಟರಾಯಿತು, ಅವರು ತಮ್ಮ ಹಿತ ತಾವೆ ನೋಡಿಕೊಳ್ಳುವರು ಎಂದು ನನ್ನ ಅಭಿಪ್ರಾಯ ಉಗೆ ಇರುವಾಗಲೆ ಎಂಜಿನು ನಡೆಯುವುದು, ಅದಿಲ್ಲ ದಿದ್ದರೆ ಇಷ್ಟು ದೊಡ್ಡ ಜಡಯಂತ್ರವನ್ನು ಸಾವಿರಾರು ಜನರು ಎಳೆದು ಕೊಂಡು ಹೋಗುವುದಿರಲಿ, ಅಲುಗಾಡಿಸುವುದೂ ಸಾಧ್ಯವಿಲ್ಲ ಇರಲಿ, ಇದೆಲ್ಲವನ್ನೂ ನೀನು ಬಲ್ಲೆ, ಇಲ್ಲದಿದ್ದರೆ ಕೈಗಂಟನ್ನು ವೆಚ್ಚಮಾಡಿ ಈ ಪಾಠಶಾಲೆಯನ್ನು ನಡೆಸುತ್ತಿರಲಿಲ್ಲ ಇಂತಹ ಸಾಲೆಯನ್ನು ತೆರೆಯಲು ನಮ್ಮ ಊರಿನಲ್ಲಿ ಅನುಕೂಲತೆ ಇಲ್ಲ, ಇದ್ದರೆ ಸಾಲೆಯನ್ನು ಮೊದಲಿಸಿ ಅದನ್ನೆ ಬೆಳೆಸುತ್ತ ಒಂದು ದೊಡ್ಡ ಶಿಕ್ಷಣ ಸಂಸ್ಥೆಯನ್ನಾಗಿ ಮಾಡಬೇಕೆಂದು ನನ್ನ ಇಚ್ಛೆ ಇತ್ತು ನಮ್ಮಲ್ಲಿ ಮಕ್ಕಳೆ ಒಟ್ಟುಗೂಡಲಿಲ್ಲ ನಮ್ಮ ಊರಿನ ಹಿಂದುಳಿದ ಜಾತಿಯ ಜನರು ಮಕ್ಕಳನ್ನು ಓದಲು ಸಾಲೆಗೆ ಕಳಿಸುವುದೇ ಇಲ್ಲ ನಾನು ನನ್ನ ಮಾನ-ಮರ್ಯಾದೆ ಬಿಟ್ಟು ಅವರ ಮನೆಗೆ ಅಲೆದೆ, ಆದರೂ ಅದರಿಂದ ಯಾವ ಪ್ರಯೋಜನವೂ ಆಗಲಿಲ್ಲ. "

ವೃಂದಾವನನ ಮುಖ ಕೆಂಪೇರಿತು ಆದರೂ ಅವನು ಶಾಂತಭಾವ ದಿಂದ– " ಹಿಂದುಳಿದ ಜಾತಿಯ ಜನರ ಭಾಗ್ಯ ಒಳ್ಳೆಯದಿದ್ದಿತು ಎಂತಲೆ ಮೇಲ್ಜಾತಿಯವರ ಪಾಠಶಾಲೆಗೆ ಮಕ್ಕಳನ್ನು ಕಳಿಸಲಿಲ್ಲ ನಮ್ಮಂತಹ ಸಾಮಾನ್ಯ ಜಾತಿಯವರ ಮನೆಗೆ ಬರುವುದರಿಂದ ನಿಮ್ಮ ಮಾನ-ಮರ್‍ಯಾದೆ ಹಾಳು ಮಾಡಿಕೊಂಡದ್ದು ಸರಿಯಾಗಲಿಲ್ಲ ತಾನೆ ? " ಎಂದು ಕೇಳಿದ.

ವೃಂದಾವನನ ಕೊಂಕು ಮಾತು ಕೇಶವನ ಹೃದಯದಲ್ಲಿ ಚೆನ್ನಾಗಿ ನಾಟಿತು. ಅವನು ಅಪ್ರತಿಭನಾಗಿ ಎಂದ–" ಛೆ ! ಛೆ ! ನಿಮ್ಮ ವಿಷಯದಲ್ಲಿ- ನಿಮ್ಮ ಜಾತಿಯ ವಿಷಯದಲ್ಲಿ- ನಾನು ಹೇಳಿದ್ದಲ್ಲ ರಾಮ ರಾಮ ! ನಾನು ಹೇಳಿದ್ದು ಇದಲ್ಲ. ನಿನಗೆ ಗೊತ್ತೇ ಇದೆ . . . ."

ವೃಂದಾವನ ನಗುತ್ತ ಹೇಳಿದ—" ನಾನು ಚೆನ್ನಾಗಿ ಬಲ್ಲೆ, ನೀನು ನಮ್ಮ ಜಾತಿಯ ಬಗೆಗೆ ಹೇಳಲಿಲ್ಲ, ನಮ್ಮ ಮಟ್ಟದ ಜಾತಿಯವರಿಗೆ ಹೇಳಿದೆ ಎಂದು. ನಾವು–ನೇಕಾರರು, ಕಮ್ಮಾರರು, ಒಕ್ಕಲಿಗರು– ನೇಯುತ್ತೇವೆ, ನೇಗಿಲು ತಯಾರಿಸುತ್ತೇವೆ, ದನ-ಕರು ಮೇಯಿಸುತ್ತೇವೆ, ಒಕ್ಕಲುತನ ಮಾಡುತ್ತೇವೆ ನಮ್ಮ ಬಟ್ಟೆ ಬೆಲೆಯುಳ್ಳವಲ್ಲ, ಸರಕಾರದ ಕಚೇರಿಗಳ ಬಾಗಿಲಿಗೆ ಹೋಗುವ ಶಕ್ತಿ ನಮಗಿಲ್ಲ ಆದುದರಿಂದಲೆ ನೀವು ನಮಗೆ ಕೀಳು, ಹಿಂದುಳಿದವರು ಎಂದು ಹೇಳುತ್ತೀರಿ ಒಂದು ಒಳ್ಳೆಯ ಕೆಲಸಕ್ಕಾಗಿ ನಮ್ಮಂತಹರ ಮನೆಗೆ ಬಂದರೂ ನಿಮ್ಮಂತಹ ವಿದ್ಯಾವಂತರ ಸಹೃದಯರ ಮರ್ಯಾದೆ ಹೋಗುತ್ತದೆ "

ಕೇಶವ ತಲೆತಗ್ಗಿಸಿ ಎಂದ–" ವೃಂದಾವನ, ನಾನು ನಿನ್ನನ್ನು ಗೌಳಿಗ, ಒಕ್ಕಲಿಗರಿಂದ ಬೇರ್ಪಡಿಸಿ ಮಾತನಾಡಿದುದು ನಿಜ. ನೀನು ಅವರಲ್ಲಿ ಇಷ್ಟು ತಾದಾತ್ಮ್ಯ ಹೊಂದಿದವನೆಂದು ನಾನು ತಿಳಿದಿದ್ದರೆ, ನನ್ನಿಂದ ಇಂತಹ ಮಾತು ಎಂದಿಗೂ ಹೊರಬೀಳುತ್ತಿರಲಿಲ್ಲ "

" ಇದನ್ನು ನಾನು ಬಲ್ಲೆ ನೀವು ನನ್ನನ್ನು ಅವರಿಂದ ಬೇರ್ಪಡಿಸುವುದರಿಂದ ನಾನೇನೂ ಬೇರೆಯಾಗಲಾರೆ ನಮ್ಮ ಮನೆತನ ಏಳು ತಲೆಗಳಿಂದ ಇಲ್ಲಿಯ ಜನಸಾಮಾನ್ಯರೊಂದಿಗೆ ಬೆರೆಯುತ್ತ ಬಂದಿದೆ ನಾನೂ ಒಬ್ಬ ಒಕ್ಕಲಿಗ, ನಾನೂ ನನ್ನ ಕೈಯಿಂದಲೆ ಉಳುತ್ತೇನೆ ಕೇಶವ, ನಮ್ಮ ಸಾಲೆಗೆ ಹುಡುಗರು ಸೇರಿದ್ದೂ ನಿಮ್ಮ ಸಾಲೆಗೆ ಸೇರದಿದ್ದುದೂ ಅದಕ್ಕೇ. ಈ ಜನರ ಗುಂಪಿನಲ್ಲಿರುವುದರಿಂದಲೇ ನಾನು ದೊಡ್ಡವನು, ಅವರನ್ನು ಬಿಟ್ಟರೆ ದೊಡ್ಡವನಾಗಲಾರೆ ನನ್ನ ಬಳಿ ಇಂತಹ ಜನರು ಸಂಕೋಚವಿಲ್ಲದೆ ಬರುವುದೂ ನಿಮ್ಮಂತಹರ ಬಳಿಗೆ ಹೋಗಲು ಅವರಿಗೆ ಸಾಹಸವಾಗದಿರುವುದೂ ಅದಕ್ಕಾಗಿಯೆ ನಾವು ಅಶಿಕ್ಷಿತರೂ ಅಹುದು, ದರಿದ್ರರೂ ಅಹುದು ನಾವು ಅಭಿಮಾನವನ್ನು ವ್ಯಕ್ತಮಾಡಲಾರೆವು ನಮ್ಮನ್ನು ಜನಸಾಮಾನ್ಯರು, ಹಿಂದುಳಿದವರು ಎನ್ನುತ್ತೀರಿ ನೀವು. ನಾವೇನೊ ಸುಮ್ಮನಿದ್ದು ಅದನ್ನು ಒಪ್ಪಿಬಿಡುತ್ತೇವೆ ಆದರೆ ನಮ್ಮ ಹೃದಯದೊಳಗಿನ ಅಂತರ್ಯಾಮಿ ಮಾತ್ರ ಅದನ್ನು ಒಪ್ಪುವದಿಲ್ಲ. ಅವನು ಸವಿಮಾತುಗಳಿಗೆ ಮರುಳಾಗುವವನಲ್ಲ "

ಕೇಶವ ಲಜ್ಜಿತನೂ ಕ್ಷುಬ್ಧನೂ ಆಗಿ ಸುಮ್ಮನೆ ಕೇಳತೊಡಗಿದ

ಮತ್ತೆ ವೃಂದಾವನನೇ ಮುಂದೆ ಸಾಗಿದ–" ಇದರಿಂದ ನಮ್ಮ ಜನರ

ಹಾನಿಯಾಗುವುದೆಂಬುದನ್ನೂ ಬಲ್ಲೆ. ಆದರೂ ನೀವು ನಮ್ಮ ಹಿತಚಿಂತ-ಕರು, ಆತ್ಮೀಯರು, ಎಂದು ತಿಳಿಯುವುದಕ್ಕೂ ನಮಗೆ ಹೆದರಿಕೆ ನಿನಗೆ ಗೊತ್ತಿಲ್ಲವೆ- ನಮ್ಮಲ್ಲಿ ಕುಂಟು ವೈದ್ಯರು, ಪೆದ್ದ ಪಂಡಿತರು ಮಾತ್ರ ಪ್ರತಿಷ್ಠೆ ಪಡೆಯುವರೆಂಬುದನ್ನು? ಅದಕ್ಕೆ ಉದಾಹರಣೆ ಪ್ರತ್ಯಕ್ಷ ನಾನೇ ಇಲ್ಲಿ ನಿಮ್ಮಂತಹ ದೊಡ್ಡ ಪ್ರೊಫೆಸರರ, ಡಾಕ್ಟರರ, ಬೇಳೆ ಮಾತ್ರ ಏನೂ ಬೇಯುವುದಿಲ್ಲ ನಮ್ಮ ಹೃದಯದಲ್ಲಿಯೂ ದೇವರಿದ್ದಾನೆ ನಿಮ್ಮವರ ಈ ಶ್ರದ್ಧಾಹೀನ ಕರುಣೆ, ತಾವು ಶ್ರೇಷ್ಠರೆಂಬ ಭಾವನೆಯಿಂದ ನೀಡುವ ಭಿಕ್ಷೆ, ಆ ದೇವರಿಗೆ ಒಗ್ಗುವುದಿಲ್ಲ ಅವನು ಅತ್ತ ನೋಡುವುದೂ ಇಲ್ಲ"

ಈ ಸಲ ಕೇಶವ ವಾದಿಸುತ್ತ ಎಂದ—"ಹಾಗೆ ಮಾಡುವುದು ಅನ್ಯಾಯ ನಿಮ್ಮ ವಿಷಯದಲ್ಲಿ ನಮಗೆ ತಿರಸ್ಕಾರವೇನೂ ಇಲ್ಲ ನಾವು ನಿಮ್ಮ ಹಿತವನ್ನೇ ಬಯಸುತ್ತೇವೆ ನಮ್ಮಲ್ಲಿ ನೀವು ಸಂಪೂರ್ಣ ವಿಶ್ವಾಸ ಇಡುವುದು ಒಳಿತು ನಾವು ವಿದ್ಯಾವಂತರು, ನಿಮ್ಮ ಒಳಿತು ಕೆಡುಕುಗಳನ್ನು ಬೇಗನೆ ತಿಳಿಯಬಲ್ಲೆವು. ನಾವು ಎಲ್ಲ ರೀತಿಯಿಂದಲೂ ಮುಂದುವರಿದವ ರೆಂಬುದು ನಿಮಗೆ ಗೊತ್ತೇ ಇದೆ ಆದುದರಿಂದ ನಮ್ಮ ಮಾತನ್ನು ಕೇಳು ವುದು ನಿಮ್ಮ ಕರ್ತವ್ಯ"

"ನೋಡು ಕೇಶವ, ನಮ್ಮ ಹೃದಯ ಅತ್ತ ಏಕೆ ಒಲಿಯುತ್ತಿಲ್ಲವೊ ಆ ದೇವರೆ ಬಲ್ಲ ಅದು ಹಾಗಿರಲಿ ನೀವು ನಮ್ಮ ಹಿತಬಯಸುವುದು ಆತ್ಮೀಯರಂತಲ್ಲ, ಯಜಮಾನರಂತೆ ಆದುದರಿಂದ ನಿಮ್ಮೊಳಗಿನ ನೂರಕ್ಕೆ ತೊಂಬತ್ತು ಜನರು ಶ್ರೇಷ್ಠ ವರ್ಗದವರ ಕಲ್ಯಾಣವನ್ನೂ ಕೆಳವರ್ಗದವರ ಅಧಃಪತನವನ್ನೂ ಬಯಸುತ್ತಾರೆ ನಿಮ್ಮ ಮಕ್ಕಳ ಸಂಪರ್ಕದಲ್ಲಿದ್ದು-ಕೊಂಡು ಓದು-ಬರಹ ಕಲಿತು 'ರಾಯ' ನಾದ ಒಕ್ಕಲುಮಗನು ತನ್ನ ತಂದೆ-ತಾಯಂದಿರ ಮಾತು ಕೇಳುವುದಿಲ್ಲ, ಅವರನ್ನು ಆದರದಿಂದ ಕಾಣುವು ದಿಲ್ಲ ಶಿಕ್ಷಣ ಪಡೆದ ಮೇಲೆ ಹೀಗಾಗುವುದೆಂಬ ನಮ್ಮ ಭಾವನೆ ನಿಮ್ಮ ನಡತೆಯಿಂದಲೇ ಹುಟ್ಟಿದ್ದು ಕೇಶವ, ಮೊದಲು ನಮ್ಮ ಜನರನ್ನು—ಎಂದರೆ ದೇಶದೊಳಗಿನ ಜನಸಾಮಾನ್ಯರನ್ನು-- ನಿಮ್ಮವರೆಂದು ತಿಳಿಯಲು ಕಲಿಯಿರಿ ಅವರ ಹಿತಚಿಂತನೆಯೂ ವಿದ್ಯಾಭ್ಯಾಸವೂ ಆಮೇಲೆ ಸುಶಿಕ್ಷಿತ ಪಂಗಡವೇ ಬೇರೆಯಲ್ಲ, ಸುಶಿಕ್ಷಿತರು ದೇಶದೊಳಗಿನ ಅಶಿಕ್ಷಿತ, ಹಿಂದುಳಿದ ಜನರನ್ನು ಕೀಳೆಂದು ಭಾವಿಸುವುದಿಲ್ಲ, ಅವರ ವಿಷಯದಲ್ಲಿ ಆದರವಿದೆ,

ಎಂಬುದನ್ನು ನಿಮ್ಮ ನಡೆ-ನುಡಿಯಿಂದ ಅವರಿಗೆ ಮನಗಾಣಿಸಿ ಕೊಡಿರಿ ನಮ್ಮ ಮಕ್ಕಳು ಮೊಮ್ಮಕ್ಕಳು ಸುಶಿಕ್ಷಿತರಾಗಿ ನಮ್ಮಲ್ಲಿ ಅನಾದರ ತೋರಿಸಲಾರರು, ಜಾತಿ, ಸಮಾಜ, ವ್ಯವಸಾಯ-ವಾಣಿಜ್ಯಗಳನ್ನು ಬಿಟ್ಟು ನಮ್ಮಿಂದ ಬೇರೆಯಾಗಲಾರರು, ಎಂಬ ವಿಶ್ವಾಸ ಆಗ ಮಾತ್ರ ನಮಗೆ ಹುಟ್ಟುವುದು. ಹೀಗೆ ಮಾಡದೆ, ಸಾವಿರಾರು ಜನ್ಮಗಳ ವರೆಗೆ ಅವಿವಾಹಿತರಾಗಿ ಈ ಕಾರ್ಯಕ್ಕಾಗಿ ಮೀಸಲಾಗಿ ಉಳಿದರೂ ನಿಮ್ಮಲ್ಲಿ ಹಿಂದುಳಿದ ಪಂಗಡದ ಮಕ್ಕಳು ಶಿಕ್ಷಣ ಪಡೆಯಲಾರರು ಹಿಂದುಳಿದ ಜನರು ಮೇಲ್ತರಗತಿಯ ಸುಶಿಕ್ಷಿತರಿಗೆ ಹೆದರಬಹುದು, ಆದರ ತೋರಿಸಬಹುದು, ಭಕ್ತಿಯನ್ನಿಡಬಹುದು, ಆದರೆ ವಿಶ್ವಾಸವನ್ನೆಂದಿಗೂ ಇಡರು ಅವರ ಮಾತನ್ನೆಂದಿಗೂ ಕೇಳರು ತಮ್ಮ ಹಿತ ಬೇರೆ ನಿಮ್ಮ ಹಿತ ಬೇರೆ ಎಂದು ಅವರ ಮನಸ್ಸಿನಲ್ಲಿದ್ದ ಭಾವನೆ ಎಂದಿಗೂ ದೂರವಾಗದು ''

ಕೇಶವನು ಸ್ವಲ್ಪಹೊತ್ತು ಸುಮ್ಮನಿದ್ದು " ನಿನ್ನ ಮಾತು ಸರಿಯೆಂದು ತೋರುತ್ತದೆ ವೃಂದಾವನ, ನಮ್ಮ ನಿಮ್ಮಲ್ಲಿ ವಿಶ್ವಾಸವಿಲ್ಲದಿದ್ದರೆ ಆತ್ಮೀಯರಾಗಲು ನಾವು ಮಾತ್ರ ಪ್ರಯತ್ನಿಸುವುದರಿಂದ ಪ್ರಯೋಜನವೇನು ? ಎಲ್ಲಿಯ ವರೆಗೆ ನಮ್ಮ ಮೇಲೆ ವಿಶ್ವಾಸವಿಲ್ಲವೊ ಅಲ್ಲಿಯ ವರೆಗೆ ನಾವು ಆತ್ಮೀಯರೊ ಪರಕೀಯರೊ ಎಂಬುದನ್ನು ತೋರಿಸುವುದು ಹೇಗೆ ? ಇದಕ್ಕೆ ನಿನ್ನ ಉತ್ತರವೇನು ? " ಎಂದು ಕೇಳಿದ

" ಇದನ್ನು ಮೊದಲೇ ಹೇಳಿದ್ದೇನೆ ನಮ್ಮ ಎಲ್ಲ ಸಂಸ್ಕಾರಗಳು ಕುಸಂಸ್ಕಾರಗಳೆಂದು ನಿಮ್ಮ ಸುಶಿಕ್ಷಿತ ವರ್ಗದ ಭಾವನೆ ನಮ್ಮ ಮನೆ-ಮಠ, ರೀತಿ-ನೀತಿ, ಉದ್ಯೋಗ-ವ್ಯವಹಾರ, ಇವು ನಿಮ್ಮವುಗಳಿಗಿಂತ ಭಿನ್ನವಾಗಿವೆ. ಆದುದರಿಂದ ನೀವು ತೋರಿಸಿದ ಮಾರ್ಗ ಕಲ್ಯಾಣಕಾರಿಯೆಂದು ನಾವು ತಿಳಿಯುವುದು ಹೇಗೆ ? ಅದಿರಲಿ ಕೇಶವ, ನೀನು ಸಂಧ್ಯಾವಂದನೆ ಮಾಡುವೆಯಾ ? ''

' ಇಲ್ಲ ''

" ಮೆಟ್ಟು ಹಾಕಿಕೊಂಡು ನೀರು ಕುಡಿಯುವೆಯಾ ? ''

" ಅಹುದು "

" ಮುಸಲ್ಮಾನರ ಅಡಿಗೆ ಊಟಮಾಡುವೆಯಾ ? ''

" ಓಹೋ ಅದರಲ್ಲೇನು ? ''

" ಹಾಗಿದ್ದರೆ ಹಿಂದುಳಿದವರಿಗಾಗಿ ಸಾಲೆ ತೆರೆಯಬೇಕೆನ್ನುವ ನಿನ್ನ ಸಂಕಲ್ಪ ವಿಡಂಬನೆಯೇ ಸರಿ ಇನ್ನೂ ಒಂದು ಮಾತಿದೆ ಅದನ್ನು ಹೇಳಿದರೆ ನೀನು ಸಿಟ್ಟಾಗಬಹುದು "

" ಅದು ಯಾವುದು ? ಉದ್ಧಟತನವೇ ? "

" ಅಹುದು, ಅದೇ ಕೇಶವ, ಬರಿಯ ಇಚ್ಛೆಯಿಂದ, ಪ್ರೇಮದಿಂದ, ಎರಡನೆಯವರ ಕಲ್ಯಾಣ ಮಾಡುವುದಾಗಲಿ, ದೇಶಹಿತ ಮಾಡುವುದಾಗಲಿ ಸಾಧ್ಯವಿಲ್ಲ ನೀವು ಯಾರ ಹಿತ ಬಯಸುವಿರೊ ಅವರೊಡನೆ ಸಮರಸವಾಗುವಲ್ಲಿ ಬರುವ ಕಷ್ಟವನ್ನು ಎದುರಿಸಬೇಕು ಬುದ್ಧಿ, ವಿವೇಚನೆ, ಧರ್ಮ, ಕರ್ಮ, ಇವುಗಳಲ್ಲಿ ನೀವು ಬಹಳ ಮುಂದುವರಿದರೆ, ನೀವು ಅವರ ಮಟ್ಟಕ್ಕೆ ಇಳಿಯಲಾರಿರಿ, ಅವರು ನಿಮ್ಮ ಮಟ್ಟಕ್ಕೆ ಬರಲಾರರು ಈಗ ಇಷ್ಟಕ್ಕೇ ನಿಲ್ಲಿಸೋಣ ಸಂಜೆಯಾಗುತ್ತ ಬಂದಿತು ಸಾಲೆಯ ಕೆಲಸವನ್ನು ಸ್ವಲ್ಪ ಮುಗಿಸಬೇಕಾಗಿದೆ "

" ಹಾಗೆಯೇ ಆಗಲಿ ನಾನು ನಾಳೆ ಇನ್ನೊಮ್ಮೆ ಬರುತ್ತೇನೆ "ಎಂದು ಕೇಶವ ಹೊರಡಲು ಎದ್ದು ನಿಂತೊಡನೆಯೆ ವೃಂದಾವನ ಅವನ ಪಾದಸ್ಪರ್ಶ ಮಾಡಿ ಪಾದಧೂಳಿಯನ್ನು ಹಣೆಗೆ ಹಚ್ಚಿಕೊಂಡ

ಕೇಶವನ ಮನೆ ಹಳ್ಳಿಯಲ್ಲಿದ್ದರೂ ಅವನು ಪಟ್ಟಣವಾಸಿ ತನ್ನ ಸ್ನೇಹಿತನ ಈ ನಡತೆಯಿಂದ ಕೇಶವನಿಗೆ ಬಹಳ ಸಂಕೋಚವಾಯಿತು ಇಬ್ಬರೂ ಸಾಲೆಯ ಅಂಗಳಕ್ಕೆ ಬಂದೊಡನೆ ಹುಡುಗರೆಲ್ಲ ಸಾಷ್ಟಾಂಗ ಹಾಕಿದರು

ತನ್ನ ಬಾಲ್ಯಮಿತ್ರನನ್ನು ಬಾಗಿಲ ವರೆಗೆ ಕಳಿಸಿ ವೃಂದಾವನ ಮೆಲ್ಲಗೆ " ನೀನು ಮಿತ್ರನಾದರೂ ಬ್ರಾಹ್ಮಣ ಆದುದರಿಂದ ನನ್ನ ಪರವಾಗಿಯೂ ಬಾಲಕರ ಪರವಾಗಿಯೂ ನಿನಗೆ ವಂದನೆ ತಿಳಿಯಿತೆ ? " ಎಂದ

ಕೇಶವ ನಾಚಿಕೆ ಬೆರೆತ ನಗೆಯಿಂದ " ಓಹೋ, ತಿಳಿಯಿತು" ಎಂದು ಮೆಲ್ಲ-ಮೆಲ್ಲಗೆ ಹೊರಟು ಹೋದ

ಮರುದಿನ ಮುಂಜಾನೆ ಕೇಶವ ಬಂದು ಎಂದ- " ಬಂಧು ವೃಂದಾವನ, ನೀನು ನಿಜವಾಗಿಯೂ ಯೋಗ್ಯ ಮನುಷ್ಯನೆಂಬುದರಲ್ಲಿ ಸಂದೇಹವಿಲ್ಲ."

ವೃಂದಾವನ ನಗುತ್ತ " ನನಗಾದರೂ ಎಲ್ಲಿದೆ ಸಂದೇಹ ? ಮುಂದೆ ?" ಎಂದ

" ಬಂಧು, ನಾನು ಈಗ ಹೇಳುವುದು ಉಪದೇಶವಲ್ಲ. ನನ್ನ ಆ

ಹೆಮ್ಮೆ ನಿನ್ನೆಯೆ ಇಳಿಯಿತು ಈಗ, ಒಬ್ಬ ಗೆಳೆಯನಾಗಿ ನಮ್ರತೆಯಿಂದ ಒಂದು ಮಾತನ್ನು ಕೇಳುವೆ ಹಣವನ್ನೂ ವೇಳೆಯನ್ನೂ ಕಳೆದುಕೊಂಡು ನೀನು ಮಕ್ಕಳಿಗೆ ಶಿಕ್ಷಣ ಕೊಡುತ್ತಿರುವೆ ಆದರೂ ನಮ್ಮ ದೇಶದಲ್ಲಿ ಅಕ್ಷರ ಕಲಿಸುವ ವ್ಯವಸ್ಥೆ ಕೂಡ ಇಲ್ಲದ ಸಾವಿರಾರು ಹಳ್ಳಿಗಳಿವೆ ಈ ಕೆಲಸವನ್ನು ಸರಕಾರವು ಮಾಡಬಾರದೆ ? ”

ವೃಂದಾವನ ನಕ್ಕು ನುಡಿದ-“ನಿನ್ನ ಪ್ರಶ್ನೆ ಮಗುವಿನ ಪ್ರಶ್ನೆಯಂತೆಯೆ ಇದೆ ತಪ್ಪು ಮಾಡಿದ ರಾಧೆಯನ್ನು ಹೊಡೆಯಲು ಕೈಯೆತ್ತಿದಾಗ ಅವಳು ‘ ಮಾಧವನೂ ತಪ್ಪು ಮಾಡಿದ್ದಾನೆ ’ ಎಂದು ಮಾಧವನ ತಪ್ಪನ್ನು ತೋರಿಸಿದರೆ ಅವಳ ತಪ್ಪು ದಕ್ಕಬಹುದೆ ? ನಮ್ಮ ದೇಶದಲ್ಲಿ ಎಲ್ಲೆಲ್ಲಿಯೂ ಹಬ್ಬಿದ ಮೂಢತನವನ್ನು ಮೊದಲು ನಿವಾರಿಸೋಣ ಸರಕಾರವು ತನ್ನ ಕರ್ತವ್ಯವನ್ನು ಮಾಡುವುದೊ ಇಲ್ಲವೊ ಎಂಬುದನ್ನು ಆಮೇಲೆ ನೋಡೋಣ. ತನ್ನ ಕರ್ತವ್ಯ ನೆರವೇರಿಸುವುದನ್ನು ಬಿಟ್ಟು ಬೇರೆಯವರ ಕರ್ತವ್ಯವನ್ನು ಕುರಿತು ಮಾತನಾಡುವುದು ತಪ್ಪು ಎಂದು ನನ್ನ ತಿಳಿವಳಿಕೆ ”

“ ಆದರೆ ನಮ್ಮ ನಿಮ್ಮ ಯೋಗ್ಯತೆಯಾದರೂ ಎಷ್ಟು ? ಈ ಪುಟ್ಟ ಸಾಲೆಯಲ್ಲಿ ಕೆಲವೇ ಹುಡುಗರಿಗೆ ಕಲಿಸುವುದರಿಂದ ಎಷ್ಟು ಸುಧಾರಣೆಯಾದೀತು ? ”

ವೃಂದಾವನ ಸ್ವಲ್ಪ ಹೊತ್ತು ಅಚ್ಚರಿಯಿಂದ ನೋಡುತ್ತಿದ್ದು ಆಮೇಲೆ ಎಂದ— “ ಹಾಗಲ್ಲ ಅಣ್ಣಾ, ನಿನ್ನ ಈ ಮಾತು ಸರಿಯಾದುದಲ್ಲ ನಮ್ಮ ಸಾಲೆಯ ಒಬ್ಬನೇ ಒಬ್ಬ ಹುಡುಗನು ಮನುಷ್ಯನಾದರೆ ಸಾಕು, ಅವನಿಂದ ಈ ಮೂವತ್ತು ಕೋಟಿ ಜನರ ಉದ್ಧಾರವಾಗಬಹುದು ನ್ಯೂಟನ್, ಫೆರಡೆ, ರಾಮಮೋಹನ, ವಿದ್ಯಾಸಾಗರರಂತಹರು ಬಹುಮಂದಿ ತಯಾರಾಗುವುದಿಲ್ಲ ಒಬ್ಬ ಹುಡುಗನನ್ನಾದರೂ ಮನುಷ್ಯನನ್ನಾಗಿ ಮಾಡಿ ಸಾಯುವಂತೆ ನನ್ನನ್ನು ಆಶೀರ್ವದಿಸು ಇನ್ನೊಂದು ಮಾತು— ಈ ಸಾಲೆಯಲ್ಲಿ ಒಂದು ನಿಯಮವಿದೆ ನೀನು ಇಲ್ಲಿ ನಿನ್ನೆ ಸಾಯಂಕಾಲದ ಬಳಿಕ ಇದ್ದಿದ್ದರೆ ನೋಡುತ್ತಿದ್ದೆ ಪ್ರತಿಯೊಬ್ಬ ಹುಡುಗನೂ ತಾನು ದೊಡ್ಡವನಾದ ಬಳಿಕ ಕನಿಷ್ಟ ಇಬ್ಬರು ಮಕ್ಕಳಿಗಾದರೂ ಓದು-ಬರಹ ಕಲಿಸುವೆನೆಂದು ನಿತ್ಯ ಮನೆಗೆ ಹೋಗುವ ಮೊದಲು ಪಣ ತೊಡುತ್ತಾನೆ ನಮ್ಮ ಸಾಲೆಯ ಒಬ್ಬ ಹುಡುಗನಾದರೂ ದೊಡ್ಡವನಾದ ಬಳಿಕ ತನ್ನ ಪ್ರತಿಜ್ಞೆಯನ್ನು ಪೂರ್ಣಮಾಡಲು

ಶಕ್ತನಾದರೆ, ಈ ದೇಶದಲ್ಲಿ, ಹತ್ತಿಪ್ಪತ್ತು ವರ್ಷಗಳಲ್ಲಿ ಒಬ್ಬ ಹುಡುಗನೂ ಮೂರ್ಖನಾಗಿ, ನಿರಕ್ಷರಿಯಾಗಿ, ಉಳಿಯಲಾರನೆಂಬುದನ್ನು ಲೆಕ್ಕಹಾಕಿ ನೋಡಿದ್ದೇನೆ ಕೇಶವ! ''

ಕೇಶವನು ಉಸಿರೆಳೆದುಕೊಳ್ಳುತ್ತ— " ಅಬ್ಬ! ಎಂತಹ ಮಹತ್ತರ ಆಸೆ! " ಎಂದ

" ಹೌದು, ನೀನು ಹೀಗೆ ತಿಳಿಯಬಹುದು ಒಮ್ಮೊಮ್ಮೆ ನನಗೇ ' ಯೋಗಬಲವಿಲ್ಲದ, ಅಸಾಧ್ಯವಾದ ಆಸೆ ಇದು ' ಎಂದೆನಿಸುವುದು, ಮತ್ತೊಮ್ಮೆ ' ಪರಮಾತ್ಮನ ಕೃಪಾದೃಷ್ಟಿ ಇದ್ದರೆ ಈ ಆಸೆ ಪೂರ್ಣವಾಗುವುದು ದೊಡ್ಡ ಮಾತೇನು ? ' ಎಂದೂ ಎನಿಸುವುದು ''

" ವೃಂದಾವನ, ನಾನು ಪರದೇಶಕ್ಕೆ ಇಂದೇ ಹೊರಡಬೇಕಾಗಿದೆ ನಮ್ಮ ಬೆಟ್ಟಿ ಇನ್ನೆಂದಾಗುವುದೊ ದೇವರೆ ಬಲ್ಲ ನಿನಗೆ ಬರೆದರೆ ಉತ್ತರ ಕೊಡುವೆಯಲ್ಲವೆ ? ''

" ಇದು ಯಾವ ದೊಡ್ಡ ಮಾತು ಕೇಶವ ? ''

" ದೊಡ್ಡ ಮಾತೇ ಸರಿ ಎಂದಾದರೂ ನಿನಗೆ ಈ ಮಿತ್ರನ ಅವಶ್ಯಕತೆಯುಂಟಾದರೆ ನನ್ನನ್ನು ಸ್ಮರಿಸುವೆಯಲ್ಲವೆ ? ''

" ಅವಶ್ಯವಾಗಿ " ಎಂದು ವೃಂದಾವನ ತಲೆಬಾಗಿಸಿ ಕೇಶವನ ಪಾದ ಧೂಳಿಯನ್ನು ಹಣೆಗೆ ಹಚ್ಚಿಕೊಂಡ

## ೧೧

ವೃಂದಾವನನ ತಾಯಿ ದೇವರ ತೊಟ್ಟಿಲುತ್ಸವವನ್ನು ಬಹಳ ವಿಜೃಂಭಣೆಯಿಂದ ನೆರವೇರಿಸುತ್ತಿರುತ್ತಾಳೆ. ಆ ಉತ್ಸವ ನಿನ್ನೆ ರಾತ್ರಿಯೆ ಮುಗಿಯಿತು ವೃಂದಾವನ ಬಹಳ ದಣಿದುದರಿಂದ ಬಹಳ ಹೊತ್ತಾದರೂ ಎದ್ದಿಲ್ಲ ತಾಯಿ ಕೋಣೆಯ ಹೊರಗಿನಿಂದಲೇ ಕೂಗಿ " ವೃಂದಾವನ, ಬೇಗ ಎದ್ದು ಸ್ವಲ್ಪ ಹೊರಗೆ ಬಾರಪ್ಪ " ಎಂದಳು

ತಾಯಿ ಇಷ್ಟು ಗಾಬರಿಯಿಂದ ಕೂಗುವುದನ್ನು ಕೇಳಿ ವೃಂದಾವನ ಎದ್ದು ಕುಳಿತು " ಏನಮ್ಮ ? " ಎಂದ

ತಾಯಿ ಬಾಗಿಲು ತೆರೆದು ಒಳಗೆ ಬಂದು "ಮಗೂ, ನನಗಂತೂ ಪರಿಚಯವಿಲ್ಲ, ನಿನ್ನ ಸಾಲೆಯ ಒಬ್ಬ ಹುಡುಗ ಹೊರಗೆ ಕುಳಿತುಕೊಂಡು ಬಹಳ ಅಳುತ್ತಿದ್ದಾನೆ ಅವನ ತಂದೆಗೆ ವಾಂತಿ-ಭೇದಿ ಬಹಳವಾಗಿ ಕುಳಿತು ಕೊಳ್ಳಲೂ ಬರುವುದಿಲ್ಲವಂತೆ" ಎಂದಳು

ವೃಂದಾವನ ಕೂಡಲೇ ಹೊರಗೆ ಬಂದ ಗೌಳಿಗರ ಶಿವಪ್ಪನ ಮಗನು ವೃಂದಾವನನನ್ನು ನೋಡಿ ಅಳುತ್ತ "ಪಂಡಿತರೆ, ಅಪ್ಪ ಕಣ್ಣು ತೆರೆದು ನೋಡುವುದೂ ಇಲ್ಲ, ಮಾತನಾಡುವುದೂ ಇಲ್ಲ" ಎಂದ

ವೃಂದಾವನ ಸ್ನೇಹಪೂರ್ಣವಾಗಿ ಅವನ ಕಂಬನಿ ಒರೆಸಿ ಕೈಹಿಡಿದು ಕೊಂಡು ಅವನ ಮನೆಗೆ ಹೊದ

ಶಿವಪ್ಪನ ಕೊನೆಗಾಲ ಸಮೀಪಿಸಿದೆ ಪ್ರತಿ ವರ್ಷ ಈ ದಿನಗಳಲ್ಲಿ ಮಾರೀಬೇನೆ ಹಬ್ಬುವುದು ವಾಡಿಕೆ ಈ ವರ್ಷ ಮೊಟ್ಟಮೊದಲು ಅದರ ದವಡೆಯಲ್ಲಿ ಸಿಕ್ಕಿದವನು ಶಿವಪ್ಪ ನಿನ್ನೆ ರಾತ್ರಿಯೆ ಅವನು ಹಾಸಿಗೆ ಹಿಡಿ ದಿದ್ದು ಈ ವರೆಗೆ ಏನೂ ಚಿಕಿತ್ಸೆ ನಡೆದಿರಲಿಲ್ಲ ವೃಂದಾವನ ಬಂದ ಸ್ವಲ್ಪ ಹೊತ್ತಿನ ಮೇಲೆ ಅವನ ಉಸಿರು ಹೊರಟುಹೋಯಿತು

ಬಹುಶಃ ಬಂಗಾಲದ ಪ್ರತಿಯೊಂದು ಹಳ್ಳಿಯಲ್ಲಿ, ಮನೆಯೊಳಗಿನ ಓದಿನಿಂದಲೇ ತಯಾರಾದ ಒಬ್ಬೊಬ್ಬ ವೈದ್ಯನಿದ್ದೇ ಇದ್ದಾನೆ ಈ ಊರಿ ನಲ್ಲಿಯೂ ಅಂತಹರೊಬ್ಬರಿದ್ದಾರೆ ಅವರೇ ಡಾಕ್ಟರ್ ಗೋಪಾಲರು ನಿನ್ನೆ ರಾತ್ರಿ ಅವರನ್ನು ಕರೆಯಹೋದರೆ ಮಾರೀಬೇನೆಯ ಹೆಸರು ಕೇಳಿ ಮುಂಗಡವಾಗಿ ಎರಡು ರೂಪಾಯಿ ಶುಲ್ಕ ಕೇಳಿದರು ಇಂತಹ ರೋಗ ಗಳಿಗೆ ಔಷಧವನ್ನು ಕಡವಾಗಿ ಕೊಟ್ಟರೆ ಅದನ್ನು ನುಂಗಿದ ರೋಗಿ ಹಣ ವನ್ನು ಕೊಡಲು ಮರುದಿನ ಬದುಕಿ ಉಳಿಯುವುದಿಲ್ಲವೆಂಬುದು ಈ ವೈದ್ಯರ ದೀರ್ಘ ಅನುಭವ ಶಿವಪ್ಪನ ಹೆಂಡತಿ ಆ ಕಟ್ಟಿರುಳಿನಲ್ಲಿ ಎರಡು ರೂಪಾಯಿಗಳನ್ನು ತರುವುದೆಲ್ಲಿಂದ ? ಆದುದರಿಂದ ಅವಳು ರಾತ್ರಿಯೆಲ್ಲ ಅವನ ಬಳಿಯಲ್ಲಿ ಕುಳಿತು ಬೇನಿಗನಿಗೆ ಉಪ್ಪಿನ ನೀರನ್ನೇ ಕುಡಿಸಿ, ತನ್ನ ಸ್ವಾಮಿಯ ಕೊನೆಗಾಲದ ಸೇವೆ ಮಾಡುತ್ತ, ಮಾರೀಮಾತೆಯ ಕೃಪೆಗಾಗಿ ಪ್ರಾರ್ಥಿಸುತಿದ್ದಳು ಅಲ್ಲಿಗೆ ಬೆಳಗಾಯಿತು

ವೃಂದಾವನ ದೊಡ್ಡ ಮನುಷ್ಯ. ಊರಿನ ಜನರೆಲ್ಲ ಅವನು ಹೇಳಿದಂತೆ ಕೇಳುವರು. ತನ್ನ ಪತಿಯ ಅಂತ್ಯಕ್ರಿಯೆಯನ್ನು ಮಾಡಿಸಲು ಶಿವಪ್ಪನ

ಹೆಂಡತಿ ವೃಂದಾವನನ ಮರೆಹೊಕ್ಕು ಅಳತೊಡಗಿದಳು. ಶಿವಪ್ಪನ ಸಂಪತ್ತೆಂದರೆ ಅರಿಹೊಟ್ಟೆ, ಪೂರ್ಣ ಉಪವಾಸದಿಂದ ಉಳಿದ ತನ್ನ ಬಡಕಲು ದೇಹ, ಎರಡು ಆಕಳು ಈಗ ಈ ಕುತ್ತಿನಿಂದ ಬದುಕಲು ಅವಳು ಆಕಳನ್ನು ಅಡುವಿಡುವುದು ಮಾತ್ರ ಸಾಧ್ಯವಿತ್ತು ಯಾರಿಂದಲೂ ಯಾವ ಒಡವೆಯನ್ನೂ ಪಡೆಯದೆ ವೃಂದಾವನ ಈ ವರೆಗೆ ಅದೆಷ್ಟೋ ಜನರ ಅಂತ್ಯ ಕ್ರಿಯೆಗಳನ್ನು ಮಾಡಿಸಿದ್ದಾನೆ ಹಾಗೆಯೆ, ಇಂದು ಶಿವಪ್ಪನ ಅಂತ್ಯ ಕರ್ಮವನ್ನೂ ಮಾಡಿಸಿ ಮಧ್ಯಾಹ್ನ ಅವನು ಮನೆಗೆ ಬಂದ

ಸಾಯಂಕಾಲವಾಗಿದೆ. ವೃಂದಾವನ ಇನ್ನೂ ಚಂಡೀಮಂಟಪದ ಹೊರವಲಯದಲ್ಲಿ ಒಂದು ಚಾಪೆಯ ಮೇಲೆ ಕಣ್ಣು ಮುಚ್ಚಿಕೊಂಡು ಮಲಗಿದ್ದಾನೆ ಯಾರದೋ ಹೆಜ್ಜೆಯ ಸಪ್ಪಳವನ್ನು ಕೇಳಿದಂತಾಗಿ ಕಣ್ದೆರೆದು ನೋಡಿದರೆ ಬಳಿಯಲ್ಲಿ ಅದೇ ಶಿವಪ್ಪನ ಮಗನು ನಿಂತಿದ್ದಾನೆ

" ಬಾ, ಕುಳಿತುಕೊ ಷಷ್ಟೀಚರಣ ! "

ಹುಡುಗ ಒಂದೆರಡು ಸಲ ತುಟಿಯಲ್ಲಾಡಿಸಿ " ಪಂಡಿತರೆ " ಎಂದು ಅಳತೊಡಗಿದ ಅವನು ಅಳುತ್ತಳುತ್ತ " ಕೃಷ್ಣನೂ ಕಾರಿಕೊಳ್ಳುತ್ತಿದ್ದಾನೆ " ಎಂದ.

ಕೃಷ್ಣ ಅವನ ತಮ್ಮ ಅವನೂ ಅಣ್ಣನೊಂದಿಗೆ ಆಗಿಂದಾಗ ಸಾಲೆಗೆ ಬರುತ್ತಿದ್ದ. ಆ ರಾತ್ರಿ ಮುಂಗಡ ಹಣ ಕೇಳದೆ ಗೋಪಾಲ ವೈದ್ಯರು ವೃಂದಾವನನೊಂದಿಗೆ ಕೃಷ್ಣನನ್ನು ನೋಡುವುದಕ್ಕೆ ಶಿವಪ್ಪನ ಮನೆಗೆ ಹೋದರು ವೈದ್ಯರು ನಾಡಿ ನೋಡಿದರು, ನಾಲಗೆ ನೋಡಿದರು, ಔಷಧ ಕೊಟ್ಟರು ಆದರೆ ತನ್ನ ತಾಯಿಯ ಹೃದಯದ್ರಾವಕವಾದ ಅಳುವಿನ ಕಡೆಗೆ ಕೃಷ್ಣನು ಗಮನವೀಯಲಿಲ್ಲ, ಕೈಗುಣದಲ್ಲಿ ಹೆಸರಾದ ಗೋಪಾಲ ವೈದ್ಯರಿಗೆ ಅಪಯಶಸ್ಸನ್ನು ತಂದು ಬೆಳಗಾಗುವ ಮೊದಲೇ ತನ್ನ ತಂದೆಯ ಬಳಿಗೆ ಹೊರಟು ಹೋದ.

ತನ್ನ ಮೃತಪುತ್ರನನ್ನು ತೊಡೆಯ ಮೇಲಿರಿಸಿಕೊಂಡು ತಾಯಿಯು ಗೋಳಿಡುವುದನ್ನು ಕಂಡು ವೃಂದಾವನನ ಎದೆ ಬಿರಿಯಿತು ಅವನಿಗೂ ಒಬ್ಬ ಮಗನಿದ್ದಾನೆ ಈ ನೆನಪಿನಿಂದ ಅವನ ಸಹನೆ ಮೀರಿ ಕೂಡಲೇ ಮನೆಗೆ ಓಡಿಬಂದು ಚರಣನನ್ನು ತಬ್ಬಿಕೊಂಡು ಅಳತೊಡಗಿದ ಅವನು ತನ್ನ ಅಂತರಾತ್ಮನ ಕಡೆಗೆ ನೋಡುತ್ತ ನೂರಾರು ಸಲ ಮನದಲ್ಲಿಯೆ ಎಂದುಕೊಂಡ—

“ ದೇವಾ ! ತಪ್ಪು ಮಾಡಿದುದಕ್ಕಾಗಿ ಮನುಷ್ಯನಿಗೆ ಬೇಕಾದ ಶಿಕ್ಷೆಯನ್ನಾದರೂ ಕೊಡು. ಆದರೆ ಈ ಶಿಕ್ಷೆ ಮಾತ್ರ ಬೇಡ ” ಪರಮಾತ್ಮನು ಅವನ ಬಿನ್ನಹವನ್ನು ಕೇಳಿದನೊ ಇಲ್ಲವೊ ಗೊತ್ತಿಲ್ಲ ಆದರೆ– “ಈ ಆಘಾತವನ್ನು ಸಹಿಸುವ ಶಕ್ತಿ ಉಳಿದವರಲ್ಲಿ ಇದ್ದರೂ ಇರಬಹುದು, ತನ್ನಲ್ಲಿ ಮಾತ್ರ ಇಲ್ಲ” ಎಂಬ ಮಾತು ಅವನಿಗೆ ಖಂಡಿತವಾಗಿ ತಿಳಿಯಿತು

ಆ ಮೇಲೆ ಎರಡು ದಿನ ಸಂದುವು. ಮೂರನೆಯ ದಿನ ನಸುಕಿನಲ್ಲೇ ನೆರೆಹೊರೆಯವನಾದ ರಸಿಕ ಹಲವಾಯಿಯ ಹೆಂಡತಿಗೆ ಮಾರೀಬೇನೆಯೆಂದೂ ಅವನಿಗೆ ಸುದ್ದಿ ಬಂದಿತು

ವೃಂದಾವನನ ತಾಯಿ ರೋಗಿಯನ್ನು ನೋಡಲು ಹೋಗಿದ್ದಳು. ಹತ್ತು ಗಂಟೆಯ ಸುಮಾರಿಗೆ ಅವಳು ಕಣ್ಣೊರೆಸಿಕೊಳ್ಳುತ್ತ ಹಿಂದಿರುಗಿದಳು. ಸ್ವಲ್ಪ ಹೊತ್ತಿನಲ್ಲಿ ಆ ಕಡೆಯಿಂದ ಬೊಬ್ಬೆ ಹಾಕುತ್ತಿರುವುದು ಕೇಳಬಂದಿತು. ಅದರೊಂದಿಗೆ, ರಸಿಕನ ಹೆಂಡತಿ ತನ್ನ ಐದಾರು ಚಿಕ್ಕ ಮಕ್ಕಳನ್ನು ಬಿಟ್ಟು ಪರಲೋಕಕ್ಕೆ ತೆರಳಿದಳೆಂದೂ ತಿಳಿದುಬಂದಿತು

ಈಗ ಊರಿನಲ್ಲೆಲ್ಲ ಮಾರೀಬೇನೆಯ ಪ್ರಕೋಪ ಪ್ರಾರಂಭವಾಯಿತು. ಅನುಕೂಲವಿದ್ದವರೆಲ್ಲ ಊರುಬಿಟ್ಟು ಓಡಿದರು ಆದರೆ ಅನುಕೂಲವಿಲ್ಲದ ಜನರೇ ಬಹಳ ಅವರು ಧೈರ್ಯ-ಭಯಗಳ ನಡುವೆ ಉಯ್ಯಾಲೆಯಾಡುತ್ತ ಒಣಗಿದ ನಾಲಗೆಯಿಂದ “ ಇಲ್ಲಿಯ ಅನ್ನದ ಋಣ ಮುಗಿಯಿತೆಂದರೆ ಎಲ್ಲಿ ಓಡಿ ತಾನೆ ಏನು ಪ್ರಯೋಜನ ? ” ಎಂದುಕೊಂಡು ಸುಮ್ಮನಾದರು

ವೃಂದಾವನನ ಮನೆಯ ಎದುರಿನ ದಾರಿಯೆ ಊರಿಗೆಲ್ಲ ದೊಡ್ಡದು. ಆ ದಾರಿಯಿಂದ ಕೇಳಬರುತ್ತಿದ್ದ “ ನಾರಾಯಣ, ನಾರಾಯಣ ” ಎಂಬ ನಾಮಸ್ಮರಣೆಯಿಂದ, ಈ ಲೋಕದಿಂದ ಬಹುಜನರು ಮುಕ್ತರಾದರೆಂದು ಗೊತ್ತಾಗುತ್ತಿದ್ದಿತು.

ಈಬೇನೆ ಸುತ್ತುಮುತ್ತಲಿನ ಹಳ್ಳಿಗಳಲ್ಲಿಯೂ ಹಬ್ಬಿದ ಸುದ್ದಿ ಬಂದಿತು. ಆದರೆ ಬಾಡಾಲಿನ ಸ್ಥಿತಿಮಾತ್ರ ದಿನದಿನಕ್ಕೂ ಉಗ್ರವಾಗತೊಡಗಿತು ಉಳಿದ ಎಲ್ಲ ರೀತಿಯಿಂದಲೂ ಈ ಊರಿನ ಸ್ಥಿತಿ ಚೆನ್ನಾಗಿದ್ದರೂ ಕುಡಿಯುವ ನೀರಿನ ವ್ಯವಸ್ಥೆ ಚೆನ್ನಾಗಿರಲಿಲ್ಲ ಈ ಬೇನೆ ಹಬ್ಬಲು ಇದೇ ಮುಖ್ಯಕಾರಣ.

ಈ ಊರಿಗೆ ನದಿಯ ಅನುಕೂಲತೆ ಇಲ್ಲ ಇದ್ದ ಮೂರು ನಾಲ್ಕು ಕೆರೆಗಳು ಬಳಸದಿದ್ದುದರಿಂದ ನೀರು ಕೆಟ್ಟುಹೋಗಿದೆ. ಅವುಗಳ ದುರ್ದೆಸೆಯು

ಕಡೆಗೆ ಯಾರೂ ಗಮನ ಕೊಡುತ್ತಿಲ್ಲ ಬೇಯಿಸುವ, ಬಾಯಾರಿಕೆ ಇಂಗಿಸುವ ಶಕ್ತಿ ನೀರಿನಲ್ಲಿರುವ ವರೆಗೆ ಅದರ ಒಳಿತು - ಕೆಡುಕನ್ನು ನೋಡುವ ಅಗತ್ಯವಿಲ್ಲವೆಂಬುದೇ ಬಹು ಜನ ಹಳ್ಳಿಗರ ತಿಳಿವಳಿಕೆ

ಇತ್ತ ಗೋಪಾಲ ವೈದ್ಯರನ್ನು ಬಿಟ್ಟರೆ ಬೇರೆ ಚಿಕಿತ್ಸಕರೂ ಇಲ್ಲ ಅವರಿಗೆ ಬಡವರ ಮನೆಗೆ ಹೋಗಲು ಹೊತ್ತೇ ಸಿಗುತ್ತಿರಲಿಲ್ಲ ಬೇನೆಯೊ, ದಿನದಿನಕ್ಕೆ ಹೆಚ್ಚುತ್ತ ನಡೆದಿದೆ ಬರಬರುತ್ತ ಔಷಧೋಪಚಾರದ ಮಾತು ಹಾಗಿರಲಿ, ಮೃತಶರೀರಗಳ ಅಗ್ನಿ ಸಂಸ್ಕಾರ ಮಾಡುವುದೂ ಸಾಧ್ಯವಾಗ ದಂತಾಯಿತು

ಹಾಗಿದ್ದರೂ ವೃಂದಾವನನ ಬೀದಿ ಇದು ವರೆಗೆ ಕ್ಷೇಮವಾಗಿದ್ದಿತು ರಸಿಕನ ಹೆಂಡತಿಯ ಹೊರತು ಈ ಆರೆಂಟು ಮನೆಗಳಲ್ಲಿ ಮೃತ್ಯುವಿನ ಪ್ರವೇಶವಾಗಿರಲಿಲ್ಲ

ವೃಂದಾವನನ ತಂದೆ ತಮ್ಮ ಉಪಯೋಗಕ್ಕಾಗಿ ಕಟ್ಟಿಸಿದ ಕೆರೆಯ ನೀರು ಇನ್ನೂ ಕೆಟ್ಟಿರಲಿಲ್ಲ ಆ ಪೇಟೆಯವರು ಈ ಕೆರೆಯ ನೀರನ್ನೆ ಬಳಸು ತಿದ್ದುದರಿಂದಲೋ ಏನೊ, ಇದು ವರೆಗೆ ಕ್ಷೇಮವಾಗಿದ್ದರು

ಆದರೆ ವೃಂದಾವನ ದಿನದಿನಕ್ಕೆ ಚಿಂತೆಯಿಂದ ಕಡ್ಡಿಯಾಗತೊಡಗಿದ ಮಗುವಿನ ಮುಖವನ್ನು ನೋಡುತ್ತಲೆ ಅವನ ಎದೆಯ ನೆತ್ತರು ಚಿಮ್ಮುತಿದ್ದಿತು ತಾನೂ ಮಗುವೂ ಯಾವುದೊ ಒಂದು ಅವ್ಯಕ್ತ ಅಭೇದ್ಯ ಕಾರಣ ದಿಂದ ದೂರವಾಗುತ್ತಿರುವುದಾಗಿ ಅವನಿಗೆ ಭಾಸವಾಗತೊಡಗಿತು ಅವ ನಲ್ಲಿ ಈಗ ಆ ಸಾಹಸವಿಲ್ಲ, ರೋಗದ, ಸಾವಿನ, ಹೆಸರು ಕೇಳಿದೊಡನೆಯೆ ಅವನು ನಡುಗುತ್ತಾನೆ ಕರೆಯಲು ಯಾರಾದರೂ ಬಂದರೆ ತಪ್ಪದೆ ಹೋಗು ತ್ತಾನೆ, ಆದರೆ ಅವನ ಹೆಜ್ಜೆಗೂ ನ್ಯಾಯಾಲಯಕ್ಕೆ ಹೋಗುವ ಅಪರಾಧಿಯ ಹೆಜ್ಜೆಗೂ ವ್ಯತ್ಯಾಸವೇ ಇಲ್ಲ ಅವನು ಅತ್ತ ಕಡೆಗೆ ಹೋಗುವುದು ಬಹಳ ದಿನಗಳ ರೂಢಿಯಿಂದ ಯಾವುದೊಂದು ಶವಸಂಸ್ಕಾರಕ್ಕೆ ಹೋದವನು ಮರಳಿದೊಡನೆಯೆ ವೃಂದಾವನ ಚರಣನನ್ನು ಬರಸೆಳೆದು ತಬ್ಬಿಕೊಳ್ಳುತ್ತಿದ್ದ. ಆಗ ಅವನ ಮೈಯೆಲ್ಲವೂ ನಡುಗುತಿದ್ದಿತು ಮನೆಯ ಬೆಳಕಾದ ಮಗನ ಶರೀರದಲ್ಲಿ ತನಗೆ ತಿಳಿಯದಂತೆಯೆ ಸುಂಕರೋಗದ ಬೀಜ ಬಿತ್ತುತ್ತಿರುವು ದಾಗಿ ಅವನಿಗೆ ಎನಿಸತೊಡಗಿತು ಬಾಹ್ಯ ಸಂಸರ್ಗಗಳಿಂದಲೂ ಸಾವಿನಿಂದಲೂ ತನ್ನ ಚರಣನನ್ನು ಕಾಪಾಡುವುದು ಹೇಗೆ ಎಂಬ ಚಿಂತೆಯೆ ಅವನನ್ನು ಯಾವಾಗಲೂ ಕೊರೆಯುತಿದ್ದಿತು

ಸಾಲೆ ತನ್ನಿಂದ ತಾನೆ ನಿಂತುಹೋಯಿತು ಅತ್ತ ಲಕ್ಷ್ಯಕೊಡದಷ್ಟು ಚಿಂತೆ ಅವನಿಗೆ ಚರಣನ ವಿಷಯದಲ್ಲಿ ಉಂಟಾಯಿತು ಈಗ ಹಲವು ದಿನ ಗಳಿಂದ ಚರಣನ ಸ್ನಾನ-ಪಾನ, ಬಟ್ಟೆ-ಬರೆ, ಊಟ-ನಿದ್ದೆ, ಈ ಎಲ್ಲ ಹೊಣೆಯನ್ನು ವೃಂದಾವನನೇ ಹೊತ್ತಿದ್ದಾನೆ ಈ ವಿಷಯದಲ್ಲಿ ಅವನಿಗೆ ತಾಯಿಯ ಮೇಲೆಯೂ ಅಷ್ಟು ವಿಶ್ವಾಸ ಉಳಿದಿಲ್ಲವೊ ಏನೊ! ಅಷ್ಟರಲ್ಲಿ ನೆರೆ-ಮನೆಯ ತಾರಿಣಿ ಮುಖೋಪಾಧ್ಯಾಯರ ಮಗನಿಗೆ ಮಾರೀಬೇನೆ ಬಂದಿದೆಯೆಂದು ಅವನಿಗೆ ತನ್ನ ತಾಯಿಯಿಂದ ತಿಳಿಯಿತು ಈ ಸುದ್ದಿ ಯಿಂದ ವೃಂದಾವನನ ಮುಖ ಕಪ್ಪಿಟ್ಟಿತು ಇದನ್ನು ಕಂಡು ಅವನ ತಾಯಿ "ಸಾಕು ಮಗೂ, ಇನ್ನು ನೀನು ಚರಣನನ್ನು ಕರೆದುಕೂಂಡು ಬೇರೆ ಊರಿಗೆ ಹೋಗುವುದೊಳಿತು" ಎಂದಳು

ವೃಂದಾವನನಿಗೆ ದುಃಖ ಉಕ್ಕಿ ಬಂದಿತು "ನೀನೂ ನಡೆಯಮ್ಮಾ" ಎಂದನವನು

ತಾಯಿ ಅಚ್ಚರಿಗೊಂಡು "ದೇವರನ್ನು ಬಿಟ್ಟು?" ಎಂದಳು

"ದೇವರ ಪೂಜೆಗೆ ಪೂಜಾರಿ ಇಲ್ಲವೆ?"

ತಾಯಿ ಇನ್ನೂ ಆಶ್ಚರ್ಯದಿಂದ "ನನ್ನ ದೇವರ ಸೇವೆಯ ಭಾರ ವನ್ನು ಇನ್ನೊಬ್ಬರ ಮೇಲೆ ಹೊರಿಸಿ ನಾನು ಓಡಿ ಹೋಗಲೊ?" ಎಂದಳು

ವೃಂದಾವನ ಸ್ವಲ್ಪ ನಾಚಿಕೆಯಿಂದ "ಹಾಗಲ್ಲಮ್ಮ, ನಿನ್ನ ಭಾರ ನಿನ್ನ ಮೇಲೆಯೆ ಇರಲಿ ಒಂದೆರಡು ದಿನಗಳ ಮಟ್ಟಿಗೆ ಬಂದು ಆಮೇಲೆ ಹಿಂದಿರುಗಬಾರದೆ?" ಎಂದ

ತಾಯಿ ತಲೆಯಲ್ಲಾಡಿಸುತ್ತ ದೃಢವಾಗಿ "ಸಾಧ್ಯವಿಲ್ಲ ಮಗೂ, ನಿನ್ನ ಅಜ್ಜ ಈ ಹೊಣೆ ನನ್ನ ಮೇಲೆ ಹೊರಿಸಿ ಹೋಗಿದ್ದಾರೆ ಅನುಕೂಲವಿದ್ದರೆ ನಾನೂ ಹಾಗೆಯೆ ಯಾರಿಗಾದರೂ ಒಪ್ಪಿಸಬೇಕೆಂದಿದ್ದೇನೆ ಇಲ್ಲದಿದ್ದರೆ ಇದು ನನ್ನ ತಲೆಯ ಮೇಲೆಯೆ ಇರಲಿ ಆದರೆ ನೀವು ಮಾತ್ರ ಹೋಗಲೇ ಬೇಕು" ಎಂದಳು

ವೃಂದಾವನ ಸ್ವಲ್ಪ ಉದ್ವಿಗ್ನನಾಗಿ ಹೇಳಿದ— "ವಾಃ, ಇಂತಹ ಕಾಲದಲ್ಲಿ ನಿನ್ನೊಬ್ಬಳನ್ನೇ ಬಿಟ್ಟು ಹೇಗೆ ಹೋಗಲಿ? ಇದು ನೋಡು...." ಅಷ್ಟರಲ್ಲಿ ತಾಯಿ ಸ್ವಲ್ಪ ನಕ್ಕು "ಮಗೂ, ಇದೊಳ್ಳೇ ಕೆಲಸ ಹಾಗಿದ್ದರೆ ನನ್ನ ಕೆಲಸ ಮುಗಿಯಿತೆಂದೂ ದೇವರು ನನ್ನ ಭಾರ ಬೇರೊಬ್ಬರಿಗೆ ಒಪ್ಪಿಸ

ಬಯಸುವನೆಂದೂ ತಿಳಿದು ನೆಮ್ಮದಿಯಿಂದಿರುತ್ತೇನೆ. ದೇವರು ಇದರಂತೆಯೆ ಮಾಡಲಿ ವೃಂದಾವನ, ನನ್ನ ಹರಕೆಯೊಂದಿಗೆ ನೀವು ನಿಶ್ಚಿಂತೆಯಿಂದ ಹೋಗಿರಿ ನಾನು ಇಲ್ಲಿ ದೇವರ ಹತ್ತಿರ ಸ್ವಚ್ಛಂದವಾಗಿರುತ್ತೇನೆ" ಎಂದಳು.

ತಾಯಿಯ ಸ್ಪಷ್ಟವಾಣಿಯಿಂದ, ಎಲ್ಲಿಗಾದರೂ ಹೋಗಬೇಕೆಂಬ ವೃಂದಾವನನ ಆಸೆ ಇಂಗಿಹೋಯಿತು ಸ್ವಲ್ಪ ಹೊತ್ತು ಯೋಚಿಸಿ ಕೊನೆಗೆ ಅವನೂ ದೃಢತೆಯಿಂದ "ಹಾಗಾದರೆ ನಾನೂ ಹೋಗುವುದಿಲ್ಲ ನಿನಗೆ ದೇವರಿದ್ದರೆ ನನಗೆ ತಾಯಿ ಇದ್ದಾಳೆ ನನ್ನ ಮಟ್ಟಿಗೆ ಯಾವ ಭಯವೂ ಇಲ್ಲ ನಾನು ಹೆದರುವುದು ಚರಣನಿಗಾಗಿ ಮಾತ್ರ ಈ ಊರು ಬಿಡಲು ಸಾಧ್ಯವಿಲ್ಲವೆಂದ ಮೇಲೆ ಚರಣನ ಭಾರವನ್ನೂ ದೇವರ ಮೇಲೆ ಹಾಕಿ ನಿಶ್ಚಿಂತೆಯಿಂದಿರಲು ಅಡ್ಡಿ ಏನು? ಇಂದಿನಿಂದ ಇನ್ನು ಮುಖವನ್ನೆಂದಿಗೂ ಚಿಕ್ಕದು ಮಾಡುವುದಿಲ್ಲ" ಎಂದ.

ತಾರಿಣಿಯ ಮಗ ಮೃತ್ಯುವಿಗೆ ತುತ್ತಾದನು ಮರುದಿನ ಮುಂಜಾನೆ ವೃಂದಾವನ ಯಾವುದೊ ಕೆಲಸಕ್ಕಾಗಿ ಹೋಗುತಿದ್ದಾಗ ತಮ್ಮ ಕೆರೆಯಲ್ಲಿ ಒಬ್ಬ ಹೆಂಗುಸು ಬಟ್ಟೆ ಒಗೆಯುವುದನ್ನು ನೋಡಿದ ಒಗೆದು ಹಿಂಡಿದ ಬಟ್ಟೆ ಕೆಲವು, ಇನ್ನೂ ಒಗೆಯಬೇಕಾದುವು ಕೆಲವು ಆ ಬಟ್ಟೆಗಳ ಸ್ಥಿತಿಗತಿಯನ್ನು ಕಂಡು ವೃಂದಾವನ ಹೌಹಾರಿದ ಹತ್ತಿರ ಹೋಗಿ ಸಿಟ್ಟಿನಿಂದ "ಹೆಣದ ಬಟ್ಟೆ ಇಲ್ಲಿ ಒಗೆಯುತಿದ್ದೀರಿ, ನಿಮಗೆ ಬುದ್ಧಿ ಇಲ್ಲವೆ?" ಎಂದು ಕೇಳಿದ

ಬುರುಕೆಯೊಳಗಿಂದ ಅವಳು ಏನೆಂದಳೊ ಅವನಿಗೆ ತಿಳಿಯಲಿಲ್ಲ

"ಈ ವರೆಗಿನ ಅನರ್ಥವೇನೊ ಆಗಿಹೋಯಿತು ಇನ್ನು ಮೇಲೆ ಇಲ್ಲಿ ಒಗೆಯದಿರಿ ನಡೆಯಿರಿ ಇಲ್ಲಿಂದ"

ಆ ಹೆಂಗುಸು ಒಗೆದ ಹಾಗೂ ಒಗೆಯದಿದ್ದ ಬಟ್ಟೆಗಳನ್ನು ಒಟ್ಟುಗೂಡಿಸಿ ತೆಗೆದುಕೊಂಡು ಹೋದಳು ವೃಂದಾವನ ಸ್ತಬ್ಧನಾಗಿ ಸ್ವಲ್ಪ ಹೊತ್ತಿನ ವರೆಗೆ ನೀರಿನ ಕಡೆಗೆ ನೋಡುತ್ತಿದ್ದ ತಾನು ಅಲ್ಲಿಂದ ಹೊರಡುತ್ತಿರುವಾಗ ತಾರಿಣೀ ಬಾಬು ಭರದಿಂದ ಬರುತ್ತಿರುವುದನ್ನು ಕಂಡ ಪುತ್ರಶೋಕದಿಂದ ಅವನು ಕಾತರನಾಗಿದ್ದ, ಮೇಲೆ ಈ ಅಪಮಾನ! ಬಂದವನೇ ಹುಚ್ಚನಂತೆ ಬಾಯಿ, ಕಣ್ಣು, ತೆರೆಯುತ್ತ "ನೀನು ನನ್ನ ಮನೆಯಾಕೆಗೆ ಕೆರೆಯಲ್ಲಿ ಮೀಯಲು ಬಿಡಲಿಲ್ಲವೆ?" ಎಂದು ಕೇಳಿದ

“ ಛೆ, ಛೆ, ಹಾಗಲ್ಲ. ನಾನು ಹೇಳಿದ್ದು ಹೊಲಸು ಬಟ್ಟೆ ಒಗೆಯು ಕೂಡದೆಂದು. ”

ತಾರಿಣಿ ಆರ್ಭಟಿಸುತ್ತ “ ಹಾಗಾದರೆ ಒಗೆಯಲು ಎಲ್ಲಿಗೆ ಹೋಗು ವುದು ? ಬಾಡಾಲಿನಲ್ಲಿದ್ದು ವೈದ್ಯಘಟ್ಟಕ್ಕೆ ಹೋಗೋಣವೆ ? ವೃಂದಾವನ, ನೀನು ಹಾಳಾಗುವೆ, ಜೋಕೆ ! ಶೂದ್ರನಾಗಿ ದುಡ್ಡಿನ ಬಲದಿಂದ ಬ್ರಾಹ್ಮಣ ನನ್ನು ಪೀಡಿಸಿದರೆ ನಿನ್ನ ವಂಶ ಹಾಳಾದೀತು ” ಎಂದ.

ವೃಂದಾವನನ ಎದೆಯಲ್ಲಿ ಕೊಳ್ಳಿ ಇಟ್ಟಂತಾಯಿತು ವ್ಯರ್ಥವಾಗಿ ಜಗಳ ಮಾಡುವುದು ಅವನ ಸ್ವಭಾವವಲ್ಲ ಆದುದರಿಂದ ಅವನು ಶಾಂತ ನಾಗಿ ಹೇಳಿದ— “ ನಾನೊಬ್ಬನೇ ನಾಶವಾದರೆ ಚಿಂತೆಯಿಲ್ಲ ಆದರೆ ನಿಮ್ಮ ಈ ಕೆಲಸದಿಂದ ಇಡೀ ಪೇಟೆಯೆ ಯಮಪಟ್ಟಣವನ್ನು ಸೇರಬೇಕಾಗು ವುದಲ್ಲ ! ಈಗಾಗಲೇ ಇಡೀ ಊರೇ ಸ್ಮಶಾನವಾಗಿದೆ ಉಳಿದಿರುವುದು ಇದೊಂದೇ ಓಣಿ ಇದನ್ನೂ ಉಳಿಯಗೊಡಬಾರದೆಂದು ನಿಮ್ಮ ಇಚ್ಛೆಯೆ ?”

ಬ್ರಾಹ್ಮಣನು ಉದ್ಧಟತನದಿಂದ “ಜನರು ಎಂದಿನಿಂದಲೂ ಒಗೆಯು ತ್ತಿರುವುದು ಈ ಕೆರೆಯಲ್ಲಿಯೆ ಹೊರತು ನಿನ್ನ ತಲೆಯ ಮೇಲೆ ಅಲ್ಲವಲ್ಲ ? ” ಎಂದ

ವೃಂದಾವನ ದೃಢತೆಯಿಂದ ಉತ್ತರ ಕೊಟ್ಟ— “ ಈ ಕೆರೆ ನನ್ನದು ನೀವು ನನ್ನ ಈ ಮಾತನ್ನು ಕೇಳದಿದ್ದರೆ ನಿಮ್ಮ ಮನೆಯ ಯಾವ ಮನುಷ್ಯ ನನ್ನೂ ಇದರಲ್ಲಿ ಇಳಿಯಗೊಡಲಿಕ್ಕಿಲ್ಲ ”

“ ಹಾಗಿದ್ದರೆ ನಾವು ನೀರಿಗೆ ಎಲ್ಲಿಗೆ ಹೋಗಬೇಕು, ಹೇಳು ನೋಡೋಣ ? ”

“ ಕುಡಿಯುವುದಕ್ಕೂ ಮನೆಬಳಕೆಗೂ ಇಲ್ಲಿಂದ ಒಯ್ಯಲು ಏನು ಅಡ್ಡಿ ? ಬಟ್ಟೆ ಒಗೆಯುವುದಾದರೆ ಊರಹೊರಗಿನ ಹೊಂಡಕ್ಕೆಹೋಗಬೇಕು”.

ತಾರಿಣಿ ಮುಖ ಗಂಟಿಕ್ಕುತ್ತ “ ಕೀಳು ಮನುಷ್ಯನಾಗಿಯೂ ಇಷ್ಟು ದೊಡ್ಡ ಬಾಯಿಯೆ? ಹೆಂಗುಸರು ಊರ ಹೊರಗೆ ಹೋಗಿ ಒಗೆಯಬೇಕಂತೆ? ಈಗ ಕಷ್ಟ ಕಾಲ ನಮಗೆ ಮಾತ್ರ ಬಂದಿರಬಹುದು, ನಾಳೆ ನಿನ್ನ ಮನೆಗೂ ಬರದಿದ್ದೀತೆ ? ” ಎಂದ

ವೃಂದಾವನನೂ ಅದೇ ರೀತಿ ಶಾಂತ, ದೃಢಭಾವದಿಂದ “ಹೆಂಗುಸರು ಊರ ಹೊರಗೆ ಹೋಗಬೇಕೆಂದು ನಾನು ಹೇಳುವುದಿಲ್ಲ ತಮ್ಮ ಮನೆಯಲ್ಲಿ

ತೊತ್ತು ಆಳು ಯಾರೂ ಇರದಿದ್ದರೆ ನೀವು ಗಂಡುಸರೇ ಒಗೆದುಕೊಂಡು ಬನ್ನಿರಿ ಈಗ ನೀವು ದುಃಖಸಂತಪ್ತರಿರಬಹುದು ನಿಮಗೆ ನಾನು ಬಿರುನುಡಿಗಳನ್ನಾಡಕೂಡದು ಆದರೆ ನೀವು ಸಾವಿರ ಶಾಪ ಕೊಟ್ಟರೂ ಈ ಕೆರೆಯ ನೀರನ್ನು ಕೆಡಿಸಲು ಅವಕಾಶ ಕೊಡಲಾರೆ" ಎಂದು ಸ್ಪಷ್ಟವಾಗಿ ಹೇಳಿ ವಾದ–ವಿವಾದ ಮಾಡದೆ ಮನೆಗೆ ಹೋಗಿಬಿಟ್ಟ

ಸುಮಾರು ಹತ್ತು ನಿಮಿಷಗಳ ಬಳಿಕ ಘೋಷಾಲ ಮಹಾಶಯರು ಬಂದು ವೃಂದಾವನನನ್ನು ಕೂಗತೊಡಗಿದರು ಅವರು ತಾರಿಣಿಯ ಬಳಗದವರು ವೃಂದಾವನ ಹೊರಬರುತ್ತಲೇ ಅವರು "ಹೌದಪ್ಪಾ ವೃಂದಾವನ, ಎಲ್ಲರೂ ನಿನ್ನನ್ನು ಒಳ್ಳೆಯ ಹುಡುಗನೆಂದು ತಿಳಿದಿದ್ದಾರೆ ಈ ನಿನ್ನ ವ್ಯವಹಾರವೇನು? ಬ್ರಾಹ್ಮಣನು ಪುತ್ರಶೋಕದಿಂದ ಕೊರಗುತಿದ್ದಾನೆ ಇಂತಹ ಹೊತ್ತಿನಲ್ಲಿ ಅವನು ಕೆರೆಗೆ ಹೋಗದಂತೆ ನಿನ್ನ ಕಟ್ಟಾಜ್ಞೆಯೆ?" ಎಂದರು

"ನಾನು ಹೇಳಿದ್ದು ಹೊಲಸು ಬಟ್ಟೆಗಳನ್ನು ಒಗೆಯಕೂಡದೆಂದು ಮಾತ್ರ, ನೀರು ಒಯ್ಯಲಿಕ್ಕಲ್ಲ"

"ಇದು ಸರಿಯಲ್ಲ ಇಲ್ಲಿ ಕೇಳು, ನಿನ್ನ ಮಾತನ್ನು ಅವನು ಮೀರುವುದಿಲ್ಲ ನೀರನ್ನು ಸ್ವಲ್ಪ ದೂರ ಒಯ್ದು ಘಟ್ಟದ ಆಚೆ ಒಗದರೇನು ಅಡ್ಡಿ?"

"ಈಗ ಇಡೀ ಊರಿಗೆ ಈ ಕೆರೆಯ ನೀರೇ ಗತಿ ಇಂತಹ ಅನಿಷ್ಟ ಕಾಲದಲ್ಲಿ ಕೆರೆಯ ನೀರು ಹಾಳಾಗಲು ನಾನು ಖಂಡಿತ ಬಿಡಲಾರೆ"

ಕರ್ಮಠರಾದ ಘೋಷಾಲರು ಸ್ವಲ್ಪ ರುಷ್ಟರಾಗಿ "ವೃಂದಾವನ, ನಿನ್ನ ಈ ಹಟ ತಕ್ಕುದಲ್ಲ ಶಾಸ್ತ್ರೋಕ್ತವಾಗಿ ಪ್ರತಿಷ್ಠಿತವಾದ ಈ ಕೆರೆಯ ನೀರು ಅಪವಿತ್ರವೂ ಆಗಲಾರದು, ಕಲುಷಿತವೂ ಆಗಲಾರದು ಇಂಗ್ಲಿಷ್ ನಾಲ್ಕು ಅಕ್ಷರ ಕಲಿತ ಮಾತ್ರಕ್ಕೆ ಶಾಸ್ತ್ರಗಳನ್ನು ಸುಳ್ಳುಮಾಡಬಲ್ಲಿರಾ?" ಎಂದರು.

ವೃಂದಾವನನಿಗೆ ಒಂದೇ ಮಾತನ್ನು ಹಲವು ಸಲ ಹೇಳಿ ಹೇಳಿ ಸಾಕಾಗಿತ್ತು ಕೊನೆಗೆ ವಿರಕ್ತನಾಗಿ "ನನಗೆ ಶಾಸ್ತ್ರಗಳ ಮೇಲೆ ವಿಶ್ವಾಸವಿದ್ದೇ ಇದೆ ಆದರೆ ನೀವು ಕಲ್ಪಿಸಿಕೊಂಡ ಶಾಸ್ತ್ರವನ್ನು ಮಾತ್ರ ನಾನು ಒಪ್ಪುವುದಿಲ್ಲ ಈ ನೀರಿನ ವಿಷಯದಲ್ಲಿ ಯಾರ ಮಾತನ್ನೂ ಕೇಳಲಾರೆ ಹೊಲಸು ಬಟ್ಟೆಗಳನ್ನು ಅಲ್ಲಿ ಒಗೆಯಲು ಬಿಡುವುದಿಲ್ಲ ಬೇರೆ ಯಾರಿದ್ದರೂ

ಹೆಣದ ಬಟ್ಟೆಗಳನ್ನು ಸುಟ್ಟು ಬಿಡುತ್ತಿದ್ದರು ಆದರೆ ತಾರಿಣೀ ಬಾಬುಗಳಿಗೆ ಆ ಬಟ್ಟೆಗಳ ಮೇಲಿನ ಆಸೆ ಹೋಗಿರದಿದ್ದರೆ ಊರ ಹೊರಗಿರುವ ಹೊಂಡದಲ್ಲಿ ಒಗೆದುಕೊಂಡು ಬರಲಿ, ಈ ಕೆರೆಯಲ್ಲಿ ಮಾತ್ರ ಕೂಡದು'' ಎಂದ.

ಇಷ್ಟು ಹೇಳಿ ವೃಂದಾವನ ಒಳಗೆ ಹೋದ ಶಾಸ್ತ್ರವೇತ್ತರಾದ ಘೋಷಾಲ ಮಹಾಶಯರು ವೃಂದಾವನನನ್ನು ಶಪಿಸುತ್ತ ಮನೆಗೆ ಹೋದರು ಇದು ಇಲ್ಲಿಗೇ ನಿಲ್ಲದೆಂದು ವೃಂದಾವನನಿಗೆ ಚೆನ್ನಾಗಿ ಗೊತ್ತು ಆದುದರಿಂದ ಕೆರೆಯನ್ನು ಕಾಯಲು ಒಬ್ಬ ಆಳನ್ನು ಕಳಿಸಿದ ಆ ಕಾವಲುಗಾರ ರಾತ್ರಿ ಒಂಬತ್ತು ಗಂಟೆಗೆ ಬಂದು ''ತಾರಣೀ ಬಾಬುಗಳ ಕಡೆಯವರು ಒಗೆಯುತಿದ್ದಾರೆ, ಬೇಡವೆಂದು ಎಷ್ಟು ಬಗೆಯಿಂದ ಹೇಳಿದರೂ ಕೇಳಲೊಲ್ಲರು" ಎಂದು ಹೇಳಿದ ವೃಂದಾವನ ಕೂಡಲೇ ಅಲ್ಲಿಗೆ ಹೋಗಿ ನೋಡುತ್ತಾನೆ – ತಾರಿಣಿಯ ವಿಧವೆಯಾದ ಮಗಳು ದಿಂಬಿನ ಚೀಲ, ಹಾಸಿಗೆಯ ಬಟ್ಟೆ ಮುಂತಾದವುಗಳನ್ನು ಒಗೆಯುತ್ತ ಕೆರೆಯಲ್ಲಿಯೆ ಹಿಂಡುತಿದ್ದಾಳೆ ಕೆರೆಯ ದಂಡೆಯ ಮೇಲೆ ಸ್ವತಃ ತಾರಿಣೀ ಬಾಬುವೇ ನಿಂತಿದ್ದಾನೆ

## ೧೨

ಮರುದಿನ ವೃಂದಾವನ ತನ್ನ ತಾಯಿ ಹೇಳಿದ ಮೇಲೆ ಚರಣನನ್ನು ಕರೆದು "ಮಗೂ, ನಿನ್ನ ಅಮ್ಮ ಇದ್ದಲ್ಲಿ ಹೋಗುವೆಯಾ?" ಎಂದು ಕೇಳಿದ

ಚರಣ ಕುಣಿದಾಡುತ್ತ ''ಓಹೋ'' ಎಂದ

ವೃಂದಾವನ ಮನದಲ್ಲಿಯೆ ನೊಂದುಕೊಂಡು ''ನೀನು ಅಲ್ಲಿ ಬಹಳ ದಿನ ಇರಬೇಕಾಗುವುದು ನಮ್ಮನ್ನು ಬಿಟ್ಟು ಇರುತ್ತಿಯಾ?" ಎಂದು ಕೇಳಿದ

ಚರಣ ತಲೆಯಲ್ಲಾಡಿಸುತ್ತ ''ಇರುತ್ತೇನೆ'' ಎಂದ

ಎಳೆತನದ ಈ ದಿನಗಳಲ್ಲಿ ನಿರ್ಬಂಧದಲ್ಲಿದ್ದು ಹುಡುಗನ ಪುಟ್ಟ ಜೀವ ನಿಜವಾಗಿಯೂ ಬೇಸತ್ತು ಹೋಗಿದ್ದಿತು ಹೊರಗಿನ ಆಟಪಾಟಗಳಿಗೆ ಆಸ್ಪದವಿಲ್ಲ, ಸಾಲೆಯೊ ಮುಚ್ಚಿಬಿಟ್ಟಿದೆ, ಗೆಳೆಯರ ಮುಖದರ್ಶನವೇ ಇಲ್ಲ ಹೀಗೆ ಹಗಲಿರುಳೂ ಮನೆಯಲ್ಲಿಯೆ ಕೊಳೆಯಬೇಕಾಗಿದ್ದಿತು ಸುತ್ತಲೂ

ಏನೊ ಒಂದು ಬಗೆಯ ಭಯ ಅವನಿಗೆ ಯಾವ ಮಾತೂ ತಿಳಿಯದಿದ್ದರೂ ಮನದಲ್ಲಿಯೆ ಬಹಳ ವ್ಯಾಕುಲ ಪಡುತ್ತಿದ್ದ. ಆದರೆ ಅಲ್ಲಿಯೊ, ತಾಯಿಯ ತುಂಬುಸ್ನೇಹ, ಕಟ್ಟುನಿಟ್ಟು ಇಲ್ಲದ ಸ್ವಾತಂತ್ರ್ಯ, ಸ್ನಾನ, ಊಟ, ಆಟ-ಪಾಟ, ಯಾವುದಕ್ಕೂ ಅಡ್ಡಿ ಆತಂಕವಿಲ್ಲ ಎಷ್ಟು ತಪ್ಪುಗಳಿದ್ದರೂ ತಾಯಿ ನಗುತ್ತ ಸಲಿಗೆಯಿಂದ ಸ್ವಲ್ಪ ಬೆದರಿಸುತ್ತಿದ್ದಳು, ಅಷ್ಟೆ. ಕಣ್ಣು ಕೆಂಪಗೆ ಮಾಡುವವರಾರೂ ಇಲ್ಲ ಇದೆಲ್ಲವನ್ನೂ ನೆನೆದುಕೊಂಡು ಅವನು ಕೂಡಲೇ ಮನೆಯಿಂದ ಹೊರಡಲು ಚಡಪಡಿಸತೊಡಗಿದ

" ಹಾಗಾದರೆ ಹೋಗು " ಎಂದು ವೃಂದಾವನ ಚರಣನ ಬಟ್ಟೆ, ಕೆಲವು ರೂಪಾಯಿ, ತನ್ನ ಕೈಯಿಂದಲೇ ಟ್ರಂಕಿನಲ್ಲಿ ಹಾಕಿ ಅದನ್ನು ಬಂಡಿಯಲ್ಲಿಟ್ಟ. ಆಮೇಲೆ ಮಗನನ್ನು ಮನದಣಿ ಮುದ್ದಿಟ್ಟು ಅವನನ್ನು ತಾಯಿಯ ಮನೆಗೆ ಕಳಿಸಿ, ಇಂತಹ ಮಹಾಭಯದ ಸಮಯದಲ್ಲಿಯೂ ನಿಶ್ಚಿಂತತೆಯ ಒಂದು ನಿಟ್ಟುಸುರುಗರೆದ ಮಗನ ಜೊತೆಗೆ ಹೋದ ಆಳಿಗೆ ಅವನ ಮೇಲೆ ಸರಿಯಾಗಿ ಕಣ್ಣಿಡಲು ತಿಳಿಸಿ ಎರಡು ದಿನಗಳಿಗೊಮ್ಮೆಯಾದರೂ ಕ್ಷೇಮ-ಸಮಾಚಾರ ತಿಳಿಸಲು ಹೇಳಿದ ಆಮೇಲೆ ಮನದಲ್ಲಿಯೆ ಎಂದುಕೊಂಡ- " ಮಗುವಿನ ನೆನೆವರಿಕೆಯಾದರೂ ಚಿಂತೆಯಿಲ್ಲ, ಈ ವಿಪತ್ಕಾಲದಲ್ಲಿ ಅವ-ನನ್ನು ಇಲ್ಲಿ ಇಟ್ಟುಕೊಳ್ಳುವುದು ತರವಲ್ಲ "

ಬಂಡಿ ಮರೆಯಾಗುವ ವರೆಗೂ ವೃಂದಾವನ ರೆಪ್ಪೆ ಬಡೆಯದೆ ನೋಡುತ್ತಲೆ ಇದ್ದ ಬಳಿಕ ಮನೆಯೊಳಗೆ ಬಂದು ಸ್ವಲ್ಪ ಕೆಲಸ ಮಾಡುತ್ತಿರುವಷ್ಟರಲ್ಲಿ ಅವನಿಗೆ ಒಮ್ಮೆಲೇ ಆ ದಿನದ ಮಾತು ನೆನವಾಗಿ ಕುಸುಮೆ ಇದರಿಂದ ತಪ್ಪು ತಿಳಿದುಕೊಳ್ಳುವಳೇನೋ ಎಂದು ಸ್ವಲ್ಪ ಭಯವಾಯಿತು ಬಳಿಕ ಮನದಲ್ಲಿಯೆ " ಛೇ, ಇದು ಸರಿಯಾಗಲಿಲ್ಲ. ಇಂತಹ ಹಟಮಾರಿ, ಸಿಟ್ಟಿನ ಹೆಂಗುಸನ್ನು ಹೇಗೆ ನಂಬುವದು ? ಒಂದಕ್ಕೊಂದು ಅಪಾರ್ಥ ಮಾಡಿಕೊಂಡು ಕೋಪಿಸಿಕೊಂಡರೆ ಏನು ಮಾಡುವುದು ? ಸಂಗಡ ನಾನೂ ಹೋಗಬೇಕಾಗಿತ್ತು " ಎಂದುಕೊಂಡ ಆಮೇಲೆ ಒಂದು ವಸ್ತ್ರವನ್ನು ಹೊದೆದುಕೊಂಡು ಬೇಗಬೇಗನೆ ನಡೆಯುತ್ತ ಬಂಡಿಯ ಬೆನ್ನು ಹಿಡಿದು ಹೋಗಿ ಮಗನ ಹತ್ತರ ಕುಳಿತ

ವೃಂದಾವನ ಕುಂಜನಾಥನ ಮನೆಯ ಎದುರಿಗೆ ಹೋಗಿ ಹೊರಗಿ-ನಿಂದಲೆ ಸ್ಥಿತಿಗತಿಯನ್ನು ಕಂಡು ಬೆರಗಾದ. ಸುತ್ತಲೂ ಹೊಲಸು ಹಾಗೆಯೆ

ಬಿದ್ದಿದೆ ಬಹಳ ದಿನಗಳಿಂದ ಯಾರೂ ವಾಸವಾಗಿಲ್ಲವೊ ಏನೊ ಎನ್ನು ವಂತಿದೆ ಮನೆಯ ಸ್ಥಿತಿ ಬಾಗಿಲು ತೆರೆದಿರುವುದರಿಂದ ವೃಂದಾವನ ಚರಣ- ನೊಂದಿಗೆ ಒಳಗೆ ಹೋಗಿ ನೋಡಿದ, ಅಲ್ಲಿಯೂ ಹಾಗೆಯೆ

ಸಪ್ಪಳವನ್ನು ಕೇಳಿ ಕುಸುಮೆ "ಅಣ್ಣ" ಎಂದು ಹೊರಗೆ ಬಂದಳು ಇವರನ್ನು ನೋಡಿದ ಕೂಡಲೇ ಈರ್ಷೆ ಅಭಿಮಾನಗಳಿಂದ ಕಿಡಿಕಿಡಿಯಾಗಿ ನೇರವಾಗಿ ತನ್ನ ಕೋಣೆಗೆ ಹೋದಳು ಚರಣ ಯಥಾಪ್ರಕಾರ ಪ್ರಸನ್ನ ಚಿತ್ತದಿಂದ ಕೂಗುತ್ತ ಓಡಿಹೋಗಿ ಕುಸುಮೆಯನ್ನು ತಬ್ಬಿಕೊಂಡ. ಕುಸುಮೆ ಅವನನ್ನು ಎತ್ತಿಕೊಂಡು ತನ್ನ ತಲೆಯ ಕೂದಲನ್ನು ಸರಿಪಡಿಸಿ ನಾಲ್ಕಾರು ನಿಮಿಷಗಳ ಮೇಲೆ ಬಾಗಿಲಿನ ಹತ್ತಿರ ಬಂದು ನಿಂತಳು

"ಕುಂಜನಾಥ ಎಲ್ಲಿ?"-- ವೃಂದಾವನ ಕೇಳಿದ

"ಗೊತ್ತಿಲ್ಲ ಎಲ್ಲಿಗಾದರೂ ತಿರುಗಾಡಲು ಹೋಗಿರಬಹುದು"

"ಈ ಮನೆ ನೋಡಿದರೆ ಇದರಲ್ಲಿ ಯಾರೂ ವಾಸವಾಗಿದ್ದಂತೆ ತೋರುವುದಿಲ್ಲ ಇಷ್ಟು ದಿನ ಮನೆಯಲ್ಲಿ ಯಾರೂ ಇರಲಿಲ್ಲವೆ?"

"ಇಲ್ಲ"

"ಎಲ್ಲಿಗೆ ಹೋಗಿದ್ದಿರಿ?"

ಕುಸುಮೆ ತನ್ನ ಅಣ್ಣನ ಅತ್ತೆಯೊಂದಿಗ ಒಂದು ತಿಂಗಳು ತೀರ್ಥ ಯಾತ್ರೆಗೆಂದು ಹೋಗಿದ್ದಳು ನಿನ್ನೆ ಸಂಜೆಯಲ್ಲಿ ಹಿಂದಿರುಗಿ ಬಂದಿದ್ದಳು ಮಾತ್ರ ಇದೆಲ್ಲವನ್ನೂ ಹೇಳದೆ ಸ್ವಲ್ಪ ತಿರಸ್ಕಾರದಿಂದ "ಎಲ್ಲೆಲ್ಲಿಗೋ ಹೋಗಿದ್ದೆವು" ಎಂದಳು

ಈ ಮೊದಲು ವೃಂದಾವನ ಬಂದಾಗಲೆಲ್ಲ ಕುಳಿತುಕೊಳ್ಳಲು ಕುಸುಮೆ ಚಾಪೆ ಹಾಸುತ್ತಿದ್ದಳು ಆದರೆ ಇಂದು ಹಾಗೆ ಮಾಡಲಿಲ್ಲ ಇದನ್ನು ತಿಳಿದು ಕೊಂಡು ವೃಂದಾವನನೇ "ನಾನು ನಿಂತಿದ್ದೇನೆ, ಕುಳಿತುಕೊಳ್ಳಲು ಏನ- ನ್ನಾದರೂ ಹಾಸಬಾರದೆ?" ಎಂದು ಕೇಳಿದ

ಕುಸುಮೆ ಮೊದಲಿನಂತೆ ತಿರಸ್ಕಾರದಿಂದ "ಚಾಪೆ-ಗೀಪೆ ಎಲ್ಲಿ ಬಿದ್ದಿ ದೆಯೋ ಏನೊ?" ಎಂದು ನಿಂತಲ್ಲಿಯೆ ನಿಂತಳು ಸ್ವಲ್ಪವೂ ಅಲುಗಾಡಲಿಲ್ಲ.

ವೃಂದಾವನ ಇದಕ್ಕೆಲ್ಲ ಸಿದ್ಧನಾಗಿಯೆ ಬಂದಿದ್ದ ಆದರೆ ಈ ಅವ- ಹೇಲನೆಯಿಂದ ಅವನ ಹೃದಯಕ್ಕೆ ಬಲವಾದ ಪೆಟ್ಟುಬಿದ್ದಿತು ಕೋಪಕ್ಕೆ ವಶವಾಗುವುದರಿಂದ ಅಂದಿನಂತೆ ಇಂದೂ ಕಲಹವಾದೀತೆಂದು ಬಗೆದು

ಅತ್ಯಂತ ಸೌಮ್ಯನಾಗಿ “ ನಿನಗೆ ಬಹಳ ಹೊತ್ತು ತೊಂದರೆ ಕೊಡುವುದಿಲ್ಲ ನಾನು ಏಕೆ ಬಂದೆನೆಂಬುದನ್ನು ಕೇಳು. ನಮ್ಮ ಊರಲ್ಲಿ ದೊಡ್ಡ ಪಿಡುಗು ಹಬ್ಬಿದೆ, ಆದುದರಿಂದ ಚರಣನನ್ನು ನಿನ್ನ ಹತ್ತಿರ ಬಿಟ್ಟು ಹೋಗುತ್ತೇನೆ ” ಎಂದ

ಕುಸುಮೆ ಕೆಲವು ದಿನಗಳಿಂದ ಇಲ್ಲಿ ಇರಲಿಲ್ಲವಷ್ಟೆ ? ಆದುದರಿಂದ ಬೇನೆ ಬೇಸರಿಕೆಗಳ ವಿಷಯ ಅವಳಿಗೆ ತಿಳಿಯದು. ಆಕೆ ಉಕ್ಕಿಬರುತ್ತಿರುವ ಅಭಿಮಾನದಿಂದ “ ಆದುದರಿಂದಲೇ ಕರೆದುಕೊಂಡು ಬರುವ ಕೃಪೆಯಾಯಿತೇನು ? ರೋಗಾದಿಗಳು ಎಲ್ಲಿ ಇಲ್ಲ ? ಇದಲ್ಲದೆ ಬೇರೆಯವರ ಹುಡುಗನ ಹೊಣೆಯನ್ನು, ಯಾವ ಧೈರ್ಯದಿಂದ ಹೊರಲಿ ? ” ಎಂದಳು

ವೃಂದಾವನ ಶಾಂತಭಾವದಿಂದ “ ನಾನು ಯಾವ ಧೈರ್ಯದಿಂದ ಹೊರುತ್ತೇನೊ ಅದೇ ಧೈರ್ಯದಿಂದ ಇದಲ್ಲದೆ ಅವನು ಎಲ್ಲರಿಗಿಂತ ಹೆಚ್ಚಾಗಿ ನಿನ್ನನ್ನೇ ಪ್ರೀತಿಸುತ್ತಾನೆ ” ಎಂದ

ಕುಸುಮೆ ಏನನ್ನೊ ಹೇಳಬೇಕೆಂದಿದ್ದಳು ಆದರೆ ಚರಣ ತನ್ನ ಕೈಯಿಂದ ಅವಳ ಮುಖವನ್ನು ತನ್ನ ಮುಖದ ಕಡೆಗೆ ಎಳೆದು “ ಅಮ್ಮಾ , ನಾನು ನಿನ್ನ ಹತ್ತಿರವೇ ಇರಬೇಕೆಂದು ಅಪ್ಪ ಹೇಳಿದ್ದಾನೆ ಸ್ನಾನಕ್ಕೆ ಹೋಗೋಣವೇ ? ” ಎಂದ

ಕುಸುಮೆ ಇದಕ್ಕೆ ಉತ್ತರವಾಗಿ ವೃಂದಾವನನಿಗೆ ಕೇಳಿಸುವಂತೆ—“ ಇಲ್ಲ, ನನ್ನ ಹತ್ತಿರ ಇರುವುದು ಬೇಡ ನಿನ್ನ ಹೊಸ ತಾಯಿ ಬರುತ್ತಾಳಲ್ಲವೆ ? ಅವಳ ಹತ್ತಿರವೇ ಇರು ” ಎಂದಳು

ವೃಂದಾವನ ಸಪ್ಪೆನಗೆಯಿಂದ “ ನಿನಗೆ ಆ ಸುದ್ದಿಯೂ ಗೊತ್ತಾಗಿದೆ ಹಾಗಾದರೆ ? ಇದೋ ಕೇಳು, ಮನೆಯ ಎಲ್ಲ ಕೆಲಸ ನೀಗಿಸುವುದು ತಾಯಿಯೊಬ್ಬಳಿಂದಲೇ ಸಾಧ್ಯವಿಲ್ಲ ಆದುದರಿಂದ ಕೆಲವು ದಿನಗಳ ಹಿಂದೆ ಈ ಮಾತು-ಕತೆ ನಡೆದಿತ್ತು ಆಗಲೇ ಅದು ನಿಂತೂ ಹೋಯಿತು ” ಎಂದ

“ ಅದೇಕೆ ? ”

“ ಅದಕ್ಕೊಂದು ಕಾರಣವಿದೆ. ಈಗ ಆ ಎಲ್ಲ ಮಾತಿನ ಪ್ರಯೋಜನವೇನು ? ಬಾ ಚರಣ, ನಡೆ ಹೋಗೋಣ, ತಡವಾಗುತ್ತಿದೆ ”

ಚರಣ ನಮ್ರತೆಯಿಂದ “ನಾನು ನಾಳೆ ಬರುತ್ತೇನೆ ಅಪ್ಪಾ” ಎಂದ

ವೃಂದಾವನ ಸುಮ್ಮನಾದ ಕುಸುಮೆ ಕೂಡ ಯಾವ ಮಾತನ್ನೂ

ಆಡದೆ ಚರಣನನ್ನು ಇಳಿಸಿದಳು ಒಂದೆರಡು ನಿಮಿಷಗಳ ಮೇಲೆ ವೃಂದಾವನ ಅತಿ ಗಂಭೀರನಾಗಿ "ತಡ ಮಾಡಬೇಡ ಚರಣ, ನಡೆ" ಎಂದು ಮೆಲ್ಲಗೆ ಹೊರ-ಹೊರಟ

ಚರಣ ಅತಿ ಮುದ್ದಿನಿಂದ ಬೆಳೆದಿದ್ದರೂ ಆಜ್ಞಾಪಾಲನೆಯನ್ನು ಕಲಿತಿದ್ದ ಮೊದಲು ನನ್ನಿದುಂಬಿದ ನಯನಗಳಿಂದ ತಾಯಿಯನ್ನು ನೋಡಿದ, ಬಳಿಕ ಕ್ಷುಬ್ಧನಾಗಿ ಸುಮ್ಮನೆ ತಂದೆಯ ಹಿಂದೆ ನಡೆದ

ಬಂಡಿಯವನು ಎತ್ತಿಗೆ ನೀರು ಕುಡಿಸಲು ಹೋಗಿದ್ದ ತಂದೆ-ಮಗ ಇಬ್ಬರೂ ದಾರಿಯ ಮೇಲ ನಿಂತು ಅವನ ಬರವನ್ನು ನಿರೀಕ್ಷಿಸುತ್ತಿದ್ದರು ಕುಸುಮೆ ಒಳಗಿನಿಂದ ಬಂದು ಮುಂಬಾಗಿಲ ಮರೆಯಲ್ಲಿ ನಿಂತು ತನ್ನ ಪತಿಯ ಮುಖ ನೋಡಿ ಬಚ್ಚಿದಳು ಈಗ ಅವನ ಮುಖದ ಮೇಲೆ ಆ ಲಾವಣ್ಯವಿಲ್ಲ, ಕಣ್ಣು ಕುಳಿಬಿದ್ದಿವೆ, ಮುಖ ಬೆಳ್ಳಗಾಗಿದೆ ಇದರಿಂದ ಅವಳಿಗೆ ಕಸಿವಿಸಿಯಾಯಿತು ಅವಳು ಅಲ್ಲಿಂದಲೇ ಕೂಗುತ್ತ " ತಮ್ಮನ್ನು ಒಂದು ಮಾತು ಕೇಳಬೇಕಾಗಿದೆ " ಎಂದಳು

ವೃಂದಾವನ ಹತ್ತಿರ ಬಂದು " ಏನು ? " ಎಂದ

" ಇತ್ತೀಚೆ ಏನಾದರೂ ಬೇನೆ ಬಿದ್ದಿದ್ದಿರಾ ? "

" ಇಲ್ಲ. "

" ಹಾಗಾದರೆ ಹೀಗೇಕೆ ಕಾಣುತ್ತೀರಿ ? "

" ಅದೇನೊ ಗೊತ್ತಿಲ್ಲ ಚಿಂತೆಯಿಂದ ಸ್ವಲ್ಪ ಸೊರಗಿದಂತೆ ಕಾಣುತ್ತಿರಬಹುದು "

ಚಿಂತೆ! ಗಂಡನು ಬಹಳ ಸೊರಗಿರುವುದನ್ನು ಕಂಡು ಕುಸುಮೆಯ ಕೋಪ ಶಾಂತವಾಗಿದ್ದಿತು ಆದರೆ ಈ ಮಾತಿನಿಂದ ಮತ್ತೆ ಕೆಣಕಿದಂತಾಯಿತು ಆಕೆಯೂ ಕೊಂಕಿನಿಂದ "ನೀವು ಹದಿನಾರಾಣೆ ಸುಖಿಗಳು, ನಿಮಗೆ ಚಿಂತೆ ಏತರದು, ಹೇಳಬಾರದೆ ? " ಎಂದಳು

ಈ ಮಾತಿಗೆ ವೃಂದಾವನ ಉತ್ತರವೀಯಲಿಲ್ಲ ಬಂಡಿ ಸಿದ್ಧವಾದ ಬಳಿಕ ಚರಣ ಅದರಲ್ಲಿ ಕುಳಿತುಕೊಳ್ಳಲು ಹೋದ ಆಗ ವೃಂದಾವನ " ಏನೊ, ನಿನ್ನ ಅಮ್ಮನಿಗೆ ನಮಸ್ಕಾರ ಮಾಡುವುದಿಲ್ಲವೆ ? " ಎಂದ

ಚರಣ ಇಳಿದು ಬಂದು ಬಾಗಿಲ ಹೊರಗಿನಿಂದಲೇ ತಾಯಿಗೆ ಸಾಷ್ಟಾಂಗ ನಮಸ್ಕಾರ ಮಾಡಿದ ಕುಸುಮೆ ವ್ಯಗ್ರಳಾಗಿ ಅವನನ್ನು

ಹಿಡಿಯಲು ಕೈಯೆತ್ತಿದಾಗ ಅವನು ಓಡಿಹೋದ ಯಾವ ಮಾತೂ ಅವನಿಗೆ ಸರಿಯಾಗಿ ತಿಳಿಯದಿದ್ದರೂ ತಾಯಿ ತನ್ನನ್ನು ಇಂದು ಆದರಿಸಲಿಲ್ಲವೆಂದೂ ಇರಲು ಬಂದ ತನ್ನನ್ನು ಮರಳಿ ಕಳಿಸಿದಳೆಂದೂ ಸ್ಪಷ್ಟವಾಗಿ ತಿಳಿಯಿತು

ವೃಂದಾವನ ಸ್ವಲ್ಪ ಹತ್ತಿರ ಬಂದು ಭಾರವಾದ ಕಂಠಧ್ವನಿಂದ ಹೇಳಿದ– " ಮುಂದೆ ನಿನಗೆ ಹೇಳುವ ಯೋಗವಿದೆಯೊ ಇಲ್ಲವೊ ಯಾರು ಬಲ್ಲರು ? ಆದುದರಿಂದ ಇಂದೇ ಹೇಳಿಬಿಡುತ್ತೇನೆ ಇಂದು ನೀನು ಸಿಟ್ಟಿನ ಭರದಲ್ಲಿ ನಿನ್ನ ಚರಣನಿಗೆ ಆಶ್ರಯ ಕೊಡಲಿಲ್ಲ ಆದರೆ ನನ್ನ ನಂತರ ಮಾತ್ರ ಕೊಡಲು ತಪ್ಪಬೇಡ "

ಕುಸುಮೆ ವ್ಯಸ್ತಳಾಗಿ ನಡುವೆಯೆ " ಈ ಎಲ್ಲ ಮಾತುಗಳನ್ನು ತೆಗೆದು ಕೊಂಡು ನಾನೇನು ಮಾಡಲಿ ? " ಎಂದಳು

" ಹಾಗಲ್ಲ. ಇಂದು ನಾನು ಚರಣನನ್ನು ನಿನಗೊಪ್ಪಿಸಲು ಬಂದಿದ್ದೆ "

" ನಿಮಗೆ ನನ್ನ ಮೇಲೆ ವಿಶ್ವಾಸವಾದರೂ ಏನು ? "

ವೃಂದಾವನನ ಕಣ್ಣಿನಲ್ಲಿ ನೀರು ತುಂಬಿ ಬಂತು ಅವನೆಂದ- " ಪುನಃ ಅದೇ ಸಿಟ್ಟಿನ ಮಾತು ಕುಸುಮಾ, ನೀನು ಕಲಿತವಳೆಂದು ಕೇಳಿದ್ದೇನೆ ಆದರೆ ಹೆಂಗುಸರು ಎಲ್ಲಕ್ಕೂ ದೊಡ್ಡ ಗುಣವೊಂದನ್ನು ಕಲಿಯುವುದು ಅವಶ್ಯ— ಅದೆಂದರೆ ಕ್ಷಮೆ ಅದನ್ನು ಮಾತ್ರ ನೀನು ಕಲಿಯಲಿಲ್ಲ ನೀನು ಚರಣನ ತಾಯಿಯೆಂದು ನಾನೇನೊ ತಿಳಿದಿದ್ದೇನೆ ಮಕ್ಕಳ ವಿಷಯದಲ್ಲಿ ತಂದೆ ತಾಯಿಗಳ ಮೇಲೆ ವಿಶ್ವಾಸವನ್ನಿಡದೆ ಇನ್ನಾರ ಮೇಲೆ ಇಡುವುದು ?"

ಎಷ್ಟು ಹುಡುಕಿದರೂ ಕುಸುಮೆಗೆ ಈ ಮಾತಿಗೆ ಉತ್ತರ ಸಿಗಲಿಲ್ಲ

ಎತ್ತು ಮನೆಗೆ ಹೋಗಲು ತವಕಪಡುತ್ತಿದ್ದವು ಚರಣ ಕೂಗಿದ— " ಅವ್ವಾ, ಹೋಗೋಣ ಬಾ "

ಕುಸುಮೆ ಏನೋ ಹೇಳಬಯಸುತಿದ್ದಳು ಆದರ ಅಷ್ಟರಲ್ಲಿ ವೃಂದಾವನ " ಒಳ್ಳೇದು, ಹೊರಡುತ್ತೇನೆ " ಎಂದವನೆ ಬಂಡಿಯಲ್ಲಿ ಕುಳಿತ

ಕುಸುಮೆ ಅಲ್ಲಿಯೆ ಕುಳಿತು ಅತಿ ಅಭಿಮಾನದಿಂದ ಪರಲೋಕವಾಸಿ ಯಾದ ತನ್ನ ತಾಯಿಯನ್ನು ಕುರಿತು ಎನ್ನತೊಡಗಿದಳು— " ಅಯ್ಯೋ, ತಾಯಿಯಾಗಿ ನೀನು ನನ್ನವಾಲಿಗೆ ಎಷ್ಟು ಹಗೆತನವನ್ನು ಬಿತ್ತಿಹೋಗಿರುವೆ! ನನ್ನ ಅಜ್ಞಾನಾವಸ್ಥೆಯಲ್ಲಿ ನೀನು ನನ್ನನ್ನು ನಿಜವಾಗಿಯೂ ಕಲಂಕದಲ್ಲಿ ಮುಳುಗಿಸಿದ್ದರೆ, ನಿನ್ನ ತಿರಸ್ಕಾರ ಯೋಗ್ಯವಾದ ದರ್ಪಕ್ಕೆ ನನ್ನನ್ನು

ನಿಜವಾಗಿಯೂ ಬಲಿಯನ್ನಿತ್ತಿದ್ದರೆ, ಅದನ್ನು ನನ್ನೊಡನೆ ಸ್ಪಷ್ಟವಾಗಿ ಏಕೆ ಹೇಳಲಿಲ್ಲ ? ಈ ಎಲ್ಲ ಸಂಗತಿಯನ್ನು ಯಾರ ಹೆದರಿಕೆಯಿಂದ ಹೀಗೆ ಹುದುಗಿಸಿಟ್ಟೆ? ಯಾರನ್ನು ಗಂಡನೆಂದೂ ಮಗನೆಂದೂ ನನ್ನ ಅಂತರಾತ್ಮನು ತಿಳಿದಿದ್ದಾನೊ ಅಂಥವರಿಗೆ ಇಡೀ ಜಗತ್ತಿನೆದುರು ನಾನು ನಿಷ್ಕಳಂಕಳೆಂಬು ದನ್ನು ತೋರಿಸುವಂತಹ ಯಾವ ಮಾರ್ಗವನ್ನೂ ನೀನು ಉಳಿಸಲಿಲ್ಲವಲ್ಲ ! ಹೀಗೆ ತೋರಿಸಲು ನನಗೆ ಸಾಧ್ಯವಿದ್ದಿದ್ದರೆ ಇಂದು ನನ್ನನ್ನು ಪರಿತ್ಯಾಗ ಮಾಡುವುದು ಯಾರಿಗೆ ಸಾಧ್ಯವಿತ್ತು ! ತನ್ನ ಹೆಂಡತಿ ತನ್ನಲ್ಲಿ ಅನಾಥಳಂತೆ ಬರಬೇಕೆಂಬ ನಿರ್ಲಜ್ಜತನವನ್ನು ಯಾರೂ ಮಾಡುತ್ತಿರಲಿಲ್ಲ ಅಥವಾ ನಾನು ನಿಜವಾಗಿಯೂ ವಿಧವೆಯಾಗಿದ್ದಲ್ಲಿ ಅದನ್ನು ನನ್ನ ಹೃದಯವು ಏಕೆ ಒಪ್ಪುವುದಿಲ್ಲ ? ಇಂತಹ ಸ್ಥಿತಿಯಲ್ಲಿ, ರೂಪಕ್ಕೆ ಮೋಹಿತನಾಗಿ ವಿಧವೆಯ ಎದುರು ವಿವಾಹದ ಮಾತನ್ನೆತ್ತಲು ಯಾರಿಗೆ ಧೈರ್ಯವಾಗುತಿತ್ತು ? ''

ಕುಸುಮೆ ಅದೇ ಸ್ಥಳದಲ್ಲಿ ಕುಳಿತಂತೆಯೇ ಕುಳಿತು ಬಹಳ ಹೊತ್ತಿನ ವರೆಗ ಅಳುತ್ತಿದ್ದಳು ಕೊನೆಗೆ ಆಕಾಶದ ಕಡೆಗೆ ನೋಡುತ್ತ ಕೈಜೋಡಿಸಿ " ದೇವಾ, ನನಗೆ ಯಾವುದಾದರೊಂದು ಉಪಾಯ ತೋರಿಸು, ಅಭಿಮಾನ ದಿಂದ ತಲೆಯೆತ್ತಿಕೊಂಡು ಗಂಡನ ಮನೆಯನ್ನು ಸೇರುವಂತೆ ಮಾಡು ಅಥವಾ ಬಾಲ್ಯಾವಸ್ಥೆಯ ಆ ನಿಶ್ಚಿಂತ, ನಿರ್ವಿಘ್ನ ದಿನಗಳನ್ನು ಮರಳಿಸಿ ಸುಖದಿಂದ ಉಸಿರಾಡಿಸುವಂತೆ ಮಾಡು ! '' ಎಂದು ಬೇಡಿದಳು

## ೧೩

ಆ ದಿನ ಕುಸುಮೆ ತನ್ನ ಅಣ್ಣನಿಂದ ತನ್ನ ಗಂಡನ ಇನ್ನೊಂದು ಮದು ವೆಯ ಸುದ್ದಿಯನ್ನು ಕೇಳಿ ಅತ್ಯಂತ ಕಳವಳಗೊಂಡಳು, ಎಲ್ಲಿಗ ಓಡಿ ಹೋಗಲಿ, ಏನು ಮಾಡಲಿ ಎಂದು ಯೋಚಿಸತೊಡಗಿದಳು ಇಷ್ಟರಲ್ಲಿ ಅಣ್ಣನ ಅತ್ತೆ ತೀರ್ಥಯಾತ್ರೆಗೆ ಹೋಗುವ ಸಿದ್ಧತೆ ಮಾಡತೊಡಗಿದಳು ಅತ್ತೆಯಿಂದ ಈ ಸುದ್ದಿ ಕೇಳಿ ಕುಸುಮೆ ತಾನೂ ಹೊರಡಲು ಸಿದ್ಧಳಾದಳು ಕುಂಜನ ಅತ್ತೆ ಕುಸುಮೆಯನ್ನು ದಾಸಿಯೆಂಬ ತಿಳಿವಳಿಕೆಯಿಂದಲೇ ಕರೆ-ದೊಯ್ದಳು ದಾರಿಯಲ್ಲಿ ಅವಳನ್ನು ನಡೆಸಿಕೊಂಡುದೂ ದಾಸಿಯಂತೆಯೆ.

ಆದರೆ ಕುಸುಮೆ ಇಂತಹ ಚಿಕ್ಕ–ಪುಟ್ಟ ಸಂಗತಿಗಳ ಕಡೆಗೆ ಗಮನಕೊಡುವಂತಹ ಸ್ಥಿತಿಯಲ್ಲಿರಲಿಲ್ಲ ಬಳಿಕ ನಲಡಾಂಗೆಗೆ ಬಂದಮೇಲೆ ತನ್ನ ಮನೆಗೆ ಹೊರಡಲು ಸಿದ್ಧಳಾದಳು ಆಗ ಕುಂಜನ ಅತ್ತೆ ಹಾವಿನಂತೆ ಬುಸುಗುಟ್ಟುತ್ತ " ಹಾಗೆ ಹುಚ್ಚರಂತೆ ಮಾಡಿದರೆ ಹೇಗಮ್ಮ ? ನಾವು ದೊಡ್ಡ ಮನುಷ್ಯರು, ನಮಗೆ ಆಗದವರು ಹೆಜ್ಜೆ-ಹೆಜ್ಜೆಗೂ ಇದ್ದಾರೆ ನೀನೋ ಹರೆಯದ ಹುಡಿಗೆ, ನೀನು ಅಲ್ಲಿ ಒಬ್ಬಳೇ ಇದ್ದರೆ ಸಮಾಜದಲ್ಲಿ ನಾವು ತಲೆ ಎತ್ತಿಕೊಂಡಿರುವುದು ಹೇಗೆ ? " ಎಂದಳು ಕುಸುಮೆ ಇದಕ್ಕೆ ಎದುರಾಡಲಿಲ್ಲ

ಪುನಃ ಆಕೆ " ನೀನು ಬೇಕಾದರೆ ಅಣ್ಣನೊಂದಿಗೆ ಹೋಗಿ ಮನೆ-ಮಾರು ನೋಡಿಕೊಂಡು ಬಾ ನೀನು ಅಲ್ಲಿ ಒಬ್ಬಳೇ ಎಂದಿಗೂ ಇರಕೂಡದು " ಎಂದಳು

ಕುಸುಮೆ ಈ ಮಾತಿಗ ಒಪ್ಪಿ ಮನೆಯನ್ನೊಮ್ಮೆ ನೋಡಿಕೊಂಡು ಹೋಗಲು ನಿನ್ನೆ ಬಂದಿದ್ದಳು

ಇಂದು ಚರಣ ಮೊದಲಾದವರು ಬಂದು ಹೋದಬಳಿಕ, ಹೊರಗ ಹೋದ ಕುಂಜನಾಥ ಜಮೀನುದಾರರ ರೀವಿಯಿಂದ ಊರನ್ನೆಲ್ಲ ಸುತ್ತಾಡಿ ಮನೆಗೆ ಬಂದ ಸ್ನಾನ, ಊಟ, ಮುಗಿಸಿಕೊಂಡು ಸ್ವಲ್ಪ ಮಲಗಿದ ಬಳಿಕ ಸುಮಾರು ಮೂರು ಗಂಟೆಗೆ ಎದ್ದು ತನ್ನ ತಂಗಿಯೊಂದಿಗೆ ಅತ್ತೆಯ ಮನೆಗೆ ಹೋಗುವ ಸಿದ್ಧತೆ ಮಾಡತೊಡಗಿದ ಕುಸುಮೆ ಮನೆಯ ಕಿಟಿಕಿ ಬಾಗಿಲುಗಳನ್ನು ಮುಚ್ಚಿ ಮೌನವಾಗಿ ಹೋಗಿ ಬಂಡಿಯಲ್ಲಿ ಕುಳಿತಳು ತನ್ನ ಪತಿಯ ವಿಷಯದಲ್ಲಿ ಅಣ್ಣನಿಗ ಆದರವಿಲ್ಲವೆಂಬುದು ಗೊತ್ತಿದ್ದುದರಿಂದ ಅಂದು ನಡೆದ ಸಂಗತಿಯನ್ನು ಕುಸುಮೆ ಹೇಳಲಿಲ್ಲ

ಕುಂಜನ ಹೆಂಡತಿಯ ಹೆಸರು ವ್ರಜೇಶ್ವರಿ ಅವಳ ಮುಖದ ಮೇಲೆ ಕಲಹಪಟುತ್ವ ಎದ್ದು ತೋರುತ್ತಿತ್ತು ಆಕೆಗ ಇನ್ನೂ ಸರಿಯಾಗಿ ಹದಿನೈದು ವರುಷ ತುಂಬಿಲ್ಲ ಆದರೂ ಮಾತಿನ ರೀತಿಯಲ್ಲಿಯೂ ವಿಷಪೂರಿತ ಸ್ವಭಾವದಲ್ಲಿಯೂ ತನ್ನ ತಾಯಿಯನ್ನೇ ಅಳಿಸುತಿದ್ದಳು

ವ್ರಜೇಶ್ವರಿ ಅದೇಕೊ ಏನೊ ಕುಸುಮೆಯನ್ನು ನೋಡಿದಂದಿನಿಂದಲೇ ಪ್ರೀತಿಸತೊಡಗಿದಳು ಇದರಿಂದ ಆಕೆಯ ತಾಯಿಗೆ ಮಾತ್ರ ಸಮಾಧಾನವಾಗಲಿಲ್ಲವೆಂಬುದು ಸ್ಪಷ್ಟ ಆದುದರಿಂದ ಅವಳು ತನ್ನ ಮಗಳಿಗೆ ತಿಳಿಯದಂತೆ ಕುಸುಮೆಗೆ ಕಿರುಕುಳ ಕೊಡತೊಡಗಿದಳು

ಮನೆಯ ಎದುರಿಗೇ ಒಂದು ಕೆರೆ ಇದೆ ಮೂರು ನಾಲ್ಕು ದಿನಗಳ ಬಳಿಕ ಕುಸುಮೆ ಅಲ್ಲಿಗೆ ಪಾತ್ರೆ ತೊಳೆದುಕೊಂಡು ಬರಲು ಹೋಗಿದ್ದಳು ವ್ರಜೇಶ್ವರಿ ಮನೆಯಿಂದ ಹೊರಗೆ ಬಂದು ಸ್ವಲ್ಪ ತೀವ್ರ ಸ್ವರದಿಂದ "ಅತ್ತಿಗೆಯವರೆ, ನಮ್ಮ ತಾಯಿ ನಿಮಗೆ ಎಷ್ಟು ರೂಪಾಯಿ ಸಂಬಳ ಗೊತ್ತುಮಾಡಿ ಇಲ್ಲಿಗೆ ಬರಮಾಡಿಕೊಂಡಿದ್ದಾಳೆ ?" ಎಂದು ಕೇಳಿದಳು

ತಾಯಿ ಅಲ್ಲಿಯೆ ಕೋಣೆಯ ಹತ್ತಿರ ಕುಳಿತು ಏನೋ ಕೆಲಸ ಮಾಡುತ್ತಿದ್ದಳು ಮಗಳ ಈ ಕಠೋರ, ವ್ಯಂಗ್ಯಮಾತುಗಳನ್ನು ಕೇಳಿ ಅವಳು ಆಶ್ಚರಿಗೊಂಡು ಕೋಪದಿಂದ ಆರ್ಭಟಿಸುತ್ತ "ಎಂತಹ ಮಾತನ್ನಮ್ಮಾ ನೀನು ಈಗ ಆಡುತ್ತಿರುವುದು ? ಮನೆಯ ಜನರಿಗೆ ಯಾರಾದರೂ ಸಂಬಳ ಗೊತ್ತುಮಾಡಿ ಕರೆತರುತ್ತಾರೆಯೆ ?" ಎಂದಳು

"ಅವಳು ನಿನ್ನವಳು ಹೇಗೊ ಹಾಗೆ ನನ್ನವಳೂ ಅಹುದು ಆ ಬಡವೆಯನ್ನು ದುಡಿಸಿಕೊಂಡು ಸಂಬಳ ಕೊಡದಿದ್ದರೆ ಹೇಗೆ ?"

ಇದಕ್ಕೆ ಉತ್ತರವಾಗಿ ತಾಯಿ ಕುಸುಮೆಯ ಹತ್ತಿರ ಹೋಗಿ ಅವಳ ಕೈಯೊಳಗಿನ ಪಾತ್ರೆಗಳನ್ನು ಕಸಿದುಕೊಂಡು ತಾನೇ ಕೆರೆಗೆ ನಡೆದಳು

ಮುಂದೆ ಏನು ಮಾಡಬೇಕೆಂಬುದು ತಿಳಿಯದೆ ಕುಸುಮೆ ಮಂಕು ಬಡಿದವರಂತೆ ನಿಂತುಬಿಟ್ಟಳು ವ್ರಜೇಶ್ವರಿ ಆಕೆಯ ಮುಖವನ್ನು ನೋಡಿ ನಸುನಗೆಯಿಂದ "ಒಳ್ಳೇದಾಯಿತು ಹೋಗಲಿ ಬಿಡು" ಎನ್ನುತ್ತ ಕೋಣೆಯೊಳಗೆ ಹೋದಳು

ಒಂದೆರಡು ದಿನಗಳ ತನಕ ತಾಯಿ ಕುಸುಮೆಯ ವಿಷಯದಲ್ಲಿ ಕತ್ತಿ ಮಸೆಯುತ್ತಿದ್ದಳು ಆಮೇಲೆ ಆಕೆಯ ನಡತೆಯಲ್ಲಿ ಒಮ್ಮಲೇ ಬದಲಾವಣೆಯಾಯಿತು ಇದರಿಂದ ವ್ರಜೇಶ್ವರಿಗೆ ಆಶ್ಚರ್ಯವಾಯಿತು

ನಿನ್ನೆ ರಾತ್ರಿ ದೇಹಸ್ಥಿತಿ ಚೆನ್ನಾಗಿರದ್ದರಿಂದ ಕುಸುಮೆ ಊಟ ಮಾಡಲಿಲ್ಲ. ಇಂದು ನಸುಕಿನಲ್ಲೇ ಅತ್ತೆ ಕುಸುಮೆಗೆ ಮಿಂದು ಪೂಜೆ ಪಾರಾಯಣ ಮುಗಿಸಿ ಊಟಮಾಡಲು ಆಗಿಂದಾಗ ಹೇಳತೊಡಗಿದಳು

ವ್ರಜೇಶ್ವರಿ ಕುಸುಮೆಯ ಹತ್ತಿರ ಹೋಗಿ ಮೆಲ್ಲಗೆ "ಅತ್ತಿಗೆ, ಇಂದು ಅಮ್ಮ ತನ್ನ ಛದ್ಮವೇಷವನ್ನೇಕೆ ಬದಲು ಮಾಡಿದಳು ಎಂಬುದೇ ನನಗೆ ಯೋಚನೆ" ಎಂದಳು

ಕುಸುಮೆ ಮಾತನಾಡಲಿಲ್ಲ ಆದರೆ ಮಗಳಿಗೆ ತನ್ನ ತಾಯಿಯ

ಸ್ವಭಾವ ಚೆನ್ನಾಗಿ ಗೊತ್ತಿತ್ತು. ಎರಡೇ ದಿನಗಳಲ್ಲಿ ತಾಯಿಯ ನಡತೆಯಲ್ಲಿ ಮಾರ್ಪಾಡಾದುದನ್ನು ಕಂಡು ವ್ರಜೇಶ್ವರಿ ಕಿಡಿಕಿಡಿಯಾದಳು

ಮನೆಯ ಒಡತಿಗೆ ತಂಗಿಯ ಮಗನೊಬ್ಬನಿದ್ದಾನೆ— ಗೋವರ್ಧನ ಅವನ ಹೆಸರು ಕುಡಿತದಿಂದಲೂ ಗಾಂಜಿಯಿಂದಲೂ ಅವನ ಮುಖ ವಿಕಾರ ಗೊಂಡಿದೆ ಅವನನ್ನು ನೋಡಿದರೆ ಮೂವತ್ತೈದು ವರುಷದವನೊ ಅರುವ-ತ್ತೈದು ವರುಷದವನೊ ಗೊತ್ತಾಗುವಂತಿಲ್ಲ ಅವನಿಗೆ ಮಗಳನ್ನು ಕೊಡಲು ಯಾರೂ ಒಪ್ಪದಿದ್ದುದರಿಂದ ಅವನಿನ್ನೂ ಅವಿವಾಹಿತ ಅವನ ಮನೆ ಇನ್ನೊಂದು ಓಣಿಯಲ್ಲಿದೆ ಮೊದಲು ಅವನು ಅಪರೂಪವಾಗಿ ಕಾಣ ಸಿಗುತ್ತಿದ್ದ ಆದರೆ ಇತ್ತೀಚೆ ಯಾವ ಕಾರಣದಿಂದಲೊ ತನ್ನ ಚಿಕ್ಕಮ್ಮನ ವಿಷಯುದಲ್ಲಿ ಪ್ರೇಮ, ವಿಶ್ವಾಸ ಬೆಳೆದಿದೆ ಆಕೆಯ ಕೋಣೆಯಲ್ಲಿ ಕುಳಿತು ಬಹಳ ಹೊತ್ತಿನ ವರೆಗೆ ಮಾತುಕತೆಯಾಡುತ್ತಾನೆ ಆಕೆ ಹೇಳಿದ ಹಿತ-ವಚನವನ್ನು ಕೇಳುತ್ತಾನೆ

ಇಂದು ಮಧ್ಯಾಹ್ನ ವ್ರಜೇಶ್ವರಿ ಕುಸುಮೆಯನ್ನು ಕರೆದುಕೊಂಡು ಕೆರೆಗೆ ಸ್ನಾನಕ್ಕಾಗಿ ಹೋಗಿದ್ದಳು ನೀರಿನಲ್ಲಿ ಇಳಿದ ಕೂಡಲೇ ಆಕೆಯ ದೃಷ್ಟಿ ಘಟ್ಟದ ಮೇಲೆ ದಪ್ಪವಾಗಿ ಬೆಳೆದ ಒಂದು ಮರದ ಕಡೆಗೆ ಹೋಯಿತು ಅದರ ಮರೆಯಲ್ಲಿ ನಿಂತು ಗೋವರ್ಧನ ನೆಟ್ಟ ನೋಟದಿಂದ ಇತ್ತಕಡೆಗೇ ನೋಡುತ್ತಿದ್ದಾನೆ ಆಗ ಅವಳು ಯಾವ ಮಾತನ್ನೂ ಆಡದೆ ಹಾಗೂ ಹೀಗೂ ಕೆಲಸ ಮುಗಿಸಿಕೊಂಡು ಮನೆಗೆ ಬಂದಳು ಗೋವರ್ಧನನೂ ಅಲ್ಲಿಯೇ ಅಂಗಳದಲ್ಲಿ ನಿಂತುಕೊಂಡು ತನ್ನ ಚಿಕ್ಕಮ್ಮನ ಕೂಡ ಹರಟೆ ಹೊಡಯುತ್ತಿ ದ್ದಾನೆ. ಕುಸುಮೆ ಮುಖದ ಮೇಲೆ ಸೆರಗನ್ನೆಳೆದುಕೊಂಡು ಅವನ ಎದುರಿ ನಿಂದ ಬೇಗ ಬೇಗನೆ ಒಳಗೆ ಹೋದಳು ವ್ರಜೇಶ್ವರಿ ಅವನ ಹತ್ತಿರ ಹೋಗಿ “ಏನಣ್ಣಾ, ಮೊದಲು ನಿನ್ನನ್ನು ಇಲ್ಲಿ ನೋಡುವುದೇ ಸಾಧ್ಯವಿದ್ದಿಲ್ಲ ಆದರೆ ಕೆಲವು ದಿನಗಳಿಂದ ನಮ್ಮ ಮೇಲೆ ನಿನ್ನ ಕೃಪೆಯಾದಂತೆ ತೋರುತ್ತದೆ ? ನೀನು ಇನ್ನು ನಮ್ಮ ಮನೆಗೆ ಬರು-ಹೋಗುವುದನ್ನು ಕಡಿಮೆ ಮಾಡಬೇಕು” ಎಂದಳು

ಮರದ ಮರೆಯಲ್ಲಿ ತಾನು ನಿಂತುದನ್ನು ವ್ರಜೇಶ್ವರಿ ನೋಡಿದ್ದಳೆನ್ನು ವುದು ಗೋವರ್ಧನನಿಗೆ ಗೊತ್ತಿರಲಿಲ್ಲ ವ್ರಜೇಶ್ವರಿಯ ಈ ಮಾತಿನಿಂದ ಅವನು ಪೆದ್ದನಂತಾಗಿ ನಿರುತ್ತರನಾದ

ಆದರೆ ಅವಳ ತಾಯಿ ಸಿಟ್ಟಿನಿಂದ ಕುದಿಯುತ್ತ, ಕೆಂಗಣ್ಣುಗಳನ್ನು ಹೊರಳಿಸುತ್ತ ಚೀರಿದಳು— " ಹೌದು, ಮೊದಲು ಅವನಿಗೆ ಮನಸ್ಸಿರಲಿಲ್ಲ, ಬರುತ್ತಿರಲಿಲ್ಲ, ಈಗ ಬರಬೇಕೆನ್ನಿಸಿದೆ, ಬರುತ್ತಾನೆ ಇದೆಲ್ಲ ನಿನಗೇಕೆ ? "

ಮಗಳು ಕೋಪಗೊಳ್ಳಲಿಲ್ಲ ಅವಳು ಸ್ವಾಭಾವಿಕವಾಗಿ " ಈ ಇಚ್ಛೆ ನನಗೆ ಸರಿಯೆನಿಸಲಿಲ್ಲ ಅಮ್ಮಾ, ನಾನು ಇಷ್ಟು ಹೇಳುವುದು ನನಗಾಗಿ ಅಲ್ಲ ಅತ್ತಿಗೆಯೂ ನಮ್ಮ ಮನೆಯಲ್ಲಿದ್ದಾಳೆ ಅವಳು ಹೆರವರ ಹೆಣ್ಣು-ಮಗಳೆಂಬುದನ್ನಾದರೂ ಲಕ್ಷ್ಯದಲ್ಲಿಡಬೇಕು " ಎಂದಳು

ತಾಯಿ ತನ್ನ ಧ್ವನಿಯನ್ನು ಸಪ್ತಮ ಸ್ವರಕ್ಕೇರಿಸಿ " ಅವಳು ಹೆರವರ ಹೆಣ್ಣುಮಗಳಾದರೆ ನನ್ನ ಅಕ್ಕನ, ಅಣ್ಣನ ಮಕ್ಕಳು ಹೆರವರಾಗಬೇಕೆ ? ನಮ್ಮ ಮನೆಗೆ ಅವರು ಬರಬಾರದೆ ? ಹೆರವರ ಹೆಣ್ಣುಮಗಳಾದರೇನಾಯಿತು, ಯಾವಾಗಲೂ ತೆರೆಯ ಮರೆಯಲ್ಲೇ ಇರುವಳೆ ? ಅವಳು ಹೊರಗೆ ಹೋಗುವ ರೀತಿ ನೋಡಿದರೆ ನನ್ನಂತಹ ಮುದುಕೆಗೂ ನಾಚಿಕೆಯಾಗುತ್ತದೆ" ಎಂದಳು

ತಾಯಿಯ ಇಂಗಿತ ಏನೆಂಬುದು ವ್ರಜೇಶ್ವರಿಗೆ ತಿಳಿಯಿತು ಆದುದರಿಂದ ಅವಳು ಸ್ವಲ್ಪ ಸುಮ್ಮನಾದಳು ಈಗ ಅವಳಿಗೆ ಕುಸುಮೆಯನ್ನು ಕುರಿತು ತಾನೇ ತನ್ನ ತಾಯಿಗೆ ಹೇಳಿದ ಮಾತು ನೆನಪಿಗ ಬಂದವು ಆದರೆ ಆಗಿನ ಸ್ಥಿತಿಯೆ ಬೇರೆ, ಈಗಿನ ಸ್ಥಿತಿಯೆ ಬೇರೆ ಆಗ ಅವಳು ಕುಸುಮೆಯನ್ನು ಪ್ರೀತಿಸುತ್ತಿರಲಿಲ್ಲ, ಈಗ ಪ್ರೀತಿಸುತಿದ್ದಾಳೆ ಹೀಗೆ ಪ್ರೀತಿಮಾಡುವುದೂ ಪ್ರೀತಿಪಾತ್ರವಾಗುವುದೂ ದೇವರ ದಯೆಯ ಹೊರತು ಸಾಧ್ಯವಿಲ್ಲ

ವ್ರಜೇಶ್ವರಿ ಹೋಗಲುದ್ಯುಕ್ತಳಾಗಿ ಗೋವರ್ಧನನ ಕಡೆ ಬಿರುನೋಟದಿಂದ ನೋಡುತ್ತ— " ಅಣ್ಣ, ಇದು ಬಹಳ ನಾಚಿಕೆಗೇಡಿತನದ ಮಾತು ನನ್ನಿಂದ ಏನನ್ನೂ ಬಾಯಿಬಿಟ್ಟು ಹೇಳಲು ಸಾಧ್ಯವಾಗಲಿಲ್ಲ ಆದರೆ ನಾನು ಎಲ್ಲವನ್ನೂ ನೋಡಿದ್ದೇನೆ ಇಲ್ಲಿಗೆ ಅಣ್ಣನಂತೆ ಬರುವುದಾದರೆ ಬಾ ಇಲ್ಲದಿದ್ದರೆ ನಿನ್ನಪಾಲಿಗೆ ದುಃಖವೇ ಕಾದಿದೆಯೆಂದು ಖಂಡಿತ ತಿಳಿದುಕೊ ಆ ದುಃಖದಿಂದ ನಿನ್ನನ್ನು ನನ್ನ ತಾಯಿಯೂ ಉಳಿಸಿಕೊಳ್ಳಲಾರಳು " ಎಂದಳು ಆಮೇಲೆ ಅವಳು ತನ್ನ ಕೋಣೆಗೆ ಹೋದಳು

ಗೋವರ್ಧನ ಸ್ವಲ್ಪ ತಲೆತಗ್ಗಿಸಿ " ಚಿಕ್ಕಮ್ಮಾ, ನಿನ್ನಾಣೆ— ನನಗೆ ಗೊತ್ತಿಲ್ಲ–ಯಾವನೊ ಆ ಗಿಡದ ಮರೆಯಲ್ಲಿ–ನಾನು ಹಲ್ಲುಕಡ್ಡಿ ಮುರಿಯಲು-

ಮಿಠಾಯಿ ಅಂಗಡಿಯವನನ್ನು ಕೇಳೋಣ ನಡೆ— ಅವಳು ಬೇಕಾದರೆ ನನ್ನೊಂದಿಗೆ ನಮ್ಮ ಓಣಿಗೆ ಬರಲಿ, ಪ್ರಮಾಣಿಸಿ ಕೊಡುವೆ-" ಹೀಗೆ ಹೇಳುತ್ತ ಮೆಲ್ಲಗೆ ಅಲ್ಲಿಂದ ಜಾರಿದ

ವ್ರಜೇಶ್ವರಿ ಸೀರೆ ಬದಲಿಸಿ ಕುಸುಮೆಯ ಕೋಣೆಗೆ ಹೋದಳು ಕುಸುಮೆ ಇನ್ನೂ ಒದ್ದೆ ಸೀರೆಯಿಂದ ಹಾಗೆಯೆ ನಿಂತುಕೊಂಡು ಹೊರಗೆ ನೋಡುತಿದ್ದಳು ಕಾಲಿನ ಸಪ್ಪಳವನ್ನು ಕೇಳಿ ಬಿಗಿದ ಕಂಠದಿಂದ "ಏಕೆ ಅತ್ತಿಗೆ, ನೀನು ನನ್ನ ವಿಷಯದಲ್ಲಿ ವ್ಯರ್ಥವಾಗಿ ಏಕೆ ಕೈಹಾಕಹೋದೆ? ನನ್ನನ್ನು ಇಲ್ಲಿ ಇರಗೊಡಲಾರೆಯಾ?" ಎಂದಳು

"ಮೊದಲು ಒಣಗಿದ ಸೀರೆಯನ್ನುಟ್ಟುಕೊ, ಉಳಿದುದೆಲ್ಲ ಆಮೇಲೆ" ಎಂದು ವ್ರಜೇಶ್ವರಿ ಒತ್ತಾಯದಿಂದ ಒಣ ಸೀರೆಯನ್ನುಡಿಸಿದಳು ಬಳಿಕ ಅವಳು "ಅತ್ತಿಗ, ಯಾರ ವಿಷಯದಲ್ಲಿಯೂ ನನಗ ಅನ್ಯಾಯವೆಂದರೆ ಆಗದು ಇನ್ನು ಅವನಿಗೆ ಮನೆಯಲ್ಲಿ ಕಾಲಿಡಗೊಡುವುದಿಲ್ಲ ನನಗ ಅವನ ಉದ್ದೇಶವೇನೆಂಬುದು ತಿಳಿದಿದೆ" ಎಂದಳು ತನ್ನ ತಾಯಿಯ ಮನಸ್ಸಿನಲ್ಲಿ ಏನಿದೆಯೆಂಬುದನ್ನು ಹೇಳಲು ಅವಳಿಗ ಬಹಳ ನಾಚಿಕೆಯಾಯಿತು

ಕುಸುಮೆ ಅಳುದನಿಯಲ್ಲಿ "ಯಾರ ಮನಸ್ಸಿನಲ್ಲಿ ಏನೂ ಇರಲಿ ಅತ್ತಿಗ, ನಿನ್ನ ಕಾಲಿಗ ಬೀಳುತ್ತೇನೆ, ನನ್ನ ವಿಷಯದಲ್ಲಿ ಜಗಳವನ್ನೆಬ್ಬಿಸಿ ನನ್ನನ್ನು ಇನ್ನಿಷ್ಟು ಸಂಕಟದಲ್ಲಿ ದೂಡಬೇಡ" ಎಂದಳು

"ನಾನು ಬದುಕಿರುವ ವರೆಗೆ ನಿನಗ ಯಾವ ತೊಂದರೆಯೂ ಬರಲಾರದು"

ಕುಸುಮೆ ತಲೆಯಲ್ಲಾಡಿಸಿ "ಬಂದೇ ಬರುವುದು ಬರುವುದೆನ್ನುವುದು ಸ್ಪಷ್ಟವಾಗಿ ಕಾಣುತ್ತಿರುವುದು ನನ್ನ ಈ ಹಾಳು ಭಾಗ್ಯದೊಂದಿಗೆ ಎಲ್ಲಿ ಹೋಗುತ್ತೇನೊ ಅಲ್ಲಿ ನನಗಾಗಿ ಸಂಕಟ ಸಿದ್ಧವಾಗಿಯೆ ಇರುವುದು ನನ್ನನ್ನು ಕಾಪಾಡುವ ಇಚ್ಛೆ ದೇವರಿಗೂ ಇಲ್ಲವೆಂದು ತೋರುತ್ತದ" ಎಂದು ಹಣೆ ಬಡೆದುಕೊಳ್ಳುತ್ತ ಅಳತೊಡಗಿದಳು

ವ್ರಜೇಶ್ವರಿ ಸ್ನೇಹದಿಂದ ಅವಳ ಕಣ್ಣೊರೆಸಿ ಸ್ವಲ್ಪ ಹೊತ್ತು ಸುಮ್ಮನಿದ್ದು ಸಾವಕಾಶವಾಗಿ "ನೀನು ಹೇಳುವುದೂ ಸಂಪೂರ್ಣ ಸುಳ್ಳಲ್ಲ. ಆದರೆ ಅಕ್ಕ, ಅಸಮಾಧಾನಗೊಂಡು ಬರಿಯ ಭಾಗ್ಯಕ್ಕೆ ದೋಷ ಕೊಟ್ಟರೆ ಪ್ರಯೋಜನವೇನು? ಇದರಲ್ಲಿ ನಿನ್ನ ತಪ್ಪೂ ಕಡಿಮೆ ಇಲ್ಲ" ಎಂದಳು.

ಕುಸುಮೆ ವ್ರಜೇಶ್ವರಿಯನ್ನು ನೋಡುತ್ತ " ಇದರಲ್ಲಿ ನನ್ನ ತಪ್ಪೇನು? ನನ್ನ ಬಾಲ್ಯದ ಎಲ್ಲ ಸಂಗತಿ ನೀನು ಕೇಳಿರಬಹುದು " ಎಂದಳು

" ಹೌದು, ಕೇಳಿದ್ದೇನೆ ಆದರೆ ಅದು ಅಡಿಯಿಂದ ಮುಡಿಯ ವರೆಗೂ ಸುಳ್ಳು ನೀನು ಚೆದುರೆ, ಎಲ್ಲವನ್ನೂ ತಿಳಿದುಕೊಂಡಿರುವೆ, ಕೇಳಿರುವೆ ಆದರೂ ಕುಂಕುಮ ಹಚ್ಚಿಕೊಳ್ಳುವುದಿಲ್ಲ, ಕೈಯಲ್ಲಿ ಬಳೆ ತೊಟ್ಟುಕೊಳ್ಳುವುದಿಲ್ಲ, ಅತ್ತೆಯ ಮನೆಗೂ ಹೋಗುವುದಿಲ್ಲ ಇದು ಭಾಗ್ಯದ ತಪ್ಪೊ, ನಿನ್ನ ತಪ್ಪೊ ? ಆಗ ನೀನು ಅಜ್ಞಾನಿಯಿದ್ದಿಯೆಂಬುದು ನಿಜ ಆದರೆ ಈಗ ಅಜ್ಞಾನಿಯಲ್ಲವಲ್ಲ ? ಯಾವ ಸಧವೆ ಸಿಟ್ಟಿಗೆ ವಶಳಾಗಿ ವಿಧವೆಯ ವೇಷದಿಂದ ಇರಬಲ್ಲಳು ಹೇಳು ನೋಡೋಣ ? "

" ಇದೆಲ್ಲವೂ ನನಗೆ ಗೊತ್ತು ಬರಿಯ ಕುಂಕುಮ, ಬಳೆಗಳಿಂದ ಜನರು ನಂಬುವುದಿಲ್ಲ ನಿನ್ನ ಗಂಡ ಯಾರೆಂದು ಕೇಳದೆ ಬಿಡುವರೆ ? ಇದಕ್ಕ ಸಾಕ್ಷಿ ಏನು ? ಇದಲ್ಲದೆ ಅವರಾದರೂ ನನ್ನನ್ನು ತಮ್ಮ ಮನೆಗೆ ಕರದುಕೊಂಡು ಹೋದಾರೆ ? "

ವ್ರಜೇಶ್ವರಿ ವಿಸ್ಮಯದಿಂದ " ಎಂತಹ ಮಾತನ್ನಾಡುತ್ತಿರುವೆ ಅತ್ತಿಗೆ ! ಇದಕ್ಕೂ ಹೆಚ್ಚಿನ ಪ್ರಮಾಣ ಏತಕ್ಕೆ ಬೇಕು ? ಈ ವಿಷಯದಲ್ಲಿ ಇದೇ ಮನೆಯಲ್ಲಿ ನಂದಕಕ್ಕನೆದುರು ಏನು ನಡೆಯಿತೆಂಬುದು ನಿನಗ ಗೊತ್ತೇ ಇಲ್ಲವೆ ? " ಎಂದಳು

ಸ್ವಲ್ಪ ಹೊತ್ತು ಸುಮ್ಮನಿದ್ದು ಮರಳಿ ವ್ರಜೇಶ್ವರಿಯೆ, " ನಿನ್ನ ಅಣ್ಣನಿಗೆ ಎಲ್ಲವೂ ಗೊತ್ತಿದೆ ಅವರು ನಿನಗೆ ಏನನ್ನೂ ಹೇಳಲಿಲ್ಲವೆ ? ಎಲ್ಲವನ್ನು ತಿಳಿದುಕೊಂಡೇ ನೀನು ಇಲ್ಲಿಗ ಬಂದಿರುವೆಯೆಂದು ನಾನು ತಿಳಿದಿದ್ದೆ ಇಲ್ಲಿ ನಡೆದ ಸಂಗತಿಯನ್ನು ಹೇಳುವುದರಿಂದ ನಿನಗ ಅಸಮಾಧಾನವಾಗಬಹುದೆಂದು, ದುಃಖವಾಗಬಹುದೆಂದು, ನಾನು ಈ ಮಾತನ್ನು ಎತ್ತಿರಲಿಲ್ಲ ನೀನು ಇಲ್ಲಿ ಬಂದುದಕ್ಕಾಗಿ ನನಗೆ ಕೋಪ ಕೂಡ ಬಂದಿತ್ತು " ಎಂದಳು

ಕುಸುಮೆ ಉದ್ವೇಗದಿಂದ " ಇಲ್ಲ ಅತ್ತಿಗ, ನನಗೆ ಏನೂ ಗೊತ್ತಿಲ್ಲ ಏನೇನು ನಡೆಯಿತು ಹೇಳು ? " ಎಂದಳು

ವ್ರಜೇಶ್ವರಿ ತನಿಯುಸುರು ಬಿಡುತ್ತ ಹೇಳಿದಳು— " ಸರಿ, ಅಣ್ಣನಂತೆಯೇ ತಂಗಿ ! ವೃಂದಾವನರಿಗ ನಂದಕಕ್ಕನ ಮಗಳ ಸಂಬಂಧವು ನಿಶ್ಚಯವಾದಾಗ ನೀನು ಯಾತ್ರೆಗೆ ಹೋಗಿದ್ದೆ ಈ ವಿವಾಹಸಂಬಂಧಕ್ಕೆ

ನಿನ್ನ ಅಣ್ಣನವರು ಬಹಳ ಅಡ್ಡಿ ಮಾಡಿದರು ಕೊನೆಗೆ ವೃಂದಾವನರು ಸುಮ್ಮನಿರಬೇಕಾಯಿತು ಆಗ ನಮ್ಮ ಅತ್ತೆಯ ವಿಷಯ, ನಿನ್ನ ವಿಷಯ, ವೃಂದಾವನರ ಕಡೆಯವರ ವಿಷಯ, ಎಲ್ಲವೂ ಸ್ಪಷ್ಟವಾಯಿತು ಆ ಮಾತು-ಕತೆಯಲ್ಲಿ ಪ್ರಕಟವಾದ ಮಾತನ್ನು ನಂದಕಕ್ಕ ಒಪ್ಪಿಕೊಳ್ಳಲಿಲ್ಲ ಏಕೆಂದರೆ ಅವನಿಗೆ ತನ್ನ ಮಗಳನ್ನು ವೃಂದಾವನರಿಗ ಕೊಡುವ ಇಚ್ಛೆ ಇದ್ದಿತು ಆದುದರಿಂದ ನಿನ್ನ ಬಾಲ್ಯದಲ್ಲಿ ನಡೆದ ನಿಜ ಸಂಗತಿಯನ್ನರಿತುಕೊಳ್ಳಲು ದೇವಸ್ಥಾನದ ಮುಖ್ಯ ಪುರೋಹಿತರನ್ನು ಕರೆಯಲಾಯಿತು ಅವರು ಬಂದು ನಿನ್ನ ಬಾಲ್ಯದಲ್ಲಿ ನಡದ ಎಲ್ಲ ಸಂಗತಿಯೂ ಸುಳ್ಳು ಎಂದು ತೀರ್ಮಾನ ವಿತ್ತರು ಏಕೆಂದರೆ ಅವರಿಗ – ಪುರೋಹಿತರಿಗೆ – ಈ ಮಾತನ್ನು ತಿಳಿಸದೆ, ಅವರ ಅಪ್ಪಣೆ ಪಡೆಯದೆ, ಇಂತಹ ಕೆಲಸಗಳು ನಮ್ಮ ಸಮಾಜದಲ್ಲಿ ನಡೆ-ಯುವುದಿಲ್ಲ ಇದಲ್ಲದೆ ಈ ಕೆಲಸ ಮಾಡಿದವರನ್ನು — ನಿನ್ನ ಮಂಗಲ ಸೂತ್ರ ಬದಲಾವಣೆ ಮಾಡಿದವರನ್ನು – ಎದುರಿಗೆ ತಂದು ನಿಲ್ಲಿಸಲು ಅವರು ನಂದಕಕ್ಕನಿಗೆ ಹೇಳಿದರು ಕೊನೆಗೆ ನಂದಕಕ್ಕನು ‘ ಮಂಗಲ ಸೂತ್ರ ಬದ-ಲಾಯಿಸುವ ಮಾತು ಮಾತ್ರ ನಿಶ್ಚಯವಾಗಿದ್ದಿತು, ಮಂಗಲಸೂತ್ರ ಬದ-ಲಾವಣೆಯಾಗಿರಲಿಲ್ಲ ’ ಎಂಬುದನ್ನು ಒಪ್ಪಿಕೊಳ್ಳಬೇಕಾಯಿತು ”

ಕುಸುಮೆ ಸಂದೇಹದಿಂದ ಉಸಿರು ಬಿಗಿಹಿಡಿದುಕೊಂಡು “ ಬದಲಾ ಯಿಸಲಿಲ್ಲವೆ ? ಅತ್ತಿಗೆ, ಇದನ್ನು ನಾನು ಊಹಿಸಿಕೊಂಡಿದ್ದೆ ಮಾತ್ರ ಈ ಎಲ್ಲ ಮಾತು ಏತಕ್ಕಾಗಿ ಬಂದುವು ? ” ಎಂದು ಕೇಳಿದಳು

ವ್ರಜೇಶ್ವರಿ ನಗುತ್ತ “ ನಿನ್ನ ಅಣ್ಣನವರಿಗೆ ಮೇಲಿಂದ ಮೇಲೆ ಹುಚ್ಚು ಆವೇಶ ಬರುವುದಿಲ್ಲವೆ ? ಬೇರೆಯವರಾಗಿದ್ದರೆ ಲೋಕಲಜ್ಜೆಗೆ ಹೆದರಿ ಯಾದರೂ ಈ ರಾಮಾಯಣ ಬೆಳೆಯಗೊಡುತ್ತಿರಲಿಲ್ಲ ಆದರೆ ಅವರಿಗೆ ಇದರ ಪರಿವೆಯೆ ಇಲ್ಲ ಆದುದರಿಂದ ಅವರು ‘ ನನ್ನ ತಂಗಿಯ ಗಂಡ ನನ್ನ ತಂಗಿಯ ತಪ್ಪು ಇಲ್ಲದಿರುವಾಗ, ನನ್ನ ತಾಯಿ ಮಂಗಲಸೂತ್ರ ಬದಲಾಯಿ ಸದಿದ್ದಾಗ, ತನ್ನ ಹೆಂಡತಿಯನ್ನು ಮನೆಗೆ ಏಕೆ ಕರೆದುಕೊಂಡು ಹೋಗ-ಲಾರ ? ನಂದಕಕ್ಕ ತನ್ನ ಮಗಳನ್ನು ವೃಂದಾವನನಿಗೆ ಹೇಗೆ ಕೊಡಬಲ್ಲ ? ’ ಎಂದು ಗಲಭೆಯನ್ನು ಎಬ್ಬಿಸಿದರು ” ಎಂದಳು

ಕುಸುಮೆ ನಾಚಿಕೆಯಿಂದ ಪುಲುಕಿತಳಾಗಿ “ ಛೀ ಛೀ, ಮುಂದೆ ? ” ಎಂದಳು

" ಬಳಿಕ ಹೆಚ್ಚಿಗೆ ಏನೂ ನಡೆಯಲಿಲ್ಲ ನನ್ನ ಅತ್ತೆ–ನಿಮ್ಮ ತಾಯಿ, ನಂದ ಕಕ್ಕನ ಹೆಂಡತಿ, ಇಬ್ಬರೂ ಒಂದೇ ಊರಿನವರು ಅತ್ತೆಯವರು ಕ್ರೋಧ, ದುಃಖ, ಲಜ್ಜೆ, ಮತ್ತು ಅಭಿಮಾನದಿಂದ ನಿನ್ನನ್ನು ಇಲ್ಲಿಗೆ ಕರೆದು ಕೊಂಡು ಬಂದರು ಅವರ ಮಗನ ಕೂಡ ಮಂಗಲಸೂತ್ರ ಬದಲಾವಣೆಯ ನಿಶ್ಚಯವಾಯಿತು ಆದರೆ ಬದಲಾವಣೆಯಾಗಲಿಲ್ಲ ಅತ್ತಿಗೆ, ಇದೆಲ್ಲವನ್ನೂ ಸ್ವತಃ ವೃಂದಾವನರೇ ಕೇಳಿ ಹೋಗಿದ್ದಾರೆ ಯಾವುದೊಂದು ನೆವದಿಂದ ಲಾದರೂ ಸರಿ, ಅವರೂ ನಿನಗೆ ಹೇಳಲಿಲ್ಲವೆ ? ನಿನ್ನನ್ನು ಅವರು ಪ್ರೀ .... ಎಂದು ಕೇಳಿದ್ದೆ "

ಕುಸುಮೆ ಮುಖ ಹೊರಳಿಸಿ "ಅತ್ತಿಗೆ, ಅಂದು ಅವರು ಈ ಮಾತನ್ನು ಹೇಳುವುದಕ್ಕಾಗಿಯೆ ಬಂದಿದ್ದರೆಂದು ತೋರುತ್ತದೆ" ಎಂದಳು

ವ್ರಜೇಶ್ವರಿ ಅಚ್ಚರಿಯಿಂದ " ಎಂದು ? ಈ ನಡುವೆ ಅವರು ನಿಮ್ಮ ಮನೆಗೆ ಬಂದಿದ್ದರೇನು ? " ಎಂದು ಕೇಳಿದಳು

" ಅಹುದು, ನಾನೂ ಅಣ್ಣನೂ ಇಲ್ಲಿಗೆ ಬಂದ ದಿನವೇ ಬಂದಿದ್ದರು "

" ಆಗ ಏನು ನಡೆಯಿತು ? "

" ನನ್ನ ಮೊಂಡತನದಿಂದ ಏನನ್ನೂ ಹೇಳದೆ ಹಾಗೆಯೆ ಹೋಗಿ ಬಿಟ್ಟರು "

ವ್ರಜೇಶ್ವರಿ ಮುಗುಳು ನಗುತ್ತ " ಇದನ್ನೇನು ಮಾಡಿದೆ ನೀನು ? ನಿನ್ನ ಲತಾಮಂಟಪದಲ್ಲಿ ಅವರನ್ನು ಬರಗೊಡಲಿಲ್ಲವೇನು ? ಅಥವಾ ಅವ ರೊಂದಿಗೆ ಮಾತನ್ನೇ ಆಡಲಿಲ್ಲವೊ ? " ಎಂದಳು

ಕುಸುಮೆ ಉತ್ತರ ಕೊಡಲಿಲ್ಲ ಅವಳು ಒಂದು ಮೆಲ್ಲುಸಿರನ್ನೆಳೆದು ಕೊಂಡು ತಲೆಬಾಗಿಸಿ ಕುಳಿತಿದ್ದಳು

ವ್ರಜೇಶ್ವರಿ ಮತ್ತೇನನ್ನೂ ಕೇಳಲಿಲ್ಲ ಸಂಜೆಯ ಮಬ್ಬುಗತ್ತಲು ದಟ್ಟ ವಾಗುತ್ತ ನಡೆದಿದ್ದಿತು ಅಲ್ಲಲ್ಲಿ ಕೇಳಿಸುವ ಶಂಖಧ್ವನಿಯಿಂದ ಅವಳು ಎಚ್ಚತ್ತು ಎದ್ದು ನಿಂತು-- " ಅತ್ತಿಗೆ, ನೀನು ಸ್ವಲ್ಪ ಕುಳಿತುಕೋ ನಾನು ಈಗ ದೀಪಹಚ್ಚಿ ಬರುತ್ತೇನೆ" ಎಂದಳು

ಸ್ವಲ್ಪ ಹೊತ್ತಿನಲ್ಲಿ ವ್ರಜೇಶ್ವರಿ ಮರಳಿ ಬಂದಾಗ ಕುಸುಮೆ ನೆಲದ ಮೇಲೆ ಮುಖವನ್ನಿಟ್ಟು ಬಿಕ್ಕಿ ಬಿಕ್ಕಿ ಅಳುತ್ತಿದ್ದಳು ವ್ರಜೇಶ್ವರಿ ದೀಪವನ್ನು ಯಥಾ ಸ್ಥಾನದಲ್ಲಿಟ್ಟು ಕುಸುಮೆಯ ಹತ್ತಿರ ಬಂದು ಕುಳಿತಳು ಆಮೇಲೆ

ಅವಳು ಕುಸುಮೆಯ ತಲೆಯ ಮೇಲೆ ಕೈಯಿಟ್ಟು ಬಹಳ ಹೊತ್ತಿನ ನಂತರ "ಅತ್ತಿಗೆ, ನಿಜವಾಗಿಯೂ ನಿನ್ನ ಈ ಕೆಲಸ ಸರಿಯಾಗಲಿಲ್ಲ ಆಗ ಏನು ನಡೆಯಿತೆಂಬುದು ನನಗೆ ಗೊತ್ತಿಲ್ಲ ಆದರೆ ನೀನು ಯಾರು, ಅವರು ಯಾರು ಎಂಬುದು ನಿನಗೆ ಗೊತ್ತಿದ್ದಮೇಲೆ ಅವರ ಅಪ್ಪಣೆಯನ್ನು ಮೀರಿದ್ದು ತಕ್ಕುದ್ದಲ್ಲ" ಎಂದಳು

ಕುಸುಮೆ ತಲೆಯನ್ನು ಮೇಲಕ್ಕೆತ್ತಲಿಲ್ಲ ಅವಳು ಸುಮ್ಮನೆ ಕೇಳುತ್ತಿದ್ದಳು ವ್ರಜೇಶ್ವರಿಯೆ ಮರಳಿ ಹೇಳಿದಳು— "ಸ್ವತಃ ನೀನು ಹೇಳಿದ ಮಾತನ್ನೆ ಯೋಚಿಸಿದರೆ, ನಿನ್ನ ಸ್ಥಿತಿಯೆ ನನಗೆ ಬಂದಿದ್ದರೆ, ಅವರ ಮನೆಗೆ ನಾನು ನಡೆದು ಹೋಗಲು ಮಾತ್ರವೇಕೆ, ಮೂಗು ತಿಕ್ಕುತ್ತ ಹೋಗಲು ಅವರು ಆಜ್ಞಾಪಿಸಿದ್ದರೂ ಸಂತೋಷದಿಂದ ಹೋಗುತ್ತಿದ್ದೆ"

ಕುಸುಮೆ ಹಾಗೆಯೆ ಬಿದ್ದುಕೊಂಡು ಅಸ್ಪಷ್ಟವಾಗಿ "ಇದನ್ನು ಬಾಯಿಯಿಂದ ಹೇಳುವುದು ಸುಲಭ ಅತ್ತಿಗೆ, ಮಾಡುವುದು ಬಹಳ ಕಷ್ಟ" ಎಂದಳು

"ಎಳ್ಳಷ್ಟೂ ಕಷ್ಟವಲ್ಲ ಹಾಗೆ ಮಾಡುವುದರಿಂದ ಗಂಡನ ಸಾನ್ನಿಧ್ಯ ದೊರೆಯುತ್ತದೆ, ಮಗ ದೊರೆಯುತ್ತಾನೆ, ಹೊಟ್ಟೆ-ಬಟ್ಟೆಗೆ ದೊರೆಯುತ್ತದೆ ಇಷ್ಟೆಲ್ಲಾ ದೊರೆತ ಮೇಲೆ ಹೆಂಗುಸಿಗೆ ಕಷ್ಟವೆಂಬುದೇ ಉಳಿಯುವುದಿಲ್ಲ ನನಗೆ ಇದು ಯಾವುದೂ ಸಿಗದಿದ್ದರೂ ನಾನು ಗಂಡನ ಮನೆಯಿಂದ ಹಿಂದಿರುಗುತ್ತಿದ್ದಿಲ್ಲ ನನ್ನ ಮೋರೆಯ ಮೇಲೆ ಉಗುಳಿದರೂ ನಾನು ಅಲುಗಾಡುತ್ತಿದ್ದಿಲ್ಲ ಹೊಡೆಯದಿದ್ದರೆ ಮತ್ತೇತರ ಹೆದರಿಕೆ ? 'ಇಲ್ಲಿಂದ ಹೊರಬೀಳು' ಎಂದರೆ ನೀವೇ ಹೋಗಿರಿ ಎನ್ನುತ್ತಿದ್ದ ಹೊರಬೀಳದಿರುವ ಹಟವನ್ನೆ ಹಿಡಿದರೆ ಅವರೇನು ಮಾಡಬಲ್ಲರು ಹೇಳು ?"

ವ್ರಜೇಶ್ವರಿಯ ಮಾತಿನಿಂದ ಕುಸುಮೆ ಇಂತಹ ದುಃಖದಲ್ಲಿಯೂ ನಕ್ಕುಬಿಟ್ಟಳು

ಆದರೆ ವ್ರಜೇಶ್ವರಿ ತಾನೂ ನಗಲಿಲ್ಲ ತನ್ನ ಮನಸ್ಸಿನೊಳಗಿನ ಮಾತನ್ನು ಹೇಳುವುದರಲ್ಲಿ ತೊಡಗಿದ್ದಳು ಅವಳು ಕುಸುಮೆಯನ್ನು ನಗಿಸುವ ಇಲ್ಲವೆ ಸಮಾಧಾನಪಡಿಸುವ ಉದ್ದೇಶ ಅವಳದಿರಲಿಲ್ಲ ಅವಳು ಇನ್ನೂ ಗಂಭೀರಳಾಗಿ ತಿಳಿಹೇಳಿದಳು— "ಅತ್ತಿಗೆ, ನನ್ನ ಮಾತನ್ನು ಕೇಳು, ನೀನು ಅವರ ಬಳಿಗೆ ಹೋಗು ಇಂತಹ ಗಂಡಾಂತರದ ದಿನಗಳಲ್ಲಿ ಗಂಡನನ್ನೂ ಮಗನನ್ನೂ ಒಂಟಿಯಾಗಿ ಬಿಡಬೇಡ"

ವ್ರಜೇಶ್ವರಿಯ ಸ್ವರದಲ್ಲಿ ಒಮ್ಮಿಂದೊಮ್ಮೆ ಉಂಟಾದ ಈ ಬದಲಾವಣೆ ಯನ್ನು ಕುಸುಮೆ ಎಲ್ಲವನ್ನೂ ಮರೆತು ಕೇಳಿದಳು--" ಗಂಡಾಂತರದ ದಿನ ಗಳೆಂದರೆ ಏನು ? "

" ಇದು ಸಂಕಟ ಸಮಯವಲ್ಲದೆ ಮತ್ತೇನು ? ವೃಂದಾವನರ ಮನೆ ಯಲ್ಲಿ ಕ್ಷೇಮವಾಗಿದ್ದಾರೆಂಬುದು ನಿಜ ಆದರೆ ಬಾಡಾಲದಲ್ಲಿ ಪಿಡುಗು ತಲೆ ಎತ್ತಿರುವುದು ಸುಳ್ಳೇನು ? ಇತ್ತೀಚೆ ಅದರ ಅಬ್ಬರ ಬಹಳವಾಗಿದೆಯೆಂದು ನಿನ್ನ ಅಣ್ಣನವರು ಇದೀಗ ಹೇಳಿದರು ದಿನಕ್ಕೆ ಹತ್ತಿಪ್ಪತ್ತು ಜನರು ಸಾಯು ತಿದ್ದಾರೆ ಏ ಏ, ಅತ್ತಿಗೆ, ಇದೇನಿದು ? ನನ್ನ ಕಾಲು ಹಿಡಿಯಬೇಡ "

ಕುಸುಮೆ ಅವಳ ಕಾಲನ್ನು ಗಟ್ಟಿಯಾಗಿ ಹಿಡಿದುಕೊಂಡು ಅಳುತ್ತ- "ಅವರು ಚರಣನನ್ನು ನನಗೆ ಒಪ್ಪಿಸಲು ಬಂದಿದ್ದರು ಅತ್ತಿಗೆ! ಆದರೆ ನಾನೇ ನಿರಾಕರಿಸಿದೆ ನಾನು ಅವರ ಯಾವ ಮಾತನ್ನೂ ಕೇಳಲಿಲ್ಲ ಅತ್ತಿಗೆ "

ವ್ರಜೇಶ್ವರಿ ಅವಳನ್ನು ತಡೆದು " ಆಗಲಿ, ಈಗ ಎಲ್ಲವೂ ತಿಳಿಯಿ- ತಲ್ಲವೆ ? ಈಗ ಹೋಗಿ ಹುಡುಗನನ್ನು ನೋಡಿಕೊ " ಎಂದಳು

" ಆದರೆ ಈಗ ಯಾವ ಮೋರೆಯಿಂದ ಹೋಗಲಿ ? " ಎಂದಳು

ವ್ರಜೇಶ್ವರಿ ಏನೋ ಹೇಳಬೇಕೆನ್ನುತ್ತಿದ್ದಳು, ಅಷ್ಟರಲ್ಲಿ ಯಾರೊ ಬರು ತ್ತಿರುವಂತೆ ತೋರಿತು ಹೊರಳಿ ನೋಡಿದರೆ ಬಾಗಿಲಿನ ಹತ್ತಿರ ತಾಯಿ ನಿಂತಿದ್ದಾಳೆ ತಾಯಿ-ಮಗಳ ದೃಷ್ಟಿ-ಸಂಗಮವಾದೊಡನೆ ತಾಯಿಯ ಕೊಂಕುನುಡಿ ಕೇಳಬಂದಿತು— " ಅತ್ತಿಗೆಗೆ ಏನೋ ಸಲಹೆ ಕೊಡುತ್ತಿರು ವಂತಿದೆ ! "

ವ್ರಜೇಶ್ವರಿ ಸ್ವಾಭಾವಿಕವಾಗಿ "ಅಮ್ಮಾ, ನೀನು ಒಳಗೆ ನಡೆ ತಮ್ಮ- ತಮ್ಮವರಿಗೆ ಯಾರಾದರೂ ಕೆಟ್ಟ ಮಾತು ಹೇಳಿ ಕೊಡುತ್ತಾರೆಯೆ ? ನೀನು ಹೆದರಬೇಡಮ್ಮ " ಎಂದಳು

ತಾಯಿಯ ಹೊಟ್ಟೆಯಲ್ಲಿ ಕ್ರೋಧಾಗ್ನಿ ಒಳಗಿಂದೊಳಗೇ ಹೊಗೆಯಾ ಡುತ್ತಿದ್ದಿತು ಈಗ ಅವಳು ಆರ್ಭಟಿಸತೊಡಗಿದಳು— " ಹಾಗಾದರೆ ಹೇಳಿ ಕೊಡುವವಳು ನಾನು ಎಂದು ಇದಗ ಅರ್ಥವೇನು ? ಈ ಮನೆ ನೆಲಸಮ ವಾಗುವುದೆಂದು ಈ ಕುಲನಾಶಿನಿ ಇಲ್ಲಿ ಕಾಲಿಟ್ಟೊಡನೆಯೆ ನಾನು ತಿಳಿದು ಕೊಂಡಿದ್ದೆ ಕುಂಜನಾಥ ಇವಳ ಮೋರೆ ನೋಡಲೂ ಹೇಸುತ್ತಿರುವುದು ಸುಮ್ಮನೆಯೆಂದು ತಿಳಿದೆಯಾ ? ಇವಳ ಸ್ವಭಾವ, ಲಕ್ಷಣ, ಅಂತಹದು "

ತಾಯಿಗೆ ತಿರಿಗಿ ಇಂತಹ ಬಾಣಗಳನ್ನೆ ಬಿಡುವ ಬಯಕೆ ಮಗಳಿಗಿತ್ತು. ಆದರೆ ಕುಸುಮೆ ಮೆಲ್ಲನೆ ಚಿವುಟಿದುದರಿಂದ ಸುಮ್ಮನಾಗಿ ಸ್ವಲ್ಪ ಹೊತ್ತಿನ ಮೇಲೆ "ಆದುದರಿಂದಲೇ ಈ ಕುಲನಾಶಿನಿಗೆ 'ಅತ್ತೆಯ ಮನೆಗೆ ಹೋಗು, ಇಲ್ಲಿ ಇರಬೇಡ' ಎಂದು ನಾನು ಹೇಳಿಕೊಡುತ್ತಲಿದ್ದೆ" ಎಂದಳು

ಅತ್ತೆಮನೆ ಎಂದೊಡನೆ ತಾಯಿ ತಾಂಬೂಲರಂಜಿತ ತುಟಿಗಳನ್ನು ತೆರೆದು ವಿಭೂತಿ ಪೂಸಿದ ಮುಖವನ್ನು ಮುದುಡಿಸುತ್ತ "ಅತ್ತಿಗೆಯನ್ನು ಕಳಿಸುವುದು ಯಾವ ಅತ್ತೆಯ ಮನೆಗೆ ? ನಂದ ವೈಷ್ಣವನ " ಎಂದಳು.

ಈಸಲ ವ್ರಜೇಶ್ವರಿ ತಾಯಿಯನ್ನು ಗದ್ದರಿಸುತ್ತ "ಎಲ್ಲವೂ ಗೊತ್ತಿದ್ದೂ ತಿಳಿಯದವರಂತೆ ಮಾತನಾಡಿ ವ್ಯರ್ಥವಾಗಿ ಯಾರ ಅಪಮಾನವನ್ನೂ ಮಾಡಬೇಡ ಹುಡಿಗೆಯರಿಗೆ ಹತ್ತೆಂಟು ಅತ್ತೆಯ ಮನೆಗಳಿರುವುದಿಲ್ಲ ಇಂದು ನೀನು ನಂದವೈಷ್ಣವನ ಹೆಸರನ್ನುಚ್ಚರಿಸಿದೆ ನಾಳೆ ನಿನ್ನ ಗೋವರ್ಧನನ ತಂದೆಯ ಹೆಸರನ್ನೂ ಹೇಳಬಹುದು ಇದೆಲ್ಲವನ್ನೂ ಅವಳು ತಲೆತಗ್ಗಿಸಿ ಸುಮ್ಮನೆ ಕೇಳಬೇಕೆ ?" ಎಂದಳು

ಮಗಳ ಈ ನಿಷ್ಠುರ, ಸ್ಪಷ್ಟವಾಣಿಯನ್ನು ಕೇಳಿ ತಾಯಿ ಮದ್ದಿನ ಕುಡಿಕೆಯಂತೆ ಸಿಡಿಯುತ್ತ ಚೀರಿದಳು–"ಕತ್ತೆ, ನೀನು ಮಗಳಾಗಿ ತಾಯಿಯ ಮೇಲೆ ಇಷ್ಟು ದೊಡ್ಡ ಅಪವಾದ ಹೊರಿಸುವೆಯಾ ?"

"ಇದು ಬರಿಯ ಅಪವಾದವಲ್ಲ, ಸಂಪೂರ್ಣ ಸತ್ಯವಾದ ಮಾತು ಅಮ್ಮಾ, ನಿನ್ನಂತಹ ನಾಲ್ವರು ವೈಷ್ಣವ ಹೆಂಗುಸರಿದ್ದರೆ, ನಾವೆಲ್ಲ ಹೊಲೆಯರು ಸಮಗಾರರು ಎನ್ನಿಸಿಕೊಳ್ಳಬೇಕಾಗುವುದು, ವೈಷ್ಣವರೆಂದು ಹೇಳಿಕೊಳ್ಳಲು ತಲೆತಗ್ಗಿಸಬೇಕಾಗುವುದು ಹೋಗಲಿ ಬಿಡು, ಬಹಳ ಚೀರಾಡಬೇಡ ನಾನು ಅಪವಾದ ಹೊರಿಸಿದೆನೆಂದು ನಿನಗೆ ದುಃಖವಾಗುತ್ತಿದ್ದರೆ ಅತ್ತಿಗೆಯನ್ನು ಬಾಡಾಲಕ್ಕೆ ಕಳಿಸಿಬಿಡು ಬಳಿಕ ಬಾಯಿಗೆ ಬಂದುದನ್ನು ಎಂದು ಬಿಡು, ಬೇಕಾದರೆ ನನಗೆ ಒಂದಿಷ್ಟು ಬೈದು ಬಿಡು ನಿನ್ನಾಣೆ, ಆಮೇಲೆ ನಾನು ನಿನಗೆ ಏನನ್ನೂ ಎನ್ನುವುದಿಲ್ಲ"

ಈ ಜಗಳ ಹೆಚ್ಚುಬೆಳೆದರೆ ತಾನೇ ಸೋಲಬೇಕಾಗುವುದೆಂದು ಮಗಳ ಈ ಹದನವಾದ ಬಾಣಗಳಿಂದ ತಾಯಿ ತಿಳಿದುಕೊಂಡಳು ಆದುದರಿಂದ ಅವಳು ಕೋಮಲ ಸ್ವರದಿಂದ "ನಾನೇನೊ ಅವಳನ್ನು ಅಲ್ಲಿಗೆ ಕಳಿಸಬಹುದು, ಆದರೆ ಅವರು ಬರಮಾಡಿಕೊಳ್ಳುವರೆ? ವ್ರಜೇಶ್ವರಿ, ನನಗೆ ನಿನಗಿಂತ ಹೆಚ್ಚು

ಗೊತ್ತಿದೆ ಅವರಿಗೆ ಇವಳ ಸಂಬಂಧವಿಲ್ಲ ಇವಳೊಂದಿಗೆ ವೃಂದಾವನನ ಸಂಬಂಧ ಕೂಡ ಏನೂ ಇಲ್ಲ ಸುಳ್ಳು ಆಶೆ ತೋರಿಸಿ ಈಕೆಯನ್ನು ಸುಮ್ಮನೆ ಕುಣಿಸಬೇಡ'' ಎಂದು ಉತ್ತರದ ದಾರಿ ನೋಡದೆ ಒತ್ತರದಿಂದ ಹೋಗಿ ಬಿಟ್ಟಳು

ಕುಸುಮೆ ತನ್ನ ಕಳೆಗುಂದಿದ ಮುಖವನ್ನು ಮೇಲಕ್ಕೆತ್ತುತ್ತಲೆ ವ್ರಜೇಶ್ವರಿ—" ಅಕ್ಕಾ, ಈ ಮಾತು ಸುಳ್ಳು ನಮ್ಮ ತಾಯಿ ಗೊತ್ತಿದ್ದೂ ಸುಳ್ಳು ಹೇಳಿದ್ದಾಳೆ ನಾನು ಅವಳ ಮಗಳಾದರೂ ಈ ಮಾತನ್ನು ಒಪ್ಪಲೇಬೇಕು. ನಿಲ್ಲು, ಈಗ ಬಂದು ಬಿಡುತ್ತೇನೆ'' ಎಂದು ಏನನ್ನೊ ಯೋಚಿಸಿಕೊಂಡು ಅಲ್ಲಿಂದ ಹೊರಟು ಹೋದಳು

ಪರಿಸ್ಥಿತಿ ಚೆನ್ನಾಗಿದ್ದರೆ ಬುದ್ಧಿಯೂ ಚೆನ್ನಾಗಿರುತ್ತದೆಂಬ ಮಾತನ್ನು ಕುಂಜನಾಥ ಸಿದ್ಧಮಾಗಿ ಕೊಟ್ಟ ಹಂಡತಿ, ತಂಗಿ, ಇಬ್ಬರೂ ಅದೆಷ್ಟು ಬೇಡಿಕೊಂಡರೂ ಕುಂಜನಾಥ ತನ್ನ ನಿಶ್ಚಯವನ್ನು ಬಿಡಲಿಲ್ಲ ಅವನು ತಲೆ ಅಲ್ಲಾಡಿಸುತ್ತ—" ಇದು ಸಾಧ್ಯವಿಲ್ಲ, ಅತ್ತೆಯವರು ಹೇಳುವವರೆಗ ನಾನು ಚರಣನನ್ನು ಇಲ್ಲಿಗೆ ಕರೆದುಕೊಂಡು ಬರಲಾರೆ'' ಎಂದ

" ಅವರು ಹೇಗಿರುವರೆಂಬುದನ್ನು ಒಮ್ಮೆ ನೋಡಿಕೊಂಡಾದರೂ ಬನ್ನಿರಿ" ಎಂದು ವ್ರಜೇಶ್ವರಿ ತನ್ನ ಗಂಡನಿಗ ಹೇಳಿದಳು

ಕುಂಜನಾಥ ಕಣ್ಣನ್ನು ಹುಬ್ಬಿಗೇರಿಸಿ "ಅಬ್ಬಬ್ಬ! ಅಲ್ಲಿ ಬನಕ್ಕೆ ಹತ್ತಿಪ್ಪತ್ತು ಜನರು ಸಾಯುತ್ತಿದ್ದಾರ'' ಎಂದ

" ಹಾಗಾದರೆ ಯಾರನ್ನಾದರೂ ಕಳಿಸಿ ಅಲ್ಲಿಯ ಸುದ್ದಿಯನ್ನು ತಿಳಿದುಕೊಳ್ಳಿರಿ''

" ಆಗಬಹುದು'' ಎಂದು ಕುಂಜನಾಥ ಆಳನ್ನು ಹುಡುಕಲು ಹೊರಗ ಹೋದ

ಮರುದಿನ ಮುಂಜಾನೆ ಕುಸುಮೆ ಮಿಂದು ಅಡುಗಮನಗ ಹೊರಟಿದ್ದಳು ಆಗ ಅಂಗಳದಲ್ಲಿ ಕಸಗುಡಿಸುತಿದ್ದ ತೊತ್ತು " ತಂಗಿ, ಇಂದು ನೀನು ಅಡುಗೆಮನೆಗ ಹೋಗಕೂಡದೆಂದು ಅಮ್ಮನವರು ಹೇಳಿದ್ದಾರೆ'' ಎಂದಳು

ಈ ಮಾತನ್ನು ಕೇಳಿ ಕುಸುಮೆಯ ಎದೆ ನಡುಗಿತು ಅವಳು ಅಲ್ಲಿಯೆ ನಿಂತುಕೊಂಡು ಭಯದಿಂದ " ಏಕೆ?'' ಎಂದು ಕೇಳಿದಳು

" ನನಗೆ ಗೊತ್ತಿಲ್ಲ " ಎಂದು ಅವಳು ತನ್ನ ಕೆಲಸದಲ್ಲಿ ತೊಡಗಿದಳು

ಕುಸುಮೆ ತನ್ನ ಕೋಣೆಗೆ ಮರಳಿ, ಬಹಳ ಹೊತ್ತಿನ ವರೆಗೆ ಕುಳಿತಳು ಪ್ರತಿದಿನವೂ ವ್ರಜೇಶ್ವರಿ ಅಷ್ಟು ಹೊತ್ತಿನಲ್ಲಿ ಅದೆಷ್ಟೋ ಸಲ ಬಂದು ಹೋಗುತ್ತಿದ್ದಳು ಆದರೆ ಇಂದು ನೋಡಲೂ ಸಿಗಲಿಲ್ಲ ಹೊರಗೆ ಹೋಗಿ ಒಮ್ಮೆ ಹುಡುಕಿಯೂ ಬಂದಳು ಆದರೆ ವ್ರಜೇಶ್ವರಿ ಮಾತ್ರ ಇಲ್ಲ

ವ್ರಜೇಶ್ವರಿ ತನ್ನ ತಾಯಿಯ ಕೋಣೆಯಲ್ಲಿ ಅಡಗಿಕೊಂಡು ಕುಳಿತಿದ್ದಳು ಏಕೆಂದರೆ ಕುಸುಮ ಅಲ್ಲಿಗೆ ಹೋಗುವುದಿಲ್ಲವೆಂಬುದು ಅವಳಿಗೆ ಗೊತ್ತು ಅವರು ಒಟ್ಟಿಗೆ ಕುಳಿತು ದಿನವೂ ಊಟ ಮಾಡುತಿದ್ದರು ಆದರೆ ಇಂದು ಊಟದ ಹೊತ್ತೂ ಕಳೆದುಹೋಯಿತು ಆಗ ಕುಸುಮೆ ಉದ್ವೇಗ ಸಂಶಯಗಳಿಂದ ವ್ರಜೇಶ್ವರಿಯನ್ನು ಮತ್ತೊಮ್ಮೆ ಹುಡುಕಲು ಹೊರಗೆ ಬಂದಳು ಅಷ್ಟರಲ್ಲಿ ಅತ್ತೆ ಹೊರಗೆ ಬಂದು " ಇನ್ನೂ ಏಕೆ ತಡ ಮಾಡು-ತ್ತಿರುವೆ ಮಗು, ಕೆರಗ ಹೋಗಿ ಇನ್ನೊಂದು ಮುಳುಗು ಹಾಕಿ ಒಮ್ಮೆ ಊಟ ಮಾಡಬಾರದ? ನಿನ್ನ ಅಣ್ಣ ಅಭಿಪ್ರಾಯ ಕೇಳಲು ಬ್ರಾಹ್ಮಣರ ಕೇರಿಗ ಹೋಗಿದ್ದಾನೆ " ಎಂದಳು

ಕುಸುಮೆ ಏನೋ ಕೇಳಬೇಕೆಂದು ಯೋಚಿಸಿದಳು ಆದರ ಮಾತೇ ಹೊರಗ ಬರಲಿಲ್ಲ

ಆಗ ಅತ್ತೆಯೆ ಕರುಣಾಪೂರಿತ ಸ್ವರದಿಂದ " ನೀನು ಅವನ ಹಂಡತಿಯಾದುದರಿಂದ ಅವನಂತಯೆ ಅಶೌಚವನ್ನು- ಮೈಲಿಗಯನ್ನು- ಆಚರಿಸಬೇಕು ಏನೇ ಆಗಲಿ, ಅವಳಲ್ಲಿ ಗುಣದೋಷಗಳೆರಡೂ ಇದ್ದವು ಒಟ್ಟಿನಲ್ಲಿ ಒಳ್ಳೇ ಹಂಗುಸು ಅಂದು ನಮ್ಮ ವ್ರಜೇಶ್ವರಿಯ ಸಂಬಂಧವನ್ನು ನಿಶ್ಚಯ ಮಾಡಲಿಕ್ಕೆ ಬಂದಿದ್ದಳು ಆಗ ಅವಳು ಎಷ್ಟು ಮಾತುಗಳನ್ನಾಡಿದ್ದಳು! ವೃಂದಾವನನ ತಾಯಿ ತೀರಿಕೊಂಡು ಇಂದಿಗೆ ಆರು ದಿನಗಳಾದುವು ಆಗ-ಬೇಕಾದುದು ಆಗಿಹೋಯಿತು ಆದರೆ ದೇವರು ಮಗುವನ್ನು ಮಾತ್ರ ಕಾಪಾಡಬೇಕು. ಆ ಮಗುವಿನ ಹೆಸರೇನು— ಚರಣನಲ್ಲವೆ? ಅಹಾ! ರಾಜಕುಮಾರನಂತಹ ಹುಡುಗ ಅವನಿಗೂ ಇಂದು ಬಳಗಿನಿಂದ ಎರಡು ಮೂರು ಸಲ ವಾಂತಿ-ಭೇದಿಯಾಗಿದೆಯಂತೆ " ಎಂದಳು

ಕುಸುಮೆ ತಲೆಯನ್ನೂ ಎತ್ತಲಿಲ್ಲ, ಮಾತನ್ನೂ ಆಡಲಿಲ್ಲ ಸುಮ್ಮನೆ ತನ್ನ ಕೋಣೆಗ ಹೊರಟು ಹೋದಳು

ಸುಮಾರು ಮೂರು ಗಂಟಯಾಗಿರಬಹುದು ವ್ರಜೇಶ್ವರಿ ಎಲ್ಲ ಕೋಣೆ

ಗಳಲ್ಲಿಯೂ ಹುಡುಕಿದಳು, ಆದರೆ ಕುಸುಮೆಯ ಸುಳಿವೇ ಇಲ್ಲ ಕೊನೆಗೆ ದಾಸಿಯನ್ನು ಕರೆದು "ನೀನು ಅತ್ತಿಗೆಯನ್ನು ಎಲ್ಲಾದರೂ ನೋಡಿರುವಯಾ?" ಎಂದು ಕೇಳಿದಳು

"ಇಲ್ಲ, ಮುಂಜಾನೆ ಮಾತ್ರ ನೋಡಿದ್ದೆ"

ಹೆಂಡತಿ ಅಳುವುದನ್ನು ಕೇಳಿ ಕುಂಜನಾಥನ ಜಂಪು ಹಾರಿ ಹೋಯಿತು ಅವನು ಎದ್ದು ಕುಳಿತು "ಇದೇನಿದು? ಕುಸುಮೆ ಎಲ್ಲಿಗೆ ಹೋದಳು?" ಎಂದ

ವ್ರಜೇಶ್ವರಿ ಅಳುತ್ತ "ಗೊತ್ತಿಲ್ಲ ಮನೆಯೊಳಗೆ, ಹೊರಗ, ಕೆರೆ, ತೋಟ, ಎಲ್ಲ ಕಡೆಯೂ ಹುಡುಕಿ ಬಂದೆ, ಎಲ್ಲಿಯೂ ಕಾಣಲಿಲ್ಲ" ಎಂದಳು

ವ್ರಜೇಶ್ವರಿಯ ಕಣ್ಣೀರೂ 'ಕೆರೆ'ಯ ಹೆಸರೂ ಕುಂಜನಾಥನನ್ನು ಗಾಬರಿಗೊಳಿಸಿದುವು "ಹಾಗಾದರೆ ಅವಳು ಬದುಕಿಲ್ಲ ಅತ್ತೆಯ ಮಾತು ಅವಳಿಂದ ತಡೆಯಲಾಗಲಿಲ್ಲ ಅವಳು ಎಲ್ಲಾದರೂ ಬಾವಿ-ಕೆರೆಯಲ್ಲಿ ಹಾರಿಕೊಂಡಿರಬೇಕು" ಎಂದು ಅವನು ಓಡತೊಡಗಿದ ಅಷ್ಟರಲ್ಲಿ ಅವನ ದೋತರದ ತುದಿಯನ್ನು ಹಿಡಿದು ವ್ರಜೇಶ್ವರಿ "ಹೀಗ ನೀವು ಹೋಗಬೇಡಿರಿ" ಎಂದಳು

"ಇಲ್ಲ ನಾನು ಏನನ್ನೂ ಕೇಳುವುದಿಲ್ಲ" ಎಂದು ಕುಂಜನಾಥ ತನ್ನ ದೋತರವನ್ನು ಬಿಡಿಸಿಕೊಂಡು ಹುಚ್ಚನಂತೆ ಹೊರಗ ಹೋಗಿಬಿಟ್ಟ

ಹತ್ತು ಹನ್ನೆರಡು ನಿಮಿಷಗಳ ನಂತರ ಕುಂಜನಾಥ ಹೆಂಗುಸರಂತೆ ಅಳುತ್ತ ಹಿಂದಿರುಗಿ ಬಂದು ಅಂಗಳದಲ್ಲಿ ನಿಂತು ಬೊಬ್ಬೆಕುಟ್ಟತೊಡಗಿದ-"ನಮ್ಮ ಅತ್ತೆ ನನ್ನ ತಂಗಿಯನ್ನು ಕೊಂದುಬಿಟ್ಟಳು ಇನ್ನು ನಾನು ಇಲ್ಲಿ ಇರುವುದಿಲ್ಲ, ಈ ಮನೆಯಲ್ಲಿ ಕಾಲನ್ನೂ ಇಡುವುದಿಲ್ಲ ಅಯ್ಯೋ ಕುಸುಮಾ "

ಕುಂಜನಾಥನ ಅತ್ತಗ ಏನೂ ಗೊತ್ತಿರಲಿಲ್ಲ ಬೊಬ್ಬೆ ಕೇಳಿಬರುತ್ತಿದ್ದುದರಿಂದ ಅವಳು ಹೊರಗ ಬಂದಳು ಆದರ ಏನೂ ತಿಳಿಯದೆ ಸುಮ್ಮನೆ ನಿಂತುಬಿಟ್ಟಳು

ಅವಳನ್ನು ನೋಡುತ್ತಲೆ ಕುಂಜನಾಥ ಅಲ್ಲಿಯೆ ಹೊರಳಿ ನಿಂತು ಹಣೆಯನ್ನು ಗಟ್ಟಿಸಿಕೊಳ್ಳುತ್ತ "ಈ ರಾಕ್ಷಸಿಯೆ ನನ್ನ ತಂಗಿಯನ್ನು ನುಂಗಿದವಳು— ನಾನೇಕೆ ಇಲ್ಲಿಗೆ ಸಾಯಲು ಬಂದೆ! ಅಯ್ಯೋ, ನನ್ನ ಹಣೆ ಬರಹವೇ!" ಎಂದ

ವ್ರಜೇಶ್ವರಿ ಹತ್ತಿರ ಬಂದು ಅವನ ಕೈಹಿಡಿದು ಜಗ್ಗಿದಳು ಅವನು "ನಡೆ, ದೂರ ಸರಿ, ನನ್ನನ್ನು ಮುಟ್ಟಬೇಡ" ಎಂದು ಅವಳನ್ನು ನೂಕಿ ಕೆಡವಿಬಿಟ್ಟ

ವ್ರಜೇಶ್ವರಿ ಎದ್ದು ನಿಂತಳು ಆಮೇಲೆ ಅವನನ್ನು ಗಟ್ಟಿಯಾಗಿ ಹಿಡಿದು ಕೋಣೆಗೆ ಕರೆದೊಯ್ದು "ಬರಿಯ ಚೀರಾಟ ಹಾರಾಟದಿಂದ ನಿಮ್ಮ ತಂಗಿ ತಿರುಗಿ ಬರುವಳೇನು? ಅವಳು ಕೆರೆಯಲ್ಲಿ ಬಿದ್ದು ಸತ್ತಿಲ್ಲ ವೆಂದು ನಾನು ಖಂಡಿತ ಹೇಳುತ್ತೇನೆ" ಎಂದಳು

ಆದರೆ ಕುಂಜನಿಗೆ ನಂಬುಗೆಯಾಗಲಿಲ್ಲ, ಅವನು ಹಾಗೆಯೆ ಅಳುತ್ತ-ಲಿದ್ದ ತನ್ನ ತಂಗಿಯನ್ನು ಅವನು ಬಹಳ ಕಷ್ಟಪಟ್ಟು ಸಾಕಿದ್ದ ಅವಳನ್ನು ತನ್ನ ಪ್ರಾಣಕ್ಕಿಂತಲೂ ಹೆಚ್ಚಾಗಿ ಪ್ರೀತಿಸುತ್ತಿದ್ದ ಮುಳುಗಿ ಸಾಯುವ ಭಯವನ್ನು ಕುಸುಮೆ ಇದಕ್ಕೂ ಮೊದಲು ತೋರಿಸಿದ್ದಾಳೆ ಆದುದರಿಂದ ಈಗ ಅವನ ಕಣ್ಣುಗಳಲ್ಲಿ ಅದೆಲ್ಲಿಂದಲೊ ನೀರಿನ ನೆರೆಯೆ ಬಂದು ಕುಸು-ಮೆಯ ಮೃತದೇಹ ಅದರಲ್ಲಿ ತೇಲತೊಡಗಿತು

ವ್ರಜೇಶ್ವರಿ ತನ್ನ ಗಂಡನ ಕಂಬನಿಗಳನ್ನು ಒರೆಸುತ್ತ ಸ್ನೇಹಪೂರ್ವಕ ವಾಗಿ "ನೀವು ಶಾಂತರಾಗಿರಿ ಅವಳು ಸತ್ತಿಲ್ಲವೆಂದು ನಿಶ್ಚಯವಾಗಿ ಹೇಳು ತ್ತೇನೆ" ಎಂದಳು

ಕುಂಜನಾಥ ಕಂಬನಿದುಂಬಿದ ಕಣ್ಣುಗಳನ್ನು ಹಿಗ್ಗಿಸುತ್ತ ಅವಳ ಕಡೆಗೆ ನೋಡತೊಡಗಿದ ವ್ರಜೇಶ್ವರಿ ತನ್ನ ಸೆರಗಿನಿಂದ ಪುನಃ ಚೆನ್ನಾಗಿ ಒರೆಸುತ್ತ "ಅತ್ತಿಗೆ ನಿಜವಾಗಿಯೂ ಬಾಡಾಲಕ್ಕೆ ಹೋಗಿರಬಹುದೆಂದು ತೋರುತ್ತದೆ" ಎಂದಳು

ಕುಂಜನಾಥ ಇದನ್ನು ನಂಬದೆ ತಲೆಯಲ್ಲಾಡಿಸಿ "ಸಾಧ್ಯವಿಲ್ಲ, ಅವಳು ಅಲ್ಲಿಗೆ ಹೋಗಿರಲಾರಳು ಚರಣನನ್ನುಳಿದು ಅಲ್ಲಿ ಯಾರನ್ನೂ ನೋಡಲಾರಳು" ಎಂದ

"ನಿಮ್ಮ ಗುಡ್ಡದಂತಹ ತಪ್ಪು ಇದೇ ನಾನು ನಿಮ್ಮನ್ನು ಪ್ರೀತಿಸಿ ದಂತೆಯೆ ಅವಳೂ ತನ್ನ ಗಂಡನನ್ನು ಪ್ರೀತಿಸುತ್ತಾಳೆ ಅದೇನೇ ಇರಲಿ ಚರಣನ ಮುಟ್ಟಿಗಾದರೂ ಅವಳು ಅಲ್ಲಿಗ ಹೋಗಿರಬಹುದಲ್ಲ!"

"ಆದರೆ ಆಕೆಗ ಬಾಡಾಲದ ದಾರಿಯಾದರೂ ಎಲ್ಲಿ ಗೊತ್ತಿದೆ?"

"ನನಗೂ ಇದೇ ಭಯ ದಾರಿ ತಪ್ಪಿದರೆ ಬೇಗ ಮುಟ್ಟಲಿಕ್ಕಿಲ್ಲ

ಅಥವಾ ದಾರಿಯಲ್ಲಿ ಏನಾದರೂ ತೊಂದರೆಯೂ ಆಗಬಹುದು. ಇಲ್ಲದಿದ್ದರೆ, ಬಾಡಾಲವು ಏಳು ಸಮುದ್ರದ ಆಚೆಗಿದ್ದರೂ ಕೇಳುತ್ತ-ಕೇಳುತ್ತ ಅವಳು ಅಲ್ಲಿಗೆ ಹೋಗಿ ಒಂದಲ್ಲ ಒಂದು ದಿನವಾದರೂ ಮುಟ್ಟುವಳು ನೀವೂ ಬಾಡಾಲಕ್ಕೆ ಹೋಗಿರಿ ದಾರಿಯಲ್ಲಿ ಅವಳು ಸಿಕ್ಕಿದರೆ ಅವಳನ್ನು ಸಂಗಡ ಕರೆದುಕೊಂಡು ಹೋಗಿ ಪತಿಗೆ ಒಪ್ಪಿಸಿ ಬನ್ನಿರಿ ''

'' ಹೌದು ಅದೇ ಸರಿಯಾದ ದಾರಿ '' ಎಂದು ಕುಂಜನಾಥನು ಎದ್ದು ನಿಂತ

ಕುಂಜನಾಥನ ಆ ಜರ್-ಜರ್ ಎನ್ನುವ ವಿಲಾಯತಿಯ ಮೆಟ್ಟು, ಉತ್ತಮ ರೇಶಿಮೆಯ ಸೂಕ್ಷ್ಮ ಸೆಲ್ಲಿ, ಹೆಮ್ಮೆಯ ಆ ನಡಿಗೆ, ಇವೆಲ್ಲವೂ ಇಂದು ಅತ್ತೆಯ ಮನೆಯಲ್ಲಿಯೆ ಉಳಿದುವು ಆ ಹುಚ್ಚುಹುಡಿಗೆ ಕುಸುಮೆಯ ಚಿಂತೆಯಿಂದ ಜಮೀನುದಾರ ಕುಂಜನಾಥ ಬಾಬೂ ಇಂದು ಸಾಮಾನುಗಳನ್ನು ಹೊತ್ತು ಮಾರುವ ಕುಂಜವೈಷ್ಣವನಾಗಿ ಬರಿಗಾಲು ಬರಿಮೈ-ಗಳಿಂದ ಹುಚ್ಚರಂತೆ ಓಡುತ್ತ ಹೊರಟು ಬಿಟ್ಟ

## ೧೪

ವೃಂದಾವನನ ತಾಯಿ ಪರಲೋಕವಾಸಿನಿಯಾಗಿ ಇಂದಿಗೆ ಆರು ದಿನಗಳಾದುವು ಸತ್ತಮೇಲೆ ಒಳ್ಳೆಯ ಕೆಲಸಕ್ಕಾಗಿ ಯಾರಿಗಾದರೂ ಸ್ವರ್ಗದಲ್ಲಿ ಸ್ಥಳ ಸಿಕ್ಕುವಂತಿದ್ದರೆ ವೃಂದಾವನನ ತಾಯಿಗೂ ಸಿಕ್ಕಲೇಬೇಕು

ಆ ದಿನ ತಾರಿಣಿಯ ದುರ್ವ್ಯವಹಾರದಿಂದಲೂ ಘೋಷಾಲರ ಶಾಸ್ತ್ರ-ಜ್ಞಾನ, ಶಾಪದಿಂದಲೂ ಬಹಳವಾಗಿ ನೊಂದುಕೊಂಡ ವೃಂದಾವನ ತನ್ನ ಊರಿನಲ್ಲಿ ಆಧುನಿಕ ರೀತಿಯ ಒಂದು ಬಾವಿಯನ್ನು ಕಟ್ಟಿಸಿ ನಳಿಗೆಯ ಮೂಲಕ ನೀರು ಹರಿಯುವಂತೆ ಮಾಡಬೇಕೆಂಬ ಸಂಕಲ್ಪವನ್ನು ಮಾಡಿದ್ದ. ನೀರು ಹಾಳು ಮಾಡಲು ಯಾರಿಗೂ ಸಾಧ್ಯವಾಗದಂತಹ, ಸ್ವಲ್ಪ ಶ್ರಮದಿಂದ ನೀರು ತೆಗೆದುಕೊಳ್ಳಬಹುದಾದಂತಹ, ಇಡಿಯ ಊರಿಗಿದ್ದ ನೀರಿನ ಕೊರತೆ ದೂರವಾಗುವಂತಹ, ಮತ್ತು ಇಂತಹ ಕಠಿಣ ಪ್ರಸಂಗದಲ್ಲಿ ಮಾರೀಬೇನೆಯ ಭಯವೂ ಕಡಿಮೆಯಾಗುವಂತಹ ಬಾವಿಯನ್ನು ಕಟ್ಟಲು ವೃಂದಾವನ ಬಯಸುತಿದ್ದ ಅವನಿಗೆ ಬೇಕಾದುದು ತನ್ನ ಊರಿನಲ್ಲಿ ಒಂದು

ಅತ್ಯುತ್ತಮವಾದ ಬಾವಿ  ಅದಕ್ಕೆ ತಗಲುವ ವೆಚ್ಚಕ್ಕೆ ಅವನು ಹಿಂಜರಿಯುವ ವನಲ್ಲ ಅದಕ್ಕಾಗಿ ಅವನು ಕಲಕತ್ತೆಯಿಂದ ತಜ್ಞರನ್ನು ಕರೆಯಿಸಿದ್ದ  ತಾಯಿ ಮೃತಳಾದ ದಿನ, ಬೆಳಿಗ್ಗೆ ಆ ತಜ್ಞರೊಂದಿಗೆ ಕರಾರುವತ್ರದ ಮಾತುಕತೆ ನಡೆದಿದ್ದವು  ಸುಮಾರು ಹತ್ತುಗಂಟೆಗೆ ಒಬ್ಬ ದಾಸಿ ಬಂದು "ಅಣ್ಣಾ, ಹೊತ್ತು ಇಷ್ಟು ಮೇಲೇರಿದರೂ ತಾಯಿಯವರು ಇನ್ನೂ ಬಾಗಿಲು ತೆರೆದಿಲ್ಲ ವಲ್ಲ?" ಎಂದಳು

ವೃಂದಾವನ ಸಂಶಯದಿಂದ "ಅಮ್ಮ ಇನ್ನೂ ಮಲಗಿರುವಳೇನು?" ಎಂದು ಕೇಳಿದ

"ಹೌದು, ಒಳಗಿನಿಂದ ಕೊಂಡಿ ಹಾಕಿದೆ  ನಾನು ಬಹಳ ಕೂಗಿದೆ, ಆದರೆ ಉತ್ತರವೇ ಇಲ್ಲ"

ವೃಂದಾವನ ಹೌಹಾರಿದವನಾಗಿ ಒಡುತ್ತ ಬಂದು ಬಾಗಿಲು ಬಡಿದು "ಅಮ್ಮಾ! ಅಮ್ಮಾ!" ಎಂದು ಕೂಗತೊಡಗಿದ

ಆದರೆ ಒಳಗಿನಿಂದ ಉತ್ತರ ಬರಲಿಲ್ಲ  ಮನೆಯ ಜನರೆಲ್ಲ ಒಟ್ಟುಗೂಡಿ ಕೂಗಿದರು  ಆದರೂ ಉತ್ತರವಿಲ್ಲ  ಬಳಿಕ ಕಬ್ಬಿಣದ ಸಲಾಕೆಯಿಂದ ಬಾಗಿಲು ಮುರಿದರು  ಬಾಗಿಲು ತೆರೆಯುತ್ತಲೆ ಕೋಣೆಯಿಂದ ಕೆಟ್ಟ ವಾಸನೆ ಬರತೊಡಗಿತು  ಆ ನಾತಕ್ಕೆ ಎಲ್ಲರೂ ಏಟಿಗೆ ಹೇಗೊ ಹಾಗ ಮುಖವನ್ನು ಹಿಂದೆಳೆದುಕೊಂಡರು  ವೃಂದಾವನ ಮಾತ್ರ ಕ್ಷಣಮಾತ್ರದಲ್ಲಿ ಸಾವರಿಸಿ ಕೊಂಡು ಕೋಣೆಯಲ್ಲಿ ಇಣಿಕಿನೋಡಿದ

ಮಂಚ ಬರಿದಾಗಿದೆ  ತಾಯಿ ಕೆಳಗ ಬಿದ್ದಿದ್ದಾಳೆ  ಮೃತ್ಯುದೇವತೆ ಹತ್ತಿರವೇ ಇದ್ದಾಳೆ  ಮಾರೀಬೇನೆ ಇಡೀ ಮನೆಯನ್ನೇ ಆಕ್ರಮಿಸಿದಂತೆ ತೋರುತ್ತಿದೆ  ಎದ್ದು ನಡೆಯುವಷ್ಟು ಶಕ್ತಿ ಎಲ್ಲಿಯವರೆಗಿತ್ತೊ ಅಲ್ಲಿಯ ವರೆಗೆ ಅವಳು ಹೊರಗೆ ಬರುತ್ತಿದ್ದಳು  ಕೊನೆಗೆ ಅಶಕ್ತಳಾಗಿ, ಅಸಹಾಯಳಾಗಿ, ಮರಳಿ ಏಳದಂತೆ ಭೂಮಿಯ ಮೇಲೆ ಬಿದ್ದುಬಿಟ್ಟಳು  ತನ್ನ ಜೀವನ ದಲ್ಲಿ ಯಾರಿಗೂ ಕಷ್ಟಕೊಡಬಾರದೆಂಬುದು ಅವಳ ಬಯಕೆ  ಆದುದರಿಂದಲೆ ಮೃತ್ಯುವಿಗೆ ತುತ್ತಾಗುತ್ತಲಿದ್ದರೂ ಈ ಕರಾಳ ರಾತ್ರಿಯಲ್ಲಿ ಜನರನ್ನು ಎಚ್ಚ ರಿಸಿ ಅವರ ನಿದ್ದೆ ಹಾಳು ಮಾಡಲು ಅವಳಿಗೆ ಸಂಕೋಚವೆನಿಸಿತು  ಇಡಿಯ ರಾತ್ರಿಯನ್ನು ಅವಳು ಹೇಗೆ ಕಳೆದಳೆಂಬುದನ್ನು ಹೇಳುವ ಅವಶ್ಯಕತೆ ಯಾರಿಗೂ ಉಳಿಯಲಿಲ್ಲ  ತಾಯಿಯ ಇಂತಹ ಅಕಸ್ಮಾತ್ ಶೋಚನೀಯ

ಮರಣವನ್ನು ತಮ್ಮ ಕಣ್ಣುಗಳಿಂದಲೇ ನೋಡಿ ಸಹಿಸುವುದು ಮನುಷ್ಯರ ಶಕ್ತಿಗೆ ಮೀರಿದ ಮಾತು ವೃಂದಾವನನಿಂದಲೂ ಇದನ್ನು ಸಹಿಸಲಾಗಲಿಲ್ಲ. ಆದರೂ ಅವನು ಸಾವರಿಸಿಕೊಳ್ಳುವುದಕ್ಕಾಗಿ ಚೌಕಟ್ಟನ್ನು ಹಿಡಿದುಕೊಂಡ ನಾದರೂ ಮೂರ್ಛಿತನಾಗಿ ತಾಯಿಯ ಪಾದದ ಬಳಿ ಬಿದ್ದುಬಿಟ್ಟ ಜನರು ಅವನನ್ನು ಎತ್ತಿಕೊಂಡು ಬೇರೊಂದು ಕೋಣೆಗೆ ಹೋದರು ಸುಮಾರು ಇಪ್ಪತ್ತು ನಿಮಿಷಗಳ ಬಳಿಕ ಅವನಿಗೆ ಎಚ್ಚರವಾದಾಗ ಚರಣ ತಲೆಯ ಬಳಿ ಕುಳಿತು ಅಳುತ್ತಿರುವನೆಂಬುದು ತಿಳಿಯಿತು ವೃಂದಾವನ ಎದ್ದು ಚರಣನ ಕೈ ಹಿಡಿದುಕೊಂಡು ಮೃತಪ್ರಾಯಳಾದ ತಾಯಿಯ ಪಾದಗಳ ಹತ್ತಿರ ಕುಳಿತ.

ವೈದ್ಯರನ್ನು ಕರೆಯಲು ಹೋದವನು ಹಿಂದಿರುಗಿ ಬಂದು "ವೈದ್ಯರು ಸಿಕ್ಕಲಿಲ್ಲ ಅವರು ಎಲ್ಲಿಗೋ ಹೋಗಿರುವರಂತೆ, ಇಂದು ಬರುವ ಸಂಭವವೂ ಇಲ್ಲವಂತೆ" ಎಂದು ಹೇಳಿದ

ವೃಂದಾವನನ ತಾಯಿಗೆ ಕುತ್ತಿಗೆ ಬಿಗಿದು ಹೋಗಿದ್ದಿತು ಆದರೂ ಅವಳಿಗ ಜ್ಞಾನವಿದ್ದಿತು ಮಗನನ್ನು, ಮೊಮ್ಮಗನನ್ನು ನೋಡಿ ಆಕೆಯ ಕಳೆಗುಂದಿದ ಎರಡೂ ಕಣ್ಣುಗಳಿಂದ ಬಿಸಿ ಕಂಬನಿಗಳುದುರಿದವು. ತುಟಿಗಳು ಅಲುಗಾಡಿ ದಾಸದಾಸಿಯರೆಲ್ಲರಿಗೂ ಆಶೀರ್ವಾದವಿತ್ತವು ಆ ಆಶೀರ್ವಾದ ಯಾರ ಕಿವಿಯನ್ನು ಮುಟ್ಟದಿದ್ದರೂ ಹೃದಯವನ್ನು ಮುಟ್ಟಿರುವುದರಲ್ಲಿ ಸಂದೇಹವಿಲ್ಲ

ತುಳಸೀಕಟ್ಟೆಯ ಹತ್ತಿರ ಒಂದು ಬಟ್ಟೆ ಹಾಸಿ ಅವಳನ್ನು ಮಲಗಿಸ ಲಾಯಿತು ಸ್ವಲ್ಪ ಹೊತ್ತು ಅವಳು ತುಳಸೀಗಿಡದ ಕಡೆಗೆ ನೋಡುತ್ತಿದ್ದಳು. ಬಳಿಕ ಅವಳ ಕಳೆಗುಂದಿದ, ದಣಿದ, ಕಣ್ಣುಗಳು ಮೆಲ್ಲಮೆಲ್ಲನೆ ಪ್ರಪಂಚದ ಕೊನೆಯ ನಿದ್ರೆಯಿಂದ ಮುಚ್ಚಿಹೋದವು

ಆ ಮೇಲೆ ಆರು ಹಗಲು ಆರು ರಾತ್ರಿಗಳನ್ನು ವೃಂದಾವನ ಕಳೆದ. ಹಾಗ ದಿನಗಳೆಯುವುದೂ ಬಿಡುವುದೂ ಈಶ್ವರಾಧೀನ ವೃಂದಾವನನಿಗೆ ಸ್ವಾತಂತ್ರ್ಯವಿದ್ದಿದ್ದರೆ ಅವನು ದಿನಗಳೆಯುತ್ತಲೇ ಇರಲಿಲ್ಲ

ಈಗ ಚರಣ ಆಡುವುದೂ ಇಲ್ಲ, ಮಾತನಾಡುವುದೂ ಇಲ್ಲ ವೃಂದಾ ವನ ಅವನಿಗೆ ಬಗೆಬಗೆಯ ಆಟದೊಡವೆಗಳನ್ನು ತಂದುಕೊಟ್ಟಿದ್ದ. ನಾನಾ ಬಗೆಯ ಬಂಡಿಗಳನ್ನು ತಂದಿದ್ದ ಹಡಗು, ಹಕ್ಕಿಗಳ ಚಿತ್ರಗಳನ್ನು ತಂದಿದ್ದ. ಚರಣ ಮೊದಲು ಇವುಗಳನ್ನು ತೆಗೆದುಕೊಂಡು ಹಗಲಿರುಳೂ ಆಡುತ್ತಿದ್ದ.

ಆದರೆ ಈಗ ಅವು ಮನೆಯ ಒಂದು ಮೂಲೆಯಲ್ಲಿ ಬಿದ್ದುಕೊಂಡಿವೆ ಅವನ್ನು ಈಗ ಅವನು ಮುಟ್ಟುವುದೂ ಇಲ್ಲ

ಈ ಸಂಕಟಕಾಲದಲ್ಲಿ ಆ ಬಾಲಕನ ಕಡೆಗೆ ಯಾರ ಗಮನವೂ ಇರಲಿಲ್ಲ ಬಟ್ಟೆಯಿಂದ ಹೊದ್ದಿಸಿದ ತನ್ನ ಅಜ್ಜಿಯ ಶವವನ್ನು ಸಿದ್ದಿಗೆಯ ಮೇಲೆ ಮಲಗಿಸಿ "ಹರಿ" ನಾಮವನ್ನುಚ್ಚರಿಸುತ್ತ ಹೊತ್ತುಕೊಂಡು ಹೋಗುವಾಗ ಚರಣ ಅಲ್ಲಿಯೆ ನಿಂತುಕೊಂಡು ಕಣ್ಣರಳಿಸಿ ನೋಡುತ್ತಲಿದ್ದ

ಅವನು ತನ್ನ ಮನದಲ್ಲಿಯೆ "ಅಜ್ಜಿ ತನ್ನನ್ನು ಜೊತೆಯಲ್ಲಿ ಏಕೆ ಕರೆದುಕೊಂಡು ಹೋಗಲಿಲ್ಲ ? ಅವಳು ಚಕ್ಕಡಿಯಲ್ಲಿ ಕುಳಿತು ಹೋಗದೆ ಜನರ ಹೆಗಲ ಮೇಲೆ ಕುಳಿತು ಏಕೆ ಹೋಗುತ್ತಿರುವಳು ? ಮರಳಿ ಏಕೆ ಬರಲಿಲ್ಲ ? ತಂದೆ ಇಷ್ಟೇಕೆ ಅಳುತ್ತಿರುವನು ? " ಎಂಬುದನ್ನು ಯೋಚಿಸುತ್ತಲಿದ್ದ ಅವನ ಹತಾಶ, ವಿಹ್ವಲ, ದುಃಖಿತ ಮೂರ್ತಿ ಎಲ್ಲರ ದೃಷ್ಟಿಯನ್ನೂ ಸೆಳೆಯಿತು, ಆದರೆ ತಂದೆಯ ದೃಷ್ಟಿಯನ್ನು ಮಾತ್ರ ಸೆಳೆಯಲಿಲ್ಲ. ವೃಂದಾವನನ ಮನಸ್ಸಿನಲ್ಲಿ ತಾಯಿಯ ಆಕಸ್ಮಿಕ ಮೃತ್ಯುವೇ ತುಂಬಿಕೊಂಡಿದ್ದುದರಿಂದ ಯಾವ ಕಡೆಗೂ ಗಮನ ಕೊಡುವ, ಯಾವುದನ್ನೂ ಬುದ್ಧಿಪೂರ್ವಕವಾಗಿ ಯೋಚಿಸುವ ಶಕ್ತಿ ಉಳಿದಿರಲಿಲ್ಲ ಅವನ ಉದಾಸೀನ, ಉದ್ಭ್ರಾಂತ ದೃಷ್ಟಿಗೆ ಬಿದ್ದುದು ಬಿದ್ದ ಹಾಗೆಯೆ ಜಾರಿ ಹೋಗುತ್ತಿದ್ದಿತು, ಸ್ಥಿರವಾಗಿ ಉಳಿಯುತ್ತಿರಲಿಲ್ಲ

ಕೆಲವು ದಿನಗಳಿಂದ ವೃಂದಾವನನ ಶಿಕ್ಷಕರಾದ ದುರ್ಗಾದಾಸರು ಸಾಯಂಕಾಲ ಅವನಲ್ಲಿ ಬಂದು ಕುಳಿತುಕೊಳ್ಳುತ್ತಿರುವರು ಅವರು ಅವನಿಗೆ ಬಗೆಬಗೆಯಿಂದ ಸಮಾಧಾನ ಹೇಳುವರು ವೃಂದಾವನನ ಅಂತಃಕರಣಕ್ಕೆ ಅದು ಯಾವುದೂ ನಾಟದಂತಾಗಿದೆ " ನನ್ನ ಹಡಗದ ಬುಡವು ಸಮುದ್ರದ ತಳದಲ್ಲಿ ಹುಗಿದುಬಿಟ್ಟಿದೆ, ಮುರಿದ ಒಡೆದ ಆ ಹಡಗವು ಎಷ್ಟು ಪ್ರಯತ್ನಿಸಿದರೂ ಬಂದರವನ್ನು ಸೇರಲಾರದು ಅದು ಮುಳುಗಿಯೆ ಹೋಗುವುದೆಂದಮೇಲೆ ಪ್ರಯತ್ನಿಸುವುದಾದರೂ ಏತಕ್ಕೆ ?– ಹೀಗಿರದಿದ್ದಲ್ಲಿ ನನ್ನ ಇಂತಹ ಹೆಂಡತಿ ಜೀವನದ ಸೂರ್ಯೋದಯ ಕಾಲದಲ್ಲಿಯೆ ಚರಣನನ್ನು ಬಿಟ್ಟು ಹೊರಟು ಹೋಗುತ್ತಿರಲಿಲ್ಲ ಇಂತಹ ಸಂಕಟ ಸಮಯದಲ್ಲಿ ಕುಸುಮೆಗೂ ದಯೆ ಬರದೆ ಇರುತ್ತಿರಲಿಲ್ಲ ನಿಷ್ಠುರಳಾಗಿ ಅವಳು ಚರಣನನ್ನು ನಿರಾಕರಿಸುತ್ತಿರಲಿಲ್ಲ ಎಲ್ಲಕ್ಕೂ ಹೆಚ್ಚಿನದೆಂದರೆ ನನ್ನ ತಾಯಿ–

ಇಂತಹ ತಾಯಿಯನ್ನು ಪಡೆಯುವ ಭಾಗ್ಯ ಯಾರಿಗಿದೆ?– ಅವಳೂ ತನಗೆ ಬೇಕಾದಾಗ ಪ್ರಯಾಣ ಬೆಳೆಸಿದಳು ಹೋಗುವಾಗ ಏನನ್ನೂ ಹೇಳಲಿಲ್ಲ " ಈ ಎಲ್ಲ ವಿಚಾರಗಳು ಅವನನ್ನು ನಾಲ್ಕೂ ಕಡೆಯಿಂದ ಮುತ್ತಿಕೊಂಡಿವೆ ಹೀಗೆ ಅವನ ಅಸ್ತವ್ಯಸ್ತ ಮೆದುಳಿನಲ್ಲಿ ವಿಧಿಶಾಸನವು ದಿನದಿನವೂ ಹೆಚ್ಚು ಸ್ಪಷ್ಟವಾಗಿ ಪ್ರತಿಬಿಂಬಿಸುತ್ತಿರುವಾಗ ಮನೆಯ ಒಬ್ಬ ವೃದ್ಧ ದಾಸಿ ಅಳುತ್ತ ಬಂದು " ಅಣ್ಣಾ, ಕೊನೆಗೆ ಮಗುವೂ ನಮಗೆ ದಕ್ಕಲಾರದ? ನೀವು ಅವನನ್ನು ಹತ್ತಿರ ಕರೆಯುವುದೂ ಇಲ್ಲ, ಸಮಾಧಾನಪಡಿಸುವುದೂ ಇಲ್ಲ ಸ್ವಲ್ಪ ಅವನ ಸ್ಥಿತಿಯನ್ನಾದರೂ ನೋಡಿರಿ, ಹೇಗೆ ಆಗಿದೆ!" ಎಂದಳು

ದಾಸಿಯ ಈ ಮಾತು ವೃಂದಾವನನಿಗೆ ದೊಣ್ಣೆಯ ಏಟಿನಂತೆ ತಗುಲಿತು ಅವನ ಗಾಢ ನಿದ್ದೆ ದೂರವಾಯಿತು ಅವನು ಬೆಚ್ಚಿಬಿದ್ದು " ಯಾಕೆ? ಚರಣನಿಗೆ ಏನಾಗಿದೆ?" ಎಂದ

" ದೇವರ ದಯೆಯಿಂದ ಅವನು ಕ್ಷೇಮವಾಗಿರಲಿ ಬಾ ಮಗೂ, ಇಲ್ಲಿ ಬಾ ನೋಡು, ಅಪ್ಪ ನಿನ್ನನ್ನು ಕರೆಯುತಿದ್ದಾರೆ "

ಮರೆಯಲ್ಲಿದ್ದ ಚರಣ ಬಹಳ ಸಂಕೋಚದಿಂದ ಮೆಲ್ಲನೆ ಎದುರಿಗ ಬಂದ ಬರುತ್ತಿರುವಾಗಲೇ ವೃಂದಾವನ ಅವನನ್ನು ಬರಸೆಳೆದುಕೊಂಡು ಅಳುತ್ತ " ಏನು ಮಗೂ, ನೀನೂ ಹೊರಟು ಹೋಗುವೆಯಾ?" ಎಂದ

ದಾಸಿ ಸಿಟ್ಟಿನಿಂದ " ಇದೆಂತಹ ಮಾತನಾಡುತ್ತಿರುವಿರಿ ಅಣ್ಣಾ?" ಎಂದಳು

ವೃಂದಾವನ ಲಜ್ಜಿತನಾಗಿ ಕಂಬನಿಗಳನ್ನು ಪೂಸಿಕೊಳ್ಳುತ್ತ ಬಹಳ ದಿನಗಳ ನಂತರ ಇಂದು ನಗಲು ಯತ್ನಿಸಿದ

ದಾಸಿ ತನ್ನ ಕೆಲಸಕ್ಕೆ ಹೋದ ಮೇಲೆ ಚರಣ ತೀರ ಮೆಲ್ಲಗೆ " ಅಪ್ಪಾ, ನಾನು ಅಮ್ಮನ ಬಳಿಗೆ ಹೋಗುತ್ತೇನೆ " ಎಂದ

ಇವನು ಅಜ್ಜಿಯ ಬಳಿಗೆ ಹೋಗಬಯಸುವುದಿಲ್ಲ ಎಂಬುದನ್ನು ತಿಳಿದು ವೃಂದಾವನನಿಗೆ ಬಹಳ ಸಮಾಧಾನವಾಯಿತು

" ಅವಳು ಯಾವಾಗ ಬರುವಳು ಅಪ್ಪಾ?"

" ಗೊತ್ತಿಲ್ಲಪ್ಪಾ, ಇಂದೇ ಯಾರನ್ನಾದರೂ ಕಳಿಸಿ ತಿಳಿದುಕೊಳ್ಳುತ್ತೇನೆ ಮಗೂ "

ಚರಣನಿಗೆ ಬಹಳ ಸಂತೋಷವಾಯಿತು ವೃಂದಾವನ ಬಹಳವಾಗಿ

ಯೋಚಿಸಿ, ಚರಣನನ್ನು ಕರೆದೊಯ್ಯಲು ಕೇಶವನಿಗೆ ಕಾಗದ ಬರೆದ. ಕಾಗದದಲ್ಲಿ ತಮ್ಮ ಊರಿನ ಭೀಕರ ಸ್ಥಿತಿಯನ್ನೂ ಬಣ್ಣಿಸಿದ

ತಾಯಿಯ ಉತ್ತರಕ್ರಿಯೆಗೆ ಇನ್ನು ಎರಡು ದಿನ ಮಾತ್ರ ಉಳಿದಿವೆ. ಬಳಿಗ್ಗೆ ವೃಂದಾವನ ಚಂಡೀ ಮಂಟಪದಲ್ಲಿ ಏನೋ ಕೆಲಸದಲ್ಲಿ ತೊಡಗಿದ್ದ. ಅಷ್ಟರಲ್ಲಿ ಮನೆಯಲ್ಲಿ ಚರಣನಿಗೂ ವಾಂತಿ–ಭೇದಿ ಆರಂಭವಾಗಿದೆಯೆಂದು ತಿಳಿದು ಬಂತು

ಅವನು ಓಡುತ್ತ ಕೋಣೆಗೆ ಹೋದ ಅಲ್ಲಿ ಹಾಸಿಗೆಯ ಮೇಲೆ ಚರಣ ನಿರ್ಜೀವಿಯಂತೆ ಬಿದ್ದುಕೊಂಡಿದ್ದಾನೆ ಅವನ ವಾಂತಿ-ಭೇದಿಯಲ್ಲಿ ಮಾರೀ ಪಿಡುಗಿನ ಸ್ಪಷ್ಟ ಲಕ್ಷಣಗಳು ಎದ್ದು ಕಾಣುತ್ತಿವೆ

ವೃಂದಾವನನ ಕಣ್ಣುಗಳಿಗ ಇಡೀ ಪ್ರಪಂಚವೇ ಕತ್ತಲುಗೂಡಿದಂತೆ ತೋರಿತು ಅವನ ಕೈಕಾಲುಗಳೊಳಗಿನ ಶಕ್ತಿಯೆ ಉಡುಗಿ ಹೋಯಿತು ಅವನು ಮಗನ ಮಂಚದ ಹತ್ತಿರ ಹೆಣದಂತೆ ಬಿದ್ದುಕೊಂಡು “ ಕೇಶವನಲ್ಲಿಗೆ ಸ್ವಲ್ಪ ಹೋಗಿ ಈ ಸುದ್ದಿ ತಿಳಿಸಿ ಬಾ ” ಎಂದ

ಒಂದು ಗಂಟೆಯ ನಂತರ ಗೋಪಾಲ ವೈದ್ಯರ ಬಳಿಗೆ ಹೋಗಿ ಅವರ ಪಾದಗಳನ್ನು ಗಟ್ಟಿಯಾಗಿ ಹಿಡಿದು “ ವೈದ್ಯರೆ, ದಯವಿಟ್ಟು ನನ್ನ ಮಗನ ಪ್ರಾಣ ಉಳಿಸಿರಿ ನಾನು ಅದೆಷ್ಟು ತಪ್ಪುಗಾರನಾದರೂ ಆ ಮಗು ನಿರ್ದೋಷಿ ಅವನು ತೀರ ಚಿಕ್ಕ ಮಗು ವೈದ್ಯರೆ, ಒಂದು ಸಲ ಬಂದು ನೋಡಿರಿ ಅವನು ಪಡುತ್ತಿರುವ ಸಂಕಟದಿಂದ ನಿಮಗೂ ದಯೆ ಬರುವುದು” ಎಂದು ಅಂಗಲಾಚಿ ಬೇಡಿಕೊಂಡ

ಗೋಪಾಲ ವೈದ್ಯರು ಹುಬ್ಬುಗಂಟಿಕ್ಕಿ “ ತಾರಿಣಿ ಮುಖೋಪಾಧ್ಯಾಯರು ಈ ವೈದ್ಯ ಮಹಾಶಯರ ಸೋದರಮಾವನೆಂಬುದು ಆಗ ಗೊತ್ತಿರಲಿಲ್ಲವೇನೊ ? ಶೂದ್ರನಾಗಿಯೂ ದುಡ್ಡಿನ ಬಲದಿಂದ ಬ್ರಾಹ್ಮಣನ ಅವಮಾನವೆ ? ಅವರ ಕಾಲು ಹಿಡಿಯಬೇಕಾಗುವುದೆಂಬ ವಿಚಾರ ಆಗ ಬರಲಿಲ್ಲವೇನು ? ” ಎಂದರು

ವೃಂದಾವನ ಅಳುತ್ತ– “ ಬ್ರಾಹ್ಮಣರಾದ ತಮ್ಮ ಕಾಲು ಮುಟ್ಟಿ ಹೇಳುವೆ, ನಾನು ತಾರಿಣಿ ಮಹಾಶಯರ ಮರ್ಯಾದೆ ಕಳೆಯಲಿಲ್ಲವೆಂದು ನಾನು ಅವರಿಗೆ ಬೇಡವೆಂದು ಹೇಳಿದುದು ಇಡಿಯ ಊರಿನ ಕಲ್ಯಾಣಕ್ಕಾಗಿ. ನೀವು ವೈದ್ಯರು. ಇಂತಹ ವೇಳೆಯಲ್ಲಿ ಕುಡಿಯುವ ನೀರನ್ನು ಹಾಳು ಮಾಡುವುದು ಎಷ್ಟು ದೊಡ್ಡ ಅನ್ಯಾಯವೆಂಬುದನ್ನು ನೀವು ಬಲ್ಲಿರಿ!” ಎಂದ.

ವೈದ್ಯರು ಕಾಲು ಬಿಡಿಸಿಕೊಂಡು “ ಹೌದು ಹೌದು, ಅನ್ಯಾಯವೇ ಸರಿ ! ಮಾಮಾ ಬಹಳ ದೊಡ್ಡ ಅನ್ಯಾಯ ಮಾಡಿದರು ನಾನು ವೈದ್ಯನಾದರೂ ನನಗೆ ಗೊತ್ತಿಲ್ಲ. ದುರ್ಗಾದಾಸರಿಂದ ನಾಲ್ಕು ಇಂಗ್ಲೀಷು ಶಬ್ದಗಳನ್ನು ಕಲಿತು ನನಗೆ ಜ್ಞಾನೋಪದೇಶ ಮಾಡಲು ಬಂದೆಯಾ ! ಅಷ್ಟು ದೊಡ್ಡ ಕೆರೆಯಲ್ಲಿ ಒಂದೆರಡು ಬಟ್ಟೆ ಒಗೆಯುವುದರಿಂದ ನೀರು ಕೆಟ್ಟು ಹೋಗುವುದೆ ? ನಾವು ಚಿಕ್ಕಮಕ್ಕಳೆಂದು ತಿಳಿದಿರುವೆಯೇನು ? ಇದು ಮತ್ತೇನೂ ಅಲ್ಲ, ದುಡ್ಡಿನ ಮದ ಅಲ್ಪರಿಗೆ ಸಿರಿವಂತಿಕೆ ಬಂದರೆ ಆಗುವುದು ಹೀಗೆಯೇ ಏನು ಆ ಬ್ರಾಹ್ಮಣ ಕೆರೆಗ ಬರದಂತೆ ಮಾಡುತಿದ್ದೆಯಾ ನೀನು? ಎಷ್ಟು ಸೊಕ್ಕು ! ಎಷ್ಟು ಅಹಂಕಾರ ! ನಡೆ ಇಲ್ಲಿಂದ ನಿನ್ನ ಮನೆಯಲ್ಲಿ ಕಾಲಿಡುವುದೂ ಸಾಧ್ಯವಿಲ್ಲ” ಎಂದರು

ಮಗನಿಗಾಗಿ ವೃಂದಾವನನ ಎದೆ ಬಿರಿಯುತಿದ್ದಿತು ಅವನು ಪುನಃ ವೈದ್ಯರ ಕಾಲು ಹಿಡಿದು “ ವೈದ್ಯರೆ, ನಾನು ತಪ್ಪನ್ನು ಒಪ್ಪಿಕೊಳ್ಳುತ್ತೇನೆ. ಬೇಕಾದರೆ ನಿಮ್ಮ ಮೆಟ್ಟನ್ನು ತಲೆಯ ಮೇಲೆ ಇಟ್ಟುಕೊಳ್ಳುತ್ತೇನೆ. ಒಂದು ಸಲ ನಡೆಯಿರಿ, ಹುಡುಗನ ಪ್ರಾಣ ಉಳಿಸಿರಿ ವೈದ್ಯರೆ ನೂರು ರೂಪಾಯಿ ಕೊಡುತ್ತೇನೆ, ಇನ್ನೂರು ಕೊಡುತ್ತೇನೆ, ಐನೂರು ಬೇಕಾದರೂ ಕೊಡುತ್ತೇನೆ ನೀವು ಕೇಳಿದುದನ್ನು ಕೊಡುತ್ತೇನೆ ನಡೆಯಿರಿ, ಔಷಧ ಕೊಡಿರಿ ” ಎಂದು ಪ್ರಾರ್ಥಿಸಿದ

ಐದು ನೂರು ರೂಪಾಯಿ !

ಗೋಪಾಲ ವೈದ್ಯರ ಬಾಯಿಯಲ್ಲಿ ನೀರು ಇಳಿಯತೊಡಗಿತು “ನಿನಗೆ ಗೊತ್ತಿಲ್ಲ ವೃಂದಾವನ, ಆದ್ದರಿಂದ ಸ್ಪಷ್ಟವಾಗಿ ಹೇಳುತ್ತೇನೆ ನಿನ್ನ ಮನೆಗೆ ಬಂದರೆ ನನ್ನನ್ನು ಸಮಾಜದಿಂದ ಹೊರಗ ಹಾಕುವರು ನಮ್ಮ ಜನರೆಲ್ಲ ಇದೀಗ ಬಂದಿದ್ದರು ! ನಾನು ತಾರಿಣಿ ಬಾಬುಗಳ ಮಾತು ಮೀರಿದರೆ ಊರಿನ ಎಲ್ಲ ಬ್ರಾಹ್ಮಣರೂ ನನಗ ಬಹಿಷ್ಕಾರ ಹಾಕುವರು ನನಗೆ ಇದೊಂದೇ ಹೆದರಿಕೆ ನಾನು ವೈದ್ಯನಲ್ಲವೆ? ಹಣ ತೆಗದುಕೊಂಡು ಔಷಧ ಕೊಡುವುದೇ ನನ್ನ ಕೆಲಸ ಆದರೆ ಇದು ಒಂದು ಮಾತ್ರ ಆಗದ ಮಾತು. ನಿನ್ನ ಮೇಲೆ ದಯೆದೋರಿದರೆ ನನ್ನ ಮಕ್ಕಳು–ಮೊಮ್ಮಕ್ಕಳ ಮದುವೆ ನಡೆಯುವುದು ಹೇಗೆ ? ನಾಳೆಯೆ ನನ್ನ ತಾಯಿ ಸತ್ತರೆ ಆಕೆಯ ಸದ್ಗತಿ ಹೇಗಾಗ ಬೇಕು ? ನಿನ್ನನ್ನು ಕಟ್ಟಿಕೊಂಡರೆ ಈ ಎಲ್ಲ ಕೆಲಸ ನೆರವೇರುವುದೆ ? ನೀನು

ಹೀಗೆ ಮಾಡು ಘೋಷಾಲ ಮಹಾಶಯರನ್ನು ಕರೆದುಕೊಂಡು ನಮ್ಮ ಮಾವನ ಬಳಿಗೆ ಹೋಗು ಅವರು ಮುದುಕರು; ಅವರ ಮಾತನ್ನು ಯಾರೂ ಮೀರುವುದಿಲ್ಲ ಅವರ ಕಾಲಿಗೆ ಬೀಳು ಅವರು ಒಮ್ಮೆ ನನಗೆ ಹೇಳಿಬಿಟ್ಟರೆ ಸಾಕು, ಬರಲು ನಾನು ಯಾವಾಗಲೂ ಸಿದ್ಧ. ಈಗ ನಾನು ಹೊಸ, ತೀಕ್ಷ್ಣ ಔಷಧ ತರಿಸಿದ್ದೇನೆ ಹುಡುಗನಿಗೆ ಕೂಡಲೇ ಗುಣವಾಗುವುದು" ಎಂದರವರು

ವೃಂದಾವನ ವಿಹ್ವಲನಾಗಿ ನೋಡುತ್ತಲಿದ್ದ ವೈದ್ಯರು ಧೈರ್ಯ ಕೊಡುತ್ತ "ಹೆದರಬೇಡ ತಡಮಾಡಬೇಡ, ಬೇಗ ಹೋಗು ಇಕೋ, ಅಲ್ಲಿ ಹಣದ ಮಾತೆತ್ತಬೇಡ ಮತ್ತೆ ಬೇಗ ಹೋಗು" ಎಂದರು

ವೃಂದಾವನ ಅಳುತ್ತಿರುವಾಗಲೆ ಓಡಿ ತಾರಿಣಿ ಮಹಾಶಯರ ಪುಣ್ಯ-ಪಾದಗಳನ್ನು ಸ್ಪರ್ಶಿಸಿದ ತಾರಿಣಿ ಮಹಾಶಯರು ಒದೆದು ಕಾಲು ಬಿಡಿಸಿಕೊಳ್ಳುತ್ತ ಪಿಶಾಚಿಯಂತೆ ನಕ್ಕು "ನಾನು ಸಂಧ್ಯಾವಂದನೆ ಮಾಡದೆ ನೀರನ್ನು ಸಹ ಕುಡಿಯುವುದಿಲ್ಲ ನೋಡು, ನಾನು ಹೇಳಿದಂತೆ ಆಯಿತೊ ಇಲ್ಲವೊ? ನಿನ್ನ ವಂಶ ಹಾಳಾಗದೆ ಬಿಟ್ಟೀತೆ?" ಎಂದು ಚುಚ್ಚಿ ನುಡಿದರು

ವೃಂದಾವನನ ಅಳುವನ್ನು ಕೇಳಿ ತಾರಿಣಿಯ ಹೆಂಡತಿ ಓಡುತ್ತ ಬಂದು ತಾನೂ ಅಳತೊಡಗಿದಳು ಅವಳು ತನ್ನ ಗಂಡನಿಗೆ "ಛೀ ಛೀ, ಇಂತಹ ಅನ್ಯಾಯ ಮಾಡಬೇಡಿರಿ ಆಗಬೇಕಾದುದು ಆಗಿ ಹೋಯಿತು ಅಯ್ಯೋ ಪಾಪ, ಏನೂ ತಿಳಿಯದ ಚಿಕ್ಕ ಮಗು, ಹೋಗಿ ಔಷಧ ಕೊಡಲಿಕ್ಕೆ ಗೋಪಾಲನಿಗೆ ಹೇಳಿಬಿಡಿರಿ" ಎಂದಳು

ತಾರಿಣಿ ಆರ್ಭಟಿಸಿದ — "ಥೂ, ತೊತ್ತಿನ ಮಗಳೆ, ಗಂಡುನರ ಎದುರು ಮಾತಾಡಬೇಡ"

ಅವನ ಹೆಂಡತಿ ಸ್ವಲ್ಪ ಗಾಬರಿಗೊಂಡು ವೃಂದಾವನನಿಗೆ "ಹೋಗಪ್ಪ ನಾನು ಆಶೀರ್ವದಿಸುವೆ- ನಿನ್ನ ಮಗನಿಗೆ ಗುಣವಾಗಲಿ" ಎಂದು ಕಂಬನಿಗಳನ್ನು ಒರೆಸಿಕೊಳ್ಳುತ್ತ ಒಳಗೆ ಹೋದಳು

ವೃಂದಾವನ ಹುಚ್ಚನಾಗಿ ಕಾತುರತೆಯಿಂದ ಬೇಡಿಕೊಳ್ಳುತ್ತ ತಾರಿಣಿಯ ಕೈಕಾಲು ಹಿಡಿದುಕೊಳ್ಳಲಾರಂಭಿಸಿದ ಆದರೆ ಪ್ರಯೋಜನವೇನು?

ಇದೇ ವೇಳೆಗೆ ಪಕ್ಕದ ಮನೆಯಿಂದ ಕಡಾವಿಗೆಯ ಸಪ್ಪಳದೊಂದಿಗೆ ಶಾಸ್ತ್ರಜ್ಞರಾದ ಘೋಷಾಲ ಮಹಾಶಯರು ಅಲ್ಲಿಗೆ ಬಂದು ಎಲ್ಲವನ್ನೂ

ಕೇಳಿ ಪ್ರಸನ್ನ ಚಿತ್ತದಿಂದ ಹೇಳತೊಡಗಿದರು— "ಸಲಿಗೆ ಕೊಟ್ಟರೆ ನಾಯಿ ತಲೆಗೇರುವುದು ಶೂದ್ರರಿಗೆ ಶಾಸನ ಮಾಡದಿದ್ದರೆ ಜಗತ್ತು ನಾಶವಾಗುವುದು ಕಲಿಕಾಲದಲ್ಲಿ ಧರ್ಮ-ಕರ್ಮ, ಬ್ರಾಹ್ಮಣ ಸನ್ಮಾನ ಇವೆಲ್ಲ ಲೋಪವಾಗುವುದು ಹೀಗೆಯೇ ಇದೆಲ್ಲವೂ ಶಾಸ್ತ್ರದಲ್ಲಿದ್ದ ಮಾತು ಏನಪ್ಪಾ ತಾರಿಣಿ, ವೃಂದಾವನ ಬಹಳ ಸೊಕ್ಕಿದ್ದಾನೆಂದು ನಾನು ಆದಿನ ಹೇಳಲಿಲ್ಲವೆ? ನನ್ನ ಮಾತು ಮೀರಿದಾಗಲೇ ತಿಳಿದಿದ್ದೆ— ಇವನಿಗೆ ದೈವವೂ ಮುನಿದಿದೆಯೆಂದು ಇನ್ನು ಇವನ ಕಲ್ಯಾಣವಾಗಲಾರದು ನೋಡಿದೆಯಾ, ಮಾಡಿದ ಫಲ ಆಗಿಂದಾಗ ಹೇಗೆ ಸಿಕ್ಕಿತು!"

ತಾರಿಣಿ ಮನಸ್ಸಿನಲ್ಲಿಯೆ ಸ್ವಲ್ಪ ಅಸಮಾಧಾನಗೊಂಡು "ನಾನೂ ಹೇಳಿರಲಿಲ್ಲವೆ? ಅಂದು ಕೆರೆಯ ದಂಡಯ ಮೇಲೆ ನಿಂತು 'ನಿನ್ನ ವಂಶ ಹಾಳಾಗಿ ಹೋಗುವುದೆಂ'ದು ಸಾರಿಸಾರಿ ಹೇಳಿದ್ದೆನಲ್ಲವೆ? ಕಕ್ಕಾ, ಸಂಧ್ಯಾವಂದನೆ ಮಾಡದೆ ನಾನು ನೀರು ಕೂಡ ಮುಟ್ಟುವುದಿಲ್ಲ ಹಗಲು-ರಾತ್ರಿಗಳು ಈಗಲೂ ಇವೆ ಸಮುದ್ರದಲ್ಲಿ ಏರಿಳಿತಗಳು ಈಗಲೂ ಆಗುತ್ತವೆ" ಎಂದ ತಾನು ಹೊಡೆದ ಪ್ರಾಣಿ ಸೀಮಾತೀತ ವೇದನೆಯಿಂದ ಚಡಪಡಿಸುವುದನ್ನು ಕಂಡು ಬೇಟೆಗಾರನು ತೃಪ್ತನಾಗುವಂತೆ, ಏಕಮಾತ್ರ ಪುತ್ರನ ದುಃಖದಿಂದ ಪೀಡಿತನಾದ ತಂದೆಯ ಮೇರೆಮೀರಿದ ವ್ಯಥೆಯನ್ನು ಕಂಡು ತಾರಿಣಿಗ ಅಭಿಮಾನಪೂರ್ವಕವಾದ ತೃಪ್ತಿಯಾಯಿತು

ಆದರೆ ವೃಂದಾವನ ಎದ್ದು ನಿಂತ ಪ್ರಾಣವನ್ನುಳಿಸಲು ಅವನು ಬಹಳವಾಗಿ ಪ್ರಾರ್ಥಿಸಿದ್ದ, ಬಹಳವಾಗಿ ಹೇಳಿಕೊಂಡಿದ್ದ ಈಗ ಮಾತ್ರ ಅವನು ಒಂದು ಮಾತನ್ನೂ ಆಡಲಿಲ್ಲ ಘೋರ ಅಜ್ಞಾನದ, ಅಂಧತಮ ಮೌಢ್ಯದ, ಅಸಹ್ಯ ಅತ್ಯಾಚಾರವು ಪುತ್ರವಿಯೋಗದ ವೇದನೆಯನ್ನು ಮೀರಿ ಅವನಲ್ಲಿ ಆತ್ಮಾಭಿಮಾನವನ್ನು ಜಾಗ್ರತಗೊಳಿಸಿತು ಊರಿನ ಕಲ್ಯಾಣದ ದೃಷ್ಟಿಯಿಂದ ಮಾಡಿದ ಈ ಕೆಲಸಕ್ಕಾಗಿ ನಿರ್ವಂಶನಾಗುವ ಈ ಫಲವು ಈ ಈರ್ವರು ಧರ್ಮನಿಷ್ಠ ಬ್ರಾಹ್ಮಣರಲ್ಲಿ ಯಾರಿಂದ ತನಗೆ ಸಿಕ್ಕಿತು? ಗಾಯತ್ರೀಮಂತ್ರ ಪ್ರಭಾವಾನ್ವಿತನಾದ ಈ ಬಾಹ್ಮಣನಿಂದಲೊ? ಸಂಧ್ಯಾವಂದನಾ ಕರ್ಮಪ್ರವೃತಿಯ ತೇಜಸ್ಸಿನಿಂದ ಶೋಭಿಸುತ್ತಿರುವ ಆ ಬ್ರಾಹ್ಮಣನಿಂದಲೊ? ಎಂಬ ಮೀಮಾಂಸೆಯನ್ನು ಕೇಳದೆ ವೃಂದಾವನ ಅಲ್ಲಿಂದ ಹೊರಟು ಹೋದ ಸುಮಾರು ಹತ್ತು ಗಂಟೆಗೆ, ರೋಗಗ್ರಸ್ತ

ನಾದ ತನ್ನ ಮಗನ ಮಂಚದ ಬಳಿ ನಿರುದ್ವಿಗ್ನ, ಶಾಂತ ಚಿತ್ತದಿಂದ ಬಂದು ಕುಳಿತ

ಕೇಶವ ಆಗ ಬೆಂಕಿಯನ್ನು ಹೊತ್ತಿಸಿ ಚರಣನ ಅಂಗೈ-ಅಂಗಾಲನ್ನು ಕಾಯಿಸುತ್ತ ಮೃತ್ಯುದೇವತೆಯೊಡನೆ ಜೀವದ ಹಂಗುದೊರೆದು ಹೋರಾಡುತ್ತಲಿದ್ದ ವೃಂದಾವನನಿಂದ ಎಲ್ಲ ಸುದ್ದಿಯನ್ನು ಕೇಳಿ ಅವನ ಬಾಯಿಂದ "ಓಃ!" ಎಂಬ ಉದ್ಗಾರ ಹೊರಬಿದ್ದಿತು

ಬಳಿಕ ಕೇಶವ ಎದ್ದು ನಿಂತು ಹೆಗಲ ಮೇಲೆ ಸಲ್ಲಯೊಂದನ್ನು ಹಾಕಿಕೊಳ್ಳುತ್ತ– "ನಾನು ಕಲಕತ್ತೆಗೆ ಹೋಗುತ್ತೇನೆ ಡಾಕ್ಟರರಾರಾದರೂ ಸಿಕ್ಕಿದರೆ ಸಂಜೆಯೊಳಗಾಗಿ ಮರಳಿ ಬರುತ್ತೇನೆ ಒಂದು ವೇಳೆ ಸಿಗದಿದ್ದರೆ ಇನ್ನು ನಾನು ಹಿಂದಿರುಗುವುದಿಲ್ಲವೆಂದು ತಿಳಿಯಿರಿ ಅಯ್ಯೋ! ಒಂದಾನೊಂದು ಕಾಲದಲ್ಲಿ ಇಡಿಯ ಪೃಥ್ವಿಗೇ ಅಭಿಮಾನದ ವಸ್ತುಗಳಾಗಿದ್ದ ಬ್ರಾಹ್ಮಣರು ಇವರೇ ಏನು! ಇದನ್ನು ನೆನೆಸುತ್ತಲೆ ಎದೆ ಬಿರಿಯುತ್ತದೆ ವೃಂದಾವನ! ಮಗುವನ್ನುಳಿಸಲು ಶಕ್ತಿ ಮೀರಿ ಯತ್ನಿಸಬೇಕು" ಎಂದು ಬೇಗ ಬೇಗನೆ ಹೊರಟು ಹೋದ

ಕೇಶವನು ಹೋದ ಮೇಲೆ ಹತ್ತಿರವಿದ್ದ ತಂದೆಯನ್ನು ನೋಡಿ ಚರಣ ಗಟ್ಟಿಯಾಗಿ ಅಳತೊಡಗಿದ— "ಅಪ್ಪಾ, ನಾನು ಅಮ್ಮನ ಹತ್ತಿರ ಹೋಗುತ್ತೇನೆ" ಚರಣ ಸ್ವಾಭಾವಿಕವಾಗಿ ಶಾಂತ ಹುಡುಗ, ಹಟವೆಂಬುದನ್ನರಿಯದವನು ಆದರೆ ಇಂದು ಅವನನ್ನು ಸಮಾಧಾನಪಡಿಸುವುದು ದುಸ್ತರವಾಯಿತು ಸಂಜೆಯಾಗುತ್ತ ಬಂದಂತೆ ಬೇನೆ ಏರುತ್ತ ನಡೆದಿದ್ದಿತು ಬಾಯಾರಿಕೆಯ ಹಾಹಾಕಾರವೂ ತಾಯಿಯ ಸಾನ್ನಿಧ್ಯವನ್ನು ಕುರಿತ ಉನ್ಮತ್ತತೆಯ ಚೀತ್ಕಾರವೂ ಎಲ್ಲರನ್ನೂ ಹುಚ್ಚರನ್ನಾಗಿ ಮಾಡಿದುವು ಆ ಚೀತ್ಕಾರ ಮೂರನೆ ಪ್ರಹರದಲ್ಲಿ ಕುತ್ತಿಗೆ ಬಿಗಿಯುತಿದ್ದಾಗ ಮತ್ತು ಕೈಕಾಲು ಮರಗಟ್ಟುತಿದ್ದಾಗ ಕಡಿಮೆಯಾಗತೊಡಗಿತು •

ಚೈತ್ರದೊಳಗಿನ ಚಿಕ್ಕ ಹಗಲು ಮುಗಿಯುತ್ತ ಬಂದಿದ್ದಿತು ಆಗ ಕೇಶವನು ಡಾಕ್ಟರರನ್ನು ಕರೆದುಕೊಂಡು ಮನೆಗೆ ಬಂದ ಡಾಕ್ಟರರು ಅವನ ಸಮವಯಸ್ಕರು, ಮಿತ್ರರು ಅವರು ಚರಣನನ್ನು ನೋಡಿದ ಕೂಡಲೇ ಗಂಭೀರರಾಗಿ ಒಂದು ಕಡೆಗೆ ಕುಳಿತುಬಿಟ್ಟರು ಕೇಶವ ಹೆದರುತ್ತ ಅವರ ಕಡೆಗೆ ನೋಡಿದ ಅವರು ಏನನ್ನೋ ಹೇಳಬಯಸುತಿದ್ದರು, ಆದರೆ ವೃಂದಾವನನನ್ನು ನೋಡಿ ಸುಮ್ಮನಾದರು

ವೃಂದಾವನ ಇದನ್ನು ತಿಳಿದು ಬಹಳ ಶಾಂತಭಾವದಿಂದ- "ಹೌದು, ನಾನೇ ಈ ಹುಡುಗನ ತಂದೆ ಸಂಕೋಚ ವಡುವ ಕಾರಣವಿಲ್ಲ ನೀವು ಹೇಳಬೇಕಾದುದನ್ನು ಸ್ಪಷ್ಟವಾಗಿ ಹೇಳಿರಿ ಡಾಕ್ಟರ್ ಮಹಾಶಯರೇ, ಏಕಮಾತ್ರ ಪುತ್ರನಿಗೆ ಯಾವ ಚಿಕಿತ್ಸೆಯನ್ನೂ ಮಾಡಿಸದಿರುವ ತಂದೆ ಎಂತಹ ಮಾತನ್ನೂ ಸಹಿಸಬಲ್ಲ" ಎಂದ

ತಂದೆಯ ಧೈರ್ಯವನ್ನು ಕಂಡು ಡಾಕ್ಟರರು ಮನಸ್ಸಿನಲ್ಲಿಯೆ ಸ್ತಂಭಿತ ರಾದರು ಅವರು ಡಾಕ್ಟರರಾದರೇನಾಯಿತು, ಮನುಷ್ಯರಲ್ಲವೆ? ಹೇಳ-ಬೇಕಾದುದನ್ನು ತಂದೆಯ ಎದುರಿಗ ಹೇಳಲಾರದೆ ಮುಖವನ್ನು ತಗ್ಗಿಸಿದರು

ವೃಂದಾವನ ಇದನ್ನು ತಿಳಿದುಕೊಂಡು "ಕೇಶವ, ನಾನು ಈಗ ಬರುತ್ತೇನೆ ಪಕ್ಕದಲ್ಲಿ ದೇವರ ಮನೆ ಇದೆ ಅವಶ್ಯವಿದ್ದರೆ ನನ್ನನ್ನು ಅಲ್ಲಿಂದ ಕರೆಯಿಸಬಹುದು ಇನ್ನೊಂದು ಮಾತು ಕಟ್ಟಕಡೆಯಲ್ಲಿ, ನನ್ನ ಮಗನ ಮುಖದರ್ಶನವನ್ನು ಇನ್ನೊಮ್ಮೆ ಮಾಡುತ್ತೇನೆ" ಎಂದು ಹೊರಟು ಹೋದ

ವೃಂದಾವನ ದೇವರ ಕೋಣೆ ಹೊಕ್ಕಾಗ ಕತ್ತಲಾಗಿದ್ದಿತು ಅವನು ಸಹಜವಾಗಿ ಬಲಗಡೆಗೆ ನೋಡಿದ— ತಾಯಿ ಕುಳಿತು ಜಪಮಾಡುತಿದ್ದುದು ಅಲ್ಲಿಯೆ ಕೂಡಲೇ ಅವನಿಗ ಕುಂಜನ ಆಮಂತ್ರಣ ಸ್ವೀಕರಿಸಿ ಅವನ ಮನೆಗೆ ಹೋದ ದಿನದ, ತಾಯಿ ಕುಸುಮೆಯ ಕೈಗೆ ಕಂಕಣವನ್ನು ತೊಡಿಸಿ ಅವಳಿಗೆ ಆಶೀರ್ವಾದ ಮಾಡಿದ ದಿನದ, ತಿರಿಗಿಬಂದು ಚರಣನನ್ನು ತೊಡೆಯ ಮೇಲ ಮಲಗಿಸಿಕೊಂಡು ಕುಳಿತ ದಿನದ ನೆನಪು ಬಂದಿತು ಅಂದು ಅವನು ಆ ಕೋಣೆಗ ಆನಂದದಿಂದ ಉನ್ಮತ್ತನಾಗಿ ದೇವರ ಚರಣಾರವಿಂದಗಳಲ್ಲಿ ತನ್ನ ಸೀಮಾತೀತ ಕೃತಜ್ಞತೆಯನ್ನು ವ್ಯಕ್ತಪಡಿಸುವುದಕ್ಕಾಗಿ ಸುಮ್ಮನೆ ಬಂದಿದ್ದ ಆದರೆ ಇಂದು ಅವನು ಬಂದದ್ದು ಯಾವ ನಿವೇದನಗಾಗಿ? ವೃಂದಾವನ ನೆಲದ ಮೇಲೆ ಉದ್ದಂಡವಾಗಿ ಮಲಗಿ ಎಂದ— "ಪಕ್ಕದ ಕೋಣೆಯಲ್ಲಿ ನನ್ನ ಚರಣ ಸಾಯುತಿದ್ದಾನೆ ದೇವಾ, ನಾನು ಈಗ ಈ ವಿಷಯದ ದೂರು ಹೇಳಲು ಬಂದಿಲ್ಲ ಆದರೆ ಪಿತೃಸ್ನೇಹವನ್ನು ಕೊಟ್ಟವನು ನೀನೆ ಅಹುದಾದರೆ, ತಂದೆಯ ಕಣ್ಣೆದುರಿಗೇ ಅವನ ಒಬ್ಬನೇ ಒಬ್ಬ ಮಗನ ಮರಣವು ಯಾವ ಚಿಕಿತ್ಸಯೂ ಇಲ್ಲದೆ ಹೀಗೆ ಕ್ರೂರವಾಗಿ ಆಗುವಂತೆ ಏಕೆ ಮಾಡಿದೆ? ತಂದೆಯ ಹೃದಯಕ್ಕೆ ಸಮಾಧಾನವಾಗುವ ಮಟ್ಟಿಗಾದರೂ ಈ ಅವಕಾಶವನ್ನೇಕೆ ಕೊಡಲಿಲ್ಲ?" ಪುನಃ ಅವನಿಗ ಅನೇಕ ಜನರು ಅನೇಕ

ದಿನಗಳಿಂದ ಹೇಳುತ್ತ ಬಂದಿರುವ " ಆಗುವುದೆಲ್ಲ ಕಲ್ಯಾಣಕ್ಕಾಗಿಯೆ ಆಗುವುದು '' ಎಂಬ ಮಾತು ನೆನಪಿಗೆ ಬಂದಿತು ಅವನು ಮರಳಿ ಮನದಲ್ಲಿಯೆ ಎಂದುಕೊಂಡ– " ನಿನ್ನ ಮೇಲೆ ನಂಬುಗೆ ಇಲ್ಲದವರ ಮಾತನ್ನು ನಾನು ಅರಿಯೆ ಆದರೆ, ನಿನ್ನ ಇಚ್ಛೆಯ ವಿರುದ್ಧವಾಗಿ ಒಂದು ತರಗೆಲೆಯೂ ಉದುರಲಾರದೆಂದು ನಾನು ನಿಶ್ಚಯವಾಗಿ ತಿಳಿದಿದ್ದೇನೆ ಆದುದರಿಂದ ದೇವಾ, ನಾನು ಕೇಳುವುದಿಷ್ಟೆ — ಇದರಿಂದ ಯಾವ ಮಂಗಲವಾಗುವುದೆಂಬುದನ್ನು ತಿಳಿಸಿಕೊಡು ನನ್ನ ಈ ತೀರ ಚಿಕ್ಕ ಮಗು ಚರಣನ ಮರಣದಿಂದ ಈ ಪ್ರಪಂಚದಲ್ಲಿ ಯಾರಿಗೆ ಯಾವ ಉಪಕಾರವಾಗುವುದು ? ''

ಪ್ರಪಂಚದೊಳಗಿನ ಯಾವ ಘಟನೆಯೂ ಮನುಷ್ಯನ ಬುದ್ಧಿಗೆ ಅರ್ಥವಾಗುವುದಿಲ್ಲವೆಂಬುದನ್ನು ಅವನು ಬಲ್ಲವನಾಗಿದ್ದ ಆದರೂ ಅವನು ತನ್ನ ಎಲ್ಲ ಶಕ್ತಿಯನ್ನುಪಯೋಗಿಸಿ " ಚರಣ ಹುಟ್ಟಿದ್ದೇಕೆ ? ಇಷ್ಟು ದೊಡ್ಡವನಾದುದೇಕೆ ? ಜಗತ್ತಿನಲ್ಲಿ ಯಾವ ಕೆಲಸವನ್ನೂ ಮಾಡುವ ಅವಕಾಶವಿಲ್ಲದೆ ಇಷ್ಟು ಬೇಗ ಹಿಂದಿರುಗಿದ್ದೇಕೆ ? " ಎಂಬುದನ್ನು ಯೋಚಿಸತೊಡಗಿದ

ಸ್ವಲ್ಪ ಹೊತ್ತಿನ ಮೇಲೆ ರಾತ್ರಿಯ ಪೂಜಗಾಗಿ ಪುರೋಹಿತರು ಬಂದರು ಅವರ ಕಾಲ ಸಪ್ಪಳದಿಂದ ವೃಂದಾವನನ ವಿಚಾರಸಮಾಧಿಯ ಭಂಗವಾಗಿ ಅವನ ಹೃದಯದಲ್ಲಿದ್ದ ಬಿರುಗಾಳಿ ಶಾಂತವಾಗಿದ್ದಿತು ಆಕಾಶದಲ್ಲಿ ಅದುವರೆಗೆ ಬೆಳಕು ಮೂಡಿರದಿದ್ದರೂ ಮೇಘಮುಕ್ತ, ನಿರ್ಮಲ, ಸ್ವಚ್ಛ ನಭೋಮಂಡಲದಲ್ಲಿ ಭಾವೀ ಜೀವನಮಾರ್ಗದ ಅಸ್ಪಷ್ಟ ರೇಖೆಗಳು ಕಾಣತೊಡಗಿದ್ದುವು

ಹೊರಗ ಬಂದಾಗ ಅಂಗಳದಲ್ಲಿ, ಬಾಗಿಲಿನ ಮರೆಯಲ್ಲಿ ನಿಂತ ಒಬ್ಬ ನಿಸ್ತೇಜಳಾದ ಹೆಂಗುಸನ್ನು ನೋಡಿ ವೃಂದಾವನನಿಗೆ ಅಚ್ಚರಿಯಾಯಿತು. ಇಂತಹ ಹೊತ್ತಿನಲ್ಲಿ, ಇಂತಹ ಕತ್ತಲಿನಲ್ಲಿ ಇಲ್ಲಿ ಕುಳಿತವರು ಯಾರು ?

ವೃಂದಾವನ ಹತ್ತಿರ ಹೋಗಿ ಒಂದು ಕ್ಷಣದಲ್ಲಿ ಕುಸುಮೆಯನ್ನು ಗುರುತಿಸಿದ " ಕುಸುಮಾ, ನೀನು ನನ್ನ ಹದಿನಾರೂ ಆಣೆಯ ಸುಖವನ್ನು ನೋಡಲು ಬಂದಿರುವೆಯಾ ? '' ಎಂಬ ಮಾತು ಅವನ ತುದಿನಾಲಗೆಯವರೆಗೂ ಬಂದಿತು ಆದರೆ ಅವನು ಹಾಗೆ ಹೇಳಲಿಲ್ಲ

ಇದೀಗ ಮಾತ್ರ ಅವನು ತನ್ನ ಚರಣನ ಶಿಶು - ಆತ್ಮದ ಮಂಗಲ ಕಾಮನೆಯನ್ನು ಬಯಸಿ ತನ್ನ ಸುಖ – ದುಃಖ, ಮಾನ – ಅಭಿಮಾನ,

ಎಲ್ಲವನ್ನೂ ತ್ಯಾಗ ಮಾಡಿ ಬಂದಿದ್ದ ಆದುದರಿಂದ ಹಿಂದಿನ ಸೇಡನ್ನು ಹೀನ ರೀತಿಯಿಂದ ತೀರಿಸಿ ಮೃತ್ಯುಶಯ್ಯೆಯ ಮೇಲೆ ಮಲಗಿರುವ ತನ್ನ ಮಗನ ಕೇಡು ಬಯಸುವ ಮನಸ್ಸು ಅವನಿಗಾಗಲಿಲ್ಲ ಅವನು ಕರುಣ ಕಂಠದಿಂದ “ ನೀನು ಸ್ವಲ್ಪ ಮೊದಲು ಬಂದಿದ್ದರೆ ಚರಣನ ಒಂದು ದೊಡ್ಡ ಆಸೆ ಪೂರ್ಣವಾಗುತಿತ್ತು ಇಂದು ಇಡಿಯ ದಿನ ಅವನಿಗೆ ವೇದನೆ ಹೆಚ್ಚುತ್ತಲಿದ್ದಂತೆ ನಿನ್ನ ಬಳಿ ಹೋಗಲು ಅವನ ಅಳುವೂ ಹೆಚ್ಚುತ್ತಲಿತ್ತು ಅಯ್ಯೋ! ನಿನ್ನ ಮೇಲೆ ಅವನ ಪ್ರೀತಿ ಎಷ್ಟು! ಆದರೆ ಈಗ ಅವನಿಗೆ ಎಚ್ಚರವೇ ಇಲ್ಲ- ನೋಡು ಬಾ, ನನ್ನೊಂದಿಗೆ ” ಎಂದ

ಕುಸುಮೆ ಯಾವ ಮಾತನ್ನೂ ಆಡದೆ ತನ್ನ ಗಂಡನ ಹಿಂದೆ ನಡೆದಳು ವೃಂದಾವನ ಬಾಗಿಲ ಹತ್ತಿರ ಹೋಗಿ ಚರಣನ ಮೃತ್ಯುಶಯ್ಯೆಯನ್ನು- ಅಂತಿಮ ಶಯ್ಯೆಯನ್ನು- ತೋರಿಸುತ್ತ “ ಅಲ್ಲಿ ನೋಡು, ಚರಣ ಹೇಗೆ ಬಿದ್ದಿದ್ದಾನೆ! ಹೋಗು, ಅವನನ್ನು ಎತ್ತಿಕೋ- ಕೇಶವ, ಇವಳು ಚರಣನ ತಾಯಿ ’ ಎಂದ

ಬಳಿಕ ಅವನು ಮೆಲ್ಲಗೆ ಬೇರೆ ಕಡಗೆ ಹೋದ

ಮರುದಿನ ಬಳಿಗ್ಗೆ ಕುಸುಮೆಯ ಬಳಿಗೆ ಹೋಗಿ ಮಾತನಾಡುವ ಧೈರ್ಯ ಯಾರಿಗೂ ಆಗಲಿಲ್ಲ ಕುಂಜನಾಥನೂ ಹೆದರಿ ಹಿಂದೆ ಸರಿದ ಆಗ ವೃಂದಾವನ ಮೆಲ್ಲಗ ಕುಸುಮೆಯ ಹತ್ತಿರ ಬಂದು ‘‘ ಇನ್ನು ಈ ಹೆಣ ವನ್ನು ಹಿಡಿದಿಟ್ಟುಕೊಳ್ಳುವುದರಿಂದೇನು ಲಾಭ? ಬಿಟ್ಟು ಬಿಡು, ಅವರು ತೆಗೆದುಕೊಂಡು ಹೋಗಲಿ ’’ ಎಂದ

ಕುಸುಮೆ ತಲೆ ಎತ್ತಿ ‘‘ ಆ ಜನರಿಗೆ ಬರಲು ಹೇಳಿರಿ ನಾನೇ ಎತ್ತಿ ಕೊಡುವೆ ’’ ಎಂದಳು

ಇದರ ನಂತರ ಚರಣನ ಮೃತಶರೀರವನ್ನು ಸ್ಮಶಾನಕ್ಕೆ ಕಳಿಸುವಾಗ ಕುಸುಮೆ ತೋರಿಸಿದ ದೃಢತೆಯನ್ನು ಕಂಡು ವೃಂದಾವನ ಮನದಲ್ಲಿಯೆ ಭಯಭೀತನಾದ

೧೫

ಚರಣನ ಎಳೆ ದೇಹ ಸುಟ್ಟು ಬೂದಿಯಾಗಲು ತಡವಾಗಲಿಲ್ಲ ಕೇಶವನು ಅತ್ತ ನೋಡುತ್ತ ಭಯಂಕರವಾದ ಉಸಿರ್ಗರೆದು ಬೊಬ್ಬಿರಿದ—" ಇದೆಲ್ಲ ಸುಳ್ಳು! ಪರಮಾತ್ಮನು ಮಾಡುವುದೆಲ್ಲ ನಮ್ಮ ಕಲ್ಯಾಣಕ್ಕಾಗಿ ಎಂದು ಹೇಳುವವರೆಲ್ಲರೂ ರಾಕ್ಷಸರು, ದುಷ್ಟರು, ಕೃತಘ್ನರು, ನೀಚರು!"

ವೃಂದಾವನ ಎರಡೂ ಮೊಣಕಾಲುಗಳ ನಡುವೆ ಮುಖವನ್ನಿಟ್ಟು-ಕೊಂಡು ಸ್ತಬ್ಧನಾಗಿ ಕುಳಿತಿದ್ದ ಆದರೆ ಅತ್ಯಂತ ಕೆಂಪಾದ ಕಣ್ಣುಗಳನ್ನು ಮೇಲಕ್ಕೆತ್ತಿ ಸ್ವಲ್ಪ ಹೊತ್ತು ನೋಡಿ " ಕೇಶವ, ಸ್ಮಶಾನದಲ್ಲಿ ಹೀಗೆ ರೇಗಿಕೊಳ್ಳಬಾರದು" ಎಂದ

ಕೇಶವ " ಓಃ!" ಎಂದು ಸುಮ್ಮನಾದ

ಸ್ಮಶಾನದಿಂದ ಮರಳುತ್ತಿರುವಾಗ ದಾರಿಯಲ್ಲಿ ಒಂದು ಮರದ ಕೆಳಗೆ ವಾಗ್ದಿಗಳ-ಒಂದು ಹಿಂದುಳಿದ ಜಾತಿಯ-ಇಬ್ಬರು ಮೂವರು ಹುಡುಗರು ಆಡುತಿದ್ದರು ವೃಂದಾವನ ನಿಂತು ಎವೆ ಇಕ್ಕದ ಅವರನ್ನೆ ನೋಡತೊಡಗಿದ ಹುಡುಗರು ಆಡಲು ಬೇರೊಂದು ಮರದ ಕೆಳಗೆ ಓಡಿಹೋದರು ಆಗ ಅವನು ತನಿಯುಸುರೊಂದನ್ನು ಎಳೆದುಕೊಂಡು ತನ್ನ ಗೆಳೆಯನ ಕಡಗ ನೋಡುತ್ತ " ನಿನ್ನ ರಾತ್ರಿಯಿಂದ ನನ್ನ ಮನಸ್ಸಿನಲ್ಲೇಳುತಿದ್ದ ಪ್ರಶ್ನೆಗೆ ಈಗ ಉತ್ತರ ದೊರೆತಂತೆ ತೋರುವುದು ಸಂಸಾರದಲ್ಲಿ ತನ್ನ ಒಬ್ಬನೇ ಒಬ್ಬ ಪ್ರಿಯ ಪುತ್ರನ ಸಾವಿನಲ್ಲಿಯೂ ಒಂದು ಪ್ರಯೋಜನವಿದೆ" ಎಂದ

ಇದುವರೆಗ ಏನೇನೊ ಬಡಬಡಿಸುತ್ತಲಿದ್ದ ಕೇಶವ ಅಕಸ್ಮಾತ್ ಈ ಅದ್ಭುತ ಸಿದ್ಧಾಂತವನ್ನು ಕೇಳಿ ದಿಙ್ಮೂಢನಾದ

" ನಿನಗ ಮಕ್ಕಳು-ಮರಿಗಳಿಲ್ಲ ಎಷ್ಟು ಪ್ರಯತ್ನವಟ್ಟರೂ ನೀನು ನನ್ನ ಕಸಿಪಿಸಿಯನ್ನರಿಯಲಾರೆ, ಅರಿಯುವುದು ಅಸಂಭವ ಇಂತಹ ದುಃಖವನ್ನು ಯಾರೂ ತನ್ನ ಹಗಗೂ ಬಯಸಲಾರರು ಆದರೆ ಕೇಶವ, ಇದಕ್ಕೂ ಒಂದು ಬೆಲೆ ಇದೆ, ಅರ್ಥವಿದೆ ಇದರ ಬೆಲೆ ಬಹಳ ದೊಡ್ಡದೆಂದು ಈಗ ನನಗ ತೋರುತ್ತಿದೆ ಪರಮಾತ್ಮನು ಈ ವ್ಯವಸ್ಥೆ ಮಾಡಿದ್ದು ಅದಕ್ಕೇ ಎಂದು ಕಾಣುವುದು" ಎಂದ ವೃಂದಾವನ

ಕೇಶವ ಹಾಗೆಯೆ ನಿರುತ್ತರನಾಗಿ ಮುಖವನ್ನೀಕ್ಷಿಸುತಿದ್ದ ವೃಂದಾವನ ಮರಳಿ ಹೇಳತೊಡಗಿದ–" ಆ ಮಕ್ಕಳನ್ನು ನೋಡಿ ನನ್ನ ಹೊಟ್ಟೆಯುರಿ

ತಣ್ಣಗಾಗುತ್ತಿದೆ ಇಂದು ನನಗೆ ಎಲ್ಲ ಮಕ್ಕಳೂ ಚರಣನಂತೆ ಕಾಣುತ್ತಾರೆ ಈಗ ಮಾತ್ರ ನನಗೆ ಎಲ್ಲ ಮಕ್ಕಳನ್ನೂ ಅಪ್ಪಿಕೊಳ್ಳುವ ಬಯಕೆಯಾಗಿದೆ ಚರಣನು ಬದುಕಿರುವ ವರೆಗೆ ಹೀಗೆಂದೂ ಎನಿಸಿರಲಿಲ್ಲ ''

ಕೇಶವ ಮುಖವನ್ನು ತಗ್ಗಿಸಿ ಸುಮ್ಮನೆ ಕೇಳುತ್ತ ನಡೆಯತೊಡಗಿದ ಸಾಲೆಯ ವಿದ್ಯಾರ್ಥಿ ವನಮಾಲಿಯೂ ಅವನ ತಮ್ಮನೂ ಮುಂಜಾನೆಯ ಊಟವನ್ನು ತೆಗೆದುಕೊಂಡು ಹೋಗುತಿದ್ದರು ವೃಂದಾವನ ಅವರನ್ನು ಕೂಗಿ '' ವನಮಾಲಿ, ಎಲ್ಲಿಗ ಹೋಗುತ್ತಿರುವೆ ? '' ಎಂದು ಕೇಳಿದ

'' ಪಂಡಿತರೆ, ಅಪ್ಪನಿಗ ಊಟ ಕೊಡಲಿಕ್ಕೆ ಹೊಲಕ್ಕೆ ಹೋಗುತಿ-ದ್ದೇವೆ '' ಎಂದನು ವನಮಾಲಿ

'' ಸ್ವಲ್ಪ ಇಲ್ಲಿಗ ಬನ್ನಿರಿ '' ಎಂದು ಕರೆದ ವೃಂದಾವನ ಅವರು ಹತ್ತಿರ ಬಂದೊಡನೆ ಅವರಿಬ್ಬರನ್ನೂ ಬರಸೆಳೆದುಕೊಂಡು ಅತ್ಯಂತ ಸ್ನೇಹ ದಿಂದ ಅವರ ಮುಖವನ್ನು ನೋಡಿ '' ಹಾ ! ವನಮಾಲಿ, ನನ್ನೆದೆ ಈಗ ತಣ್ಣಗಾಯಿತು ! ಕೇಶವ— ಚರಣನನ್ನು ಕಳೆದುಕೊಂಡೆ ಎಂಬ ಭಯ ನನಗ ನಿನ್ನೆ ನಿಜವಾಗಿಯೂ ಇದ್ದಿತು ' ಆದರೆ ಈಗ ಆ ಭಯ ಉಳಿದಿಲ್ಲ ಇನ್ನು ಅವನನ್ನು ಕಳೆದುಕೊಳ್ಳುವುದು ಸಾಧ್ಯವಿಲ್ಲ ನನ್ನ ಚರಣ ಇವರ-ಲ್ಲಿಯೆ ಐಕ್ಯನಾಗಿದ್ದಾನೆ ಒಂದು ದಿನ ನಾನು ಅವನನ್ನು ಇವರಲ್ಲಿಯೆ ಕಾಣುವೆನು '' ಎಂದ

ಕೇಶವ ಅಂಜುತ್ತ ಅತ್ತಿತ್ತ ನೋಡಿ— '' ವೃಂದಾವನ, ಇವರನ್ನು ಬಿಟ್ಟುಬಿಡು ಇವರ ತಾಯಿಯಾಗಲಿ ಮತ್ತಾರಾದರೂ ಆಗಲಿ ನೋಡಿದರೆ ರೇಗಬಹುದು '' ಎಂದ

'' ಓ ! ಅದು ನಿಜ ಚರಣನನ್ನು ಸುಟ್ಟು ಹಿಂದಿರುಗುತ್ತಿರುವೆನಲ್ಲವೆ ನಾನು ? '' ಎಂದು ವೃಂದಾವನ ಅವರನ್ನು ಬಿಟ್ಟು ಎದ್ದು ನಿಂತ

ಪಂಡಿತರ ಈ ನಡತೆಯಿಂದ ವನಮಾಲಗೆ ಬಹಳ ಸಂಕೋಚ ವಾಯಿತು ಅವನು ತನ್ನ ತಮ್ಮನೊಡನೆ ಬೇಗ ಅದೃಶ್ಯನಾದ

ಪಂಡಿತರು ಅದೇ ಸ್ಥಳದಲ್ಲಿ ಮೊಣಕಾಲೂರಿ ಕುಳಿತು ಮುಖವನ್ನು ಮೇಲಕ್ಕೆತ್ತಿ ಕೈಗಳೆರಡನ್ನೂ ಜೋಡಿಸಿ '' ದೇವಾ, ಚರಣನನ್ನಂತೂ ನೀನು ಕರೆದೊಯ್ದೆ ಆದರೆ ನನ್ನ ಹೃದಯದೊಳಗಿನ ಈ ಭಾವನೆಯನ್ನು ಮಾತ್ರ ಬದಲಾಯಿಸಬೇಡ — ಇಂದು ಇವರಲ್ಲಿ ಚರಣನನ್ನು ಕಂಡ ಹಾಗೆ ನನಗೆ

ಯಾವಾಗಲೂ ಎಲ್ಲ ಹುಡುಗರೂ ಚರಣನಂತೆಯೇ ತೋರುತ್ತಿರಲಿ ನನ್ನ ಕೈಗಳೆರಡೂ ಅವರನ್ನೆಲ್ಲ ಅಪ್ಪಿಕೊಳ್ಳಲು ಹೀಗೆಯೆ ತವಕಗೊಳ್ಳಲಿ. ಕೇಶವ, ನೀನು ಸ್ಮಶಾನದಲ್ಲಿ ನಿಂತುಕೊಂಡು ಯಾರನ್ನು ಬೈಯುತಿದ್ದೆಯೋ ಅವರೆಲ್ಲ ಬಹುಶಃ ಹಾಗೆ ನೀಚರಲ್ಲ '' ಎಂದರು

ಕೇಶವ ಕೈಹಿಡಿದು " ನಡೆ, ಮನೆಗೆ ಹೋಗೋಣ " ಎಂದ

ವೃಂದಾವನ '' ನಡೆ '' ಎಂದು ಸಹಜವಾಗಿ ಎದ್ದುನಿಂತ ಒಂದೆರಡು ಹೆಜ್ಜೆ ಮುಂದೆ ಹೋಗಿ ಹೇಳತೊಡಗಿದ— '' ನನ್ನ ಮಾತುಗುಳಿತನಕ್ಕಾಗಿ ಕ್ಷಮಿಸು ಈ ಶಿಕ್ಷೆ ನನಗೆ ಏಕೆ ಸಿಕ್ಕಿತೆಂಬುದು ತಿಳಿಯದೆ ನನ್ನ ಮನಸ್ಸು ಬಹಳ ಭಾರವಾಗಿತ್ತು ನಾನು ಗೋಹತ್ಯೆ, ಬ್ರಹ್ಮಹತ್ಯೆಗಳನ್ನು ಮಾಡಿದ ತಿಳಿವಳಿಕೆ ನನಗೇನೂ ಇರಲಿಲ್ಲ ಪರಮಾತ್ಮನು ಅದಕ್ಕಾಗಿ ಈ ಶಿಕ್ಷೆ ಕೊಟ್ಟಿರುವನೆಂಬ ಭಾವನೆಯೂ ಇರಲಿಲ್ಲ ನನ್ನ ''

ಮಾತು ಮುಗಿಯುವ ಮೊದಲೇ ಕೇಶವ ಗರ್ಜಿಸಿದ- '' ಆ ಕೃತಘ್ನ ಮುದುಕ ಘೋಷಾಲನನ್ನು ಕೇಳು— ನಿನಗೆ ಹೀಗೆ ಆದುದು ತನ್ನ ಜಪ-ತಪದ ಪ್ರಭಾವದಿಂದ ಎನ್ನುತ್ತಾನೆ ಆ ಇನ್ನೊಬ್ಬ ಮೂರ್ಖನನ್ನು ಕೇಳು- 'ಪೂರ್ವ ಜನ್ಮದ ಪಾಪದಿಂದ' ಎನ್ನುತ್ತಾನೆ ಹಾ ! ಇವರು ಈ ದೇಶದ ಬ್ರಾಹ್ಮಣರು ! "

ವೃಂದಾವನ ಅತ್ಯಂತ ಧೀರಭಾವದಿಂದ '' ಕೇಶವ, ಕಾಳಸರ್ಪದ ಪರೆಗೆ ದೊಣ್ಣೆಯಿಂದ ಹೊಡೆದು ಪ್ರಯೋಜನವೇನು ? ಹುಳಿತ ಮಜ್ಜಿಗೆಯ ದುರ್ಗಂಧಕ್ಕಾಗಿ ಹಾಲಿನ ಮೇಲೆ ಅಪವಾದ ಹೊರಿಸುವುದು ತಪ್ಪು ಆದರೆ ಬ್ರಾಹ್ಮಣರು ಎಷ್ಟು ತಿಳಿಗೇಡಿಗಳೆಂಬುದನ್ನು ಮಾತ್ರ ನೋಡಬೇಕು" ಎಂದ

ಅಂದಿನ ಸಂಗತಿಯನ್ನು ನೆನೆದುಕೊಂಡು ಕೇಶವ ಮನದಲ್ಲಿಯೆ ತಳ-ಮಳಗೊಳ್ಳುತ್ತ ಮನಬಂದಂತೆ ಮಾತನಾಡುತ್ತಲಿದ್ದ ಅವನು '' ಹಾಗಾದರೆ ಅದಕ್ಕಾಗಿ ಇಂತಹ ದೊಡ್ಡ ಶಿಕ್ಷೆಯೇಕೆ ? '' ಎಂದ

" ಇದು ಶಿಕ್ಷೆಯಲ್ಲ ಕೇಶವ ನಾನು ನಿನಗೆ ಹೇಳುತಿದ್ದುದು ಇದೇ ಮಾತನ್ನು ಯಾವ ಪಾಪದ ಸ್ಮರಣೆಯೂ ನನಗೆ ಆಗುವುದಿಲ್ಲವೆಂದ ಮೇಲೆ ಇದು ಶಿಕ್ಷೆಯೆಂದು ತಿಳಿದುಕೊಂಡು ನನ್ನನ್ನು ನಾನೇ ತುಚ್ಛೀಕರಿಸಿಕೊಳ್ಳ ಬಯಸುವುದಿಲ್ಲ. ನಾನು ಈ ಜನ್ಮದಲ್ಲಿ ಪಾಪ ಮಾಡಿರುವುದು ನನಗ ಗೊತ್ತಿಲ್ಲ ಎಂದ ಮೇಲೆ ಹಿಂದಿನ ಜನ್ಮದ ಮೇಲೆ ಅಪವಾದ ಹೊರಿಸುವುದು

ಆತ್ಮದ ಅಪಮಾನವೇ ಸರಿ ಇದು ನನ್ನ ಪಾಪದ ಫಲವೂ ಅಲ್ಲ, ಅಪರಾಧ ಕ್ಕಾಗಿ ಸಿಕ್ಕ ಶಿಕ್ಷೆಯೂ ಅಲ್ಲ ಇದು ಗುರು-ಗೃಹವಾಸದಲ್ಲಿ ಸಿಕ್ಕ ದೊಡ್ಡ ಗೌರವದ ಶಿಕ್ಷಣ ದುಃಖಪಡದೆ ಯಾವ ದೊಡ್ಡ ವಸ್ತುವೂ ದೊರೆಯು ವುದಿಲ್ಲ ಚರಣನ ಮೃತ್ಯುವಿನಿಂದ ಇಂದು ನನಗೆ ಸಿಕ್ಕ ದೊಡ್ಡ ಶಿಕ್ಷಣವನ್ನು ಪಡೆಯಲು ಪುತ್ರಶೋಕದಂತಹ ದೊಡ್ಡ ದುಃಖವೇ ಬೇಕು ಹೃದಯವನ್ನು ಸೀಳಿ ತೋರಿಸಲು ಸಾಧ್ಯವಿದ್ದಿದ್ದರೆ ಈ ಪ್ರಪಂಚದಲ್ಲಿದ್ದ ಎಲ್ಲ ಮಕ್ಕಳನ್ನು ಚರಣನು ತನ್ನ ಸ್ಥಾನದಲ್ಲಿ ಬಿಟ್ಟುಹೋಗಿರುವನೆಂಬುದನ್ನು ತೋರಿಸುತ್ತ ಲಿದ್ದೆ ನೀನು ಬ್ರಾಹ್ಮಣ ಇಂದು ನಾನು ಪಡೆದುದನ್ನು ಕಳೆದುಕೊಳ್ಳದಂತೆ ನನ್ನನ್ನು ಆಶೀರ್ವದಿಸು ”

ವೃಂದಾವನನ ಕುತ್ತಿಗೆ ಬಿಗಿದು ಬಂದಿತು ಗೆಳೆಯರಿಬ್ಬರೂ ಎದುರು ಬದುರಾಗಿ ಕುಳಿತು ಬಿಕ್ಕಿಬಿಕ್ಕಿ ಅಳತೊಡಗಿದರು

ಅಂದು ವೃಂದಾವನ ಒಂದು ಬಾವಿಯನ್ನು ಮಾತ್ರ ಕಟ್ಟಿಸುವ ಸಂಕಲ್ಪ ಮಾಡಿದ್ದ ಆದರೆ ಇಂದು ಅವನಿಗ ಇದು ಇಷ್ಟು ಮಾತ್ರ ಸಾಲದು ಎಂದು ತೋರಿತು ಊರಿನ ಪೂರ್ವಭಾಗದಲ್ಲಿರುವವರು ಹೆಚ್ಚಾಗಿ ಬಡ ವರೇ ಅಲ್ಲಿಯೂ ಒಂದು ದೊಡ್ಡ ಬಾವಿ ಇಲ್ಲದಿದ್ದರ ನೀರಿನ ತೊಂದರೆ ತಪ್ಪದು ಮಾರೀಬೇನೆಯ ಭಯವೂ ದೂರವಾಗದು ಆದುದರಿಂದ ಕೇಶ ವನು ತಜ್ಞರನ್ನು ಕಂಡು ಬಂದು, ಬಹಳ ಹಣವನ್ನು ವೆಚ್ಚ ಮಾಡಿದರೆ ಒಂದೇ ಊರಿನದೇಕೆ, ನಾಲ್ಕಾರು ಹಳ್ಳಿಗಳ ಕೊರತೆಯೂ ದೂರವಾಗು ವುದು ಎಂಬ ಸಂಗತಿಯನ್ನು ತಿಳಿದುಕೊಂಡು ಬಂದ ಇದರಿಂದ ಅನಾ-ವೃಷ್ಟಿಯ ದಿನಗಳಲ್ಲಿ ಹೊಲಗಳಿಗೂ ನೀರು ಪೂರೈಸಬಹುದು

ವೃಂದಾವನನಿಗೆ ಇದರಿಂದ ಬಹಳ ಸಂತೋಷವಾಯಿತು ಉತ್ತರ-ಕ್ರಿಯೆಯ ದಿನ, ದೇವರ ಆಸ್ತಿಯ ಹೊರತು ತನ್ನ ಎಲ್ಲ ಆಸ್ತಿಯನ್ನೂ ರಜಿಸ್ಟರ್ ಮಾಡಿಸುವ ಕೆಲಸವನ್ನು ಕೇಶವನಿಗೆ ಒಪ್ಪಿಸುತ್ತ “ ಕೇಶವ, ಕೆಟ್ಟ ನೀರನ್ನು ಕುಡಿದು ನನ್ನ ಚರಣನ ಹಾಗೆ ಉಳಿದ ಮಕ್ಕಳೂ ಪಿಡುಗಿಗೆ ತುತ್ತಾಗದಂತ ವ್ಯವಸ್ಥೆ ಮಾಡು ನನ್ನ ಎಲ್ಲಕ್ಕೂ ಹೆಚ್ಚಿನ ಆಸ್ತಿಯೆಂದರೆ ನನ್ನ ಪಾಠಶಾಲೆ ನೀನು ಇದರ ಹೊಣೆ ಹೊತ್ತುಕೊಂಡರೆ ನನಗೆ ಯಾವ ಚಿಂತೆಯೂ ಇಲ್ಲ ನಾನು ಯಾವಾಗಲಾದರೂ ಇತ್ತಕಡೆಗೆ ಬಂದಾಗ ಕನಿಷ್ಟ ಒಬ್ಬ ವಿದ್ಯಾರ್ಥಿಯಾದರೂ ಯೋಗ್ಯ ಮನುಷ್ಯನಾದುದು ನೋಡಲು

ದೊರೆತರೆ ಸಾಕು, ಚರಣನ ದುಃಖವನ್ನು ನಾನು ಅಂದೇ ಮರೆಯಬಲ್ಲೆ" ಎಂದ

ಕೆಲವು ದಿನಗಳಿಂದ ದುರ್ಗಾದಾಸ ಮಹಾಶಯರು ಯಾವಾಗಲೂ ಇಲ್ಲಿಗೆ ಬರುತಿದ್ದಾರೆ ಅವರು ಅತ್ಯಂತ ಕ್ಷುಬ್ಧರಾಗಿ "ವೃಂದಾವನ, ಎಷ್ಟು ಹುಡುಕಿದರೂ ನಿನ್ನನ್ನು ಸಮಾಧಾನಗೊಳಿಸುವ ಮಾತು ನನಗೆ ದೊರೆಯು-ಲೊಲ್ಲದು ಆದರೆ, ದುಃಖವು ಎಷ್ಟೇ ದೊಡ್ಡದಿರಲಿ, ಅದನ್ನು ತಾಳಿಕೊಳ್ಳು-ವುದರಲ್ಲಿ ಮನುಷ್ಯತ್ವವಿದೆ ಮನುಷ್ಯನು ಕ್ಷಮಿಸಲಾರದವನೂ ತಾಳ್ಮೆ-ಗೇಡಿಯೂ ಆಗಿ ಪ್ರಪಂಚವನ್ನು ಬಿಟ್ಟುಬಿಡಬೇಕೆಂಬ ಅಭಿಪ್ರಾಯ ದೇವರ ದಿಲ್ಲ" ಎಂದರು

ವೃಂದಾವನ ತಲೆಯೆತ್ತಿ ಕೋಮಲ ಸ್ವರದಿಂದ "ಪಂಡಿತರೆ, ಪ್ರಪಂಚ ವನ್ನು ಬಿಡಬೇಕೆಂದು ನಾನು ಸಂಕಲ್ಪಿಸಿಲ್ಲ ಅದು ಅಸಂಭವ ಮಕ್ಕಳ ಮುದ್ದು ಮುಖಗಳನ್ನು ನೋಡದಿದ್ದರೆ ನಾನು ಒಂದು ದಿನವೂ ಬದುಕಲಾರೆ ತಮ್ಮ ದಯೆಯಿಂದ ಎಲ್ಲರೂ ನನಗ 'ಪಂಡಿತರೆ' ಎಂದು ಕರೆಯುತ್ತಾರೆ ಈ ಸನ್ಮಾನವನ್ನು ನಾನು ಎಂದಿಗೂ ಕಳೆದುಕೊಳ್ಳುವುದಿಲ್ಲ ಎಲ್ಲಿಗೆ ಹೋದರೂ ಇದೇ ಉದ್ಯೋಗವನ್ನೆ ಮಾಡುತ್ತೇನೆ" ಎಂದ

"ಆದರೆ ನೀರಿನ ತೊಂದರೆ ದೂರ ಮಾಡುವುದಕ್ಕಾಗಿ ನಿನ್ನ ಸರ್ವಸ್ವ-ವನ್ನೆಲ್ಲ ದಾನ ಮಾಡಿಬಿಟ್ಟೆ ಇನ್ನು ಮುಂದೆ ಹೊಟ್ಟೆಯ ಪಾಡೇನು?"

ವೃಂದಾವನ ನಾಚಿಕೆಯಿಂದ ನಗುತ್ತ ಗೋಡೆಯ ಮೇಲಿನ ಗೂಟಕ್ಕೆ ತೂಗುಬಿದ್ದ ಜೋಳಿಗೆಯನ್ನು ತೋರಿಸಿ "ಪಂಡಿತರೆ, ಈ ವೈಷ್ಣವ ಕುಮಾರ ನಿಗೆ ಒಂದು ಮುಷ್ಟಿ ಭಿಕ್ಷೆ ಎಂದಿಗೂ ಸಿಕ್ಕದಿರದು ಮುಂದಿನ ನನ್ನ ಆಯುಷ್ಯ ಇದಕ್ಕೂ ಹೆಚ್ಚು ಆನಂದದಿಂದ ಸಾಗುವುದು ಇದಲ್ಲದೆ ಈ ಎಲ್ಲ ಸಂಪತ್ತು ನನ್ನ ಚರಣನದೇ ಅದನ್ನು ನಾನು ಅವನ ಸಂಗಡಿಗರ ನಲುವಾಗಿಯೆ ದಾನ ಮಾಡಿದ್ದೇನೆ" ಎಂದ

ದುರ್ಗಾದಾಸರು ಬ್ರಾಹ್ಮಣರು, ಮುದುಕರು ಆದರೂ ಉತ್ತರ-ಕ್ರಿಯೆಯ ದಿನ ಅಲ್ಲಿದ್ದುಕೊಂಡು ತಮ್ಮ ಮೇಲ್ವಿಚಾರಣೆಯಲ್ಲಿ ಎಲ್ಲ ಕೆಲಸ ವನ್ನು ಮಾಡಿಸುತ್ತಲಿದ್ದರು ಆದುದರಿಂದ ಅವರಿಗೆ ಕುಸುಮೆಯ ಸರಿಯಾದ ಪರಿಚಯವಾಗಿದ್ದಿತು ಈಗ ಅವರಿಗೆ ಅವಳ ನೆನಪಾಯಿತು ಅವರು "ಅದು ಸರಿಯಲ್ಲ ಮಗು ನಿನ್ನ ಮಾತು ಬೇರೆ ನಿನ್ನ ಹೆಂಡತಿಯ ಅವಸ್ಥೆ ಏನು? ಹೀಗಾಗುವುದು ಸಾಧ್ಯವೇ ಇಲ್ಲ" ಎಂದರು

ವೃಂದಾವನ ತಲೆಬಾಗಿಸಿಕೊಂಡು ' ಆಕೆ ತನ್ನ ಅಣ್ಣನ ಜೊತೆಯಲ್ಲಿರ ಬಹುದಲ್ಲವೆ ? " ಎಂದ

ದುರ್ಗಾದಾಸರು ವೃಂದಾವನನನ್ನು ತಮ್ಮ ಮಗನಂತೆ ಪ್ರೀತಿಸು ತಿದ್ದರು ಅವನಿಗ ಬಂದ ವಿಪತ್ತಿನಿಂದಲೂ ಅದಕ್ಕೂ ಹೆಚ್ಚಾಗಿ ಗೃಹತ್ಯಾಗದ ಅವನ ಈ ಸಂಕಲ್ಪದಿಂದಲೂ ದುಃಖವನ್ನು ತಡೆಯಲಾರದ " ವೃಂದಾವನ, ತಾಯ್ನಾಡನ್ನು ತ್ಯಜಿಸುವ ಆವಶ್ಯಕತೆಯೇನು ? ಇಲ್ಲಿದ್ದೇ ಮೊದಲಿನಂತ ಎಲ್ಲ ಕೆಲಸವನ್ನೂ ಮಾಡಬಹುದಲ್ಲವ ? " ಎಂದರು

ವೃಂದಾವನನ ಕಣ್ಣಿನಲ್ಲಿ ನೀರು ತುಂಬಿ ಬಂದಿತು ಅವನು " ಇನ್ನು ನನಗ ಭಿಕ್ಷಯ ಹೊರತು ಯಾವ ಹಂಚಿಕೆಯೂ ಉಳಿದಿಲ್ಲ ಆದರೆ ಅದು ಇಲ್ಲಿ ಸಾಧ್ಯವಿಲ್ಲ ಇದಲ್ಲದೆ ಈ ಮನೆಯನ್ನು ನೋಡಿದೊಡನೆ ನನಗೆ ಆ ಚಿಕ್ಕ ಕೈಗಳೇ ಕಾಣುತ್ತವೆ ನನ್ನನ್ನು ಕ್ಷಮಿಸಿರಿ ನಾನು ಮನುಷ್ಯ! ಇಂತಹ ಮಿದುಕಿನಿಂದ ಮನುಷ್ಯನ ತಲೆ ಖಂಡಿತವಾಗಿ ಸೀಳಿ ಹೋಗುವುದು " ಎಂದ

ದುರ್ಗಾದಾಸರು ಕಸಿವಿಸಿಗೊಳ್ಳುತ್ತ ಸುಮ್ಮನಾದರು

ಚರಣನ ಕೊನೆಯ ಚಿಕಿತ್ಸಕರಾದ ಆ ಡಾಕ್ಟರರನ್ನೂ ಅಂದಿನ ಮರ್ಮಾಂತಿಕ ಘಟನೆ ಮಂಕರನ್ನಾಗಿ ಮಾಡಿತ್ತು ಇದರ ಕೊನೆಯನ್ನು ಕಾಣುವ ಕುತೂಹಲವೂ ವೃಂದಾವನನ ವಿಷಯದಲ್ಲಿದ್ದ ಅದಮ್ಯ ಆಕರ್ಷ-ಣವೂ ಅವರನ್ನು ಕಲಕತ್ತೆಯಿಂದ ಇಲ್ಲಿಗ ಆಮಂತ್ರಣವಿಲ್ಲದೆ ಬರಮಾಡಿ-ಕೊಂಡಿದ್ದುವು ಇದುವರೆಗೆ ಅವರು ಎಲ್ಲವನ್ನೂ ಮೌನವಾಗಿ ಕೇಳುತ್ತ ಲಿದ್ದರು ವೃಂದಾವನನ ಈ ಮಹಾವೈರಾಗ್ಯದ ಕಾರಣವು ಅವರಿಗ ತಿಳಿ ದಿತ್ತು ಆದರೆ ಕೇಶವನು ತನ್ನ ಭಾವೀ ಸಮಸ್ತ ಉನ್ನತಿಗೂ ತಿಲಾಂಜಲಿ ಯನ್ನಿತ್ತು ಈ ಪಾಠಶಾಲೆಯ ಹೊಣೆಯನ್ನು ಸ್ವೇಚ್ಛೆಯಿಂದ ಏಕೆ ತೆಗೆದು ಕೊಳ್ಳುತ್ತಿರುವನೆಂಬುದು ಮಾತ್ರ ತಿಳಿಯಲಿಲ್ಲ ಅವರು ಅಚ್ಚರಿಗೊಂಡು ತಮ್ಮ ಈ ಮಿತ್ರನನ್ನು ಕೇಳಿದರು–" ಕೇಶವ, ನಿಜವಾಗಿಯೂ ನಿನ್ನ ಭಾವೀ ಉಜ್ವಲ ಜೀವನಕ್ಕೆ ಎಳ್ಳು–ನೀರು ಬಿಟ್ಟು ನಿನ್ನ ಮುಂದಿನ ಜೀವನವನ್ನೆಲ್ಲ ಈ ಪಾಠಸಾಲೆಗಾಗಿಯೆ ಅರ್ಪಿಸುವೆಯಾ ? "

ಕೇಶವನು " ಶಿಕ್ಷಣ ಕೊಡುವುದೇ ನನ್ನ ಕೆಲಸ " ಎಂದು ಸಂಕ್ಷೇಪ ವಾಗಿ ಹೇಳಿದ

ಡಾಕ್ಟರರು ಸ್ವಲ್ಪ ಉತ್ತೇಜಿತರಾಗಿ "ಇದು ನನಗೂ ಗೊತ್ತು ಕಾಲೇಜಿನೊಳಗಿನ ಪ್ರಾಧ್ಯಾಪಕತನವೂ ಸಾಲೆಯೊಳಗಿನ ಅಯ್ಯತನವೂ ಒಂದೇ ಏನು? ಇದರಿಂದ ನಿನ್ನ ಯಾವ ತರದ ಉನ್ನತಿಯಾಗುವುದು ಹೇಳು ನೋಡೋಣ?" ಎಂದರು

ಕೇಶವ ತೀರ ಸ್ವಾಭಾವಿಕವಾಗಿ "ತಕ್ಕಮಟ್ಟಿಗೆ ಆಗುವುದು ಅವಿನಾಶಬಾಬು, ಹಣ ಗಳಿಸುವುದೇ ಉನ್ನತಿಯಲ್ಲ" ಎಂದ

"ಅದನ್ನೂ ನಾನು ಬಲ್ಲೆ ಆದರೆ ಇಂತಹ ಊರಿನಲ್ಲಿ ಇರುವುದೂ ಒಂದು ಮಹಾಪಾತಕ! ಅಬ್ಬಾ! ಇದರ ನೆನಪಿನಿಂದಲೇ ಮೈಮೇಲೆ ಮುಳ್ಳೇಳುವುದು"

ವೃಂದಾವನ ನಕ್ಕು ಕೇಶವನು ಉತ್ತರವೀಯುವ ಮೊದಲೇ "ಡಾಕ್ಟರ್ ಮಹಾಶಯ, ಇದು ಬರಿಯ ಊರಿನ ಅಪರಾಧವೆಂದು ತಿಳಿದಿರಾ? ಇದರಲ್ಲಿ ನಿಮ್ಮಂತಹರ ತಪ್ಪು ಏನೂ ಇಲ್ಲವೆ? ಇಂದು ನನ್ನ ದುರ್ದೆಸೆಯನ್ನು ನೋಡಿ ನೀವು ಕನಿಕರಪಟ್ಟಿದ್ದೀರಿ ಆದರೆ, ಇದೇ ಸ್ಥಿತಿಯಲ್ಲಿ ಪ್ರತಿವರ್ಷ ಎಷ್ಟು ಮಕ್ಕಳು, ಎಷ್ಟು ಗಂಡುಸು-ಹೆಂಗುಸರು ಸಾಯುವರೆಂಬುದರ ಕಡೆಗೆ ಯಾರಾದರೂ ಗಮನ ಕೊಟ್ಟಿದ್ದಾರೆಯೆ? ನೀವೆಲ್ಲರೂ ನಮ್ಮನ್ನು ಅನಡ್ಡೆಯಿಂದ ತ್ಯಜಿಸಿ ಹೋಗಿರದಿದ್ದರೆ ಹೀಗೆ ನಾವು ಅಸಹಾಯರಾಗಿ ಸಾಯುತ್ತಿರಲಿಲ್ಲ ತಪ್ಪು ತಿಳಿದುಕೊಳ್ಳದಿರಿ ಡಾಕ್ಟರರೆ ತಮಗೆ ಅನ್ನ ಬಟ್ಟೆ ಕೊಡುವ ದುರದೃಷ್ಟರಾದ ಬಡವರೆಲ್ಲರೂ ವಾಸಿಸುವುದು ಇವೇ ಹಳ್ಳಿಗಳಲ್ಲಿ ಅವರನ್ನು ಮೆಟ್ಟಿದ ಮೇಲೆಯೆ ನಿಮ್ಮ ಉನ್ನತಿಯ ಮೆಟ್ಟಿಲು ಸಿದ್ಧವಾಗುವುವು ಕೇಶವನು ಎಂ ಎ ಆಗಿದ್ದರೂ ಈ ದಾರಿಯಿಂದಲೇ ತನ್ನ ಉನ್ನತಿಯನ್ನು ಮಾಡಿಕೊಳ್ಳಬೇಕೆಂದಿದ್ದಾನೆ" ಎಂದ

ಕೇಶವ ಆನಂದದಿಂದಲೂ ಉತ್ಸಾಹದಿಂದಲೂ ವೃಂದಾವನನನ್ನು ಅಪ್ಪಿಕೊಂಡು "ವೃಂದಾವನ, ನನಗೆ ಮನುಷ್ಯನಾಗಲು ನೀನು ಎಂತಹ ಸುಯೋಗವನ್ನು ಒದಗಿಸಿ ಕೊಟ್ಟೆ! ಹತ್ತು ವರ್ಷಗಳ ಮೇಲಾದರೂ ಸರಿಯೆ, ಇಲ್ಲಿಗೆ ಒಮ್ಮೆ ದಯವಿಟ್ಟು ಬಾ, ನಿನ್ನ ತಾಯ್ನಾಡಿನಲ್ಲಿ ಲಕ್ಷ್ಮಿ ಸರಸ್ವತಿಯರಿಬ್ಬರೂ ನಲಿದಾಡುತ್ತಿರುವರೊ ಇಲ್ಲವೊ ಎಂಬುದನ್ನು ಪ್ರತ್ಯಕ್ಷವಾಗಿ ನೋಡು" ಎಂದ

ಈ ಇಬ್ಬರೂ ಗೆಳೆಯರನ್ನು ದುರ್ಗಾದಾಸರೂ ಅವಿನಾಶಬಾಬುಗಳೂ ಶ್ರದ್ಧೆ, ಆಶ್ಚರ್ಯಗಳಿಂದ ನೋಡುತ್ತಲಿದ್ದರು.

ನಾಳೆ ವೃಂದಾವನ ಬರಿಯ ಒಂದು ಜೋಳಿಗೆಯೊಂದಿಗೆ ಬ್ಯಾಡಾಲದಿಂದ ಹೊರಟು ಹೋಗುತ್ತಾನೆ ಅಲ್ಲಲ್ಲಿ ತಿರುಗುತ್ತ ಎಲ್ಲಾದರೊಂದುಕಡೆ ತನ್ನ ಸೇವಾಕ್ಷೇತ್ರವನ್ನು ಸ್ಥಾಪಿಸುತ್ತಾನೆ. ಇನ್ನೂ ಕೆಲವು ದಿನ ಇಲ್ಲಿಯೆ ಇರಬೇಕೆಂದು ಕೇಶವ ಒತ್ತಾಯ ಮಾಡಿದ ಆದರೆ ವೃಂದಾವನ ಇದಕ್ಕೆ ಒಪ್ಪಲಿಲ್ಲ ಏಕೆಂದರೆ ಸುಖ - ದುಃಖ, ಅನುಕೂಲ - ಅನಾನುಕೂಲ, ಎಲ್ಲವನ್ನೂ ಅವನು ಉಪೇಕ್ಷಿಸಬೇಕೆಂದಿದ್ದಾನೆ

ಯಾತ್ರೆಯ ಸಿದ್ಧತೆಯನ್ನು ಮಾಡಿಕೊಂಡು ದೇವರ ಪೂಜೆಯ ಎಲ್ಲ ಹೊಣೆಯನ್ನು ಕೇಶವನಿಗೂ ಪುರೋಹಿತರಿಗೂ ಒಪ್ಪಿಸಿದ ಮನೆಯ ಆಳು-ಹೋಳುಗಳ ಮುಂದಿನ ವ್ಯವಸ್ಥೆಯನ್ನು ಸರಿಯಾಗಿ ಮಾಡಿದ ಅವನ ತಾಯಿ ತನ್ನ ಪೆಟ್ಟಿಗೆಯಲ್ಲಿ ಕೂಡಿಸಿಟ್ಟ ಎಲ್ಲ ಹಣವನ್ನು ದಾಸ-ದಾಸಿಯರಿಗೆ ಹಂಚಿ ಅವರಿಂದ ಅಪ್ಪಣೆ ಪಡೆದ.

ಇದುವರಗೆ ಎಲ್ಲವೂ ಮುಗಿದಿದ್ದರೂ ಅವನು ಈ ವರೆಗೆ ಕುಸುಮೆಯ ಯೋಗಕ್ಷೇಮವನ್ನು ವಿಚಾರಿಸಿರಲಿಲ್ಲ ಈ ವರೆಗೆ ಅವಳ ಕಡೆಗೆ ಅವನ ಗಮನವೇ ಹೋಗಿರಲಿಲ್ಲ ಚರಣನನ್ನು ಅವಳು ನಿರಾಕರಿಸಿದಂದಿನಿಂದ ಆಕೆಯ ವಿಷಯದಲ್ಲಿ ಇವನಿಗೆ ಒಂದು ಬಗೆಯ ನಿರಾಶೆಯುಂಟಾಗಿದ್ದಿತು ಚರಣನು ಹೋದ ಮೇಲೆ ಆ ನಿರಾಸೆ ಸ್ವಾಭಾವಿಕವಾಗಿ ಒಂದು ಬಗೆಯ ದ್ವೇಷದ ರೂಪವನ್ನು ತಾಳಿದ್ದಿತು ಆದುದರಿಂದ ಆಕೆ ಇಲ್ಲಿಗ ಏಕೆ ಬಂದದ್ದು, ಹೇಗೆ ಬಂದದ್ದು, ಈವರೆಗೆ ಇಲ್ಲಿ ಏಕೆ ನಿಂತದ್ದು, ಎಂಬ ಯಾವ ಸಂಗತಿಯನ್ನೂ ಅವನು ತಿಳಿದುಕೊಳ್ಳ ಬಯಸಿರಲಿಲ್ಲ ತಾನಾಗಿಯೆ ಬಂದಿರುವಳೆಂದೂ ಉತ್ತರಕ್ರಿಯೆ ಮುಗಿದ ಮೇಲೆ ಹೊರಟು ಹೋಗುವಳೆಂದೂ ಮಾತ್ರ ಅವನು ತಿಳಿದುಕೊಂಡಿದ್ದ ಆಕೆ ಇಲ್ಲಿಗೆ ಬಂದ ಬಳಿಕ ಅಗತ್ಯವಿದ್ದಾಗ ನಿರುಪಾಯನಾಗಿ ಅವಳೊಡನೆ ಮಾತನಾಡಿದ್ದಾನೆ ಆದರೆ ಆ ಮುಂಜಾನೆಯ ಹೊರತು– ಚರಣನನ್ನು ಕಳಿಸಿದ ದಿನ– ಮತ್ತೆಂದೂ ಆಕೆಯ ಮುಖದ ಕಡೆಗೆ ನೋಡಿಲ್ಲ ಅವನನ್ನು ಕಾಣಲು, ಅವನೊಡನೆ ಮಾತನಾಡಲು ಕುಸುಮೆಯೂ ಪ್ರಯತ್ನಿಸಿಲ್ಲ

ಹೀಗೆ ಈ ಸ್ವಲ್ಪ ದಿನಗಳು ಕಳೆದು ಹೋದುವು ಆದರೆ ಇನ್ನು ಹೀಗಿರುವುದು ಸಾಧ್ಯವೆ? ಆದುದರಿಂದ ಕುಸುಮೆ ಎಂದು ಹೋಗುವಳೆಂಬುದನ್ನು ತಿಳಿದುಕೊಂಡು ಬರಲು ವೃಂದಾವನ ಒಬ್ಬ ತೊತ್ತನ್ನು ಕಳಿಸಿ ಉತ್ತರದ ಹಾದಿಯನ್ನು ನೋಡುತ್ತ ನಿಂತ.

ಅವಳು ಕೂಡಲೇ ಬಂದು " ಈಗಲೇ ಅವರು ಹೋಗುವುದಿಲ್ಲವಂತೆ " ಎಂದು ಹೇಳಿದಳು

ವೃಂದಾವನ ಅಚ್ಚರಿಯಿಂದ " ಇನ್ನು ಇಲ್ಲಿ ಇರುವುದು ಸಾಧ್ಯವಿಲ್ಲ ವೆಂದು ನೀನೇಕೆ ಹೇಳಲಿಲ್ಲ ? " ಎಂದು ಕೇಳಿದ

" ಎಲ್ಲ ಮಾತೂ ಅವರಿಗೆ ಗೊತ್ತಿದೆ "

ವೃಂದಾವನ ವಿರಕ್ತನಾಗಿ " ಇಲ್ಲಿ ಒಬ್ಬಳೇ ಇರುವಳೊ ಹೇಗೆಂಬು ದನ್ನು ಕೇಳಿ ಬಾ " ಎಂದ

ಅವಳು ಒಂದೇ ನಿಮಿಷದಲ್ಲಿ ಕೇಳಿ ಬಂದು " ಹೌದು " ಎಂದಳು

ಆಗ ವೃಂದಾವನನೇ ಒಳಗೆ ಹೋದ ಕೋಣೆಯ ಬಾಗಿಲು ಮುಚ್ಚಿತ್ತು ಬಾಗಿಲು ತೆರೆದು ಒಳಗೆ ಹೋಗುವ ಧೈರ್ಯವಾಗಲಿಲ್ಲ ಅವ ನಿಗೆ ಬಾಗಿಲು ಸ್ವಲ್ಪ ತೆರೆದು ಒಳಗ ಇಣಿಕಿ ನೋಡಿದ ಕೂಡಲೇ ಅವನ ಮೈ ಜುಮ್ಮೆಂದಿತು ಸುಟ್ಟ ಮನೆಯ ಸುಟ್ಟ ಗೋಡೆಯಂತೆ, ಆಕೆ ಇತ್ತ ಕಡೆಗೇ ಮುಖ ಹೊರಳಿಸಿ ನಿಂತುಕೊಂಡು, ಉತ್ಕಟ, ಕ್ಷಿಪ್ತ ದೃಷ್ಟಿಯಿಂದ ನೋಡುತ್ತಲಿದ್ದಳು ಆತ್ಮಗ್ಲಾನಿಯೂ ಪುತ್ರಶೋಕವೂ ಮನುಷ್ಯನನ್ನು ಸ್ವಲ್ಪ ಕಾಲದಲ್ಲಿಯೆ ಯಾವ ಸ್ಥಿತಿಗೆ ತರುವುದೆಂಬುದನ್ನು ವೃಂದಾವನ ಮೊಟ್ಟಮೊದಲು ಅರಿತುಕೊಂಡುದು ಈಗ ಮಾತ್ರ ಈ ನೋಟದಿಂದ ಅವನು ಸ್ವಲ್ಪ ಅಳುಕಿ ಹಿಂದೆ ಸರಿದ

ವೃಂದಾವನ ಬಾಗಿಲು ದೂಡಿದುದರಿಂದ ಕಿರಿಕಿರಿ ಸಪ್ಪಳವಾಯಿತು ಕುಸುಮೆ ಇತ್ತ ನೋಡುತ್ತ ಮುಂದೆ ಬಂದು " ಒಳಗೆ ಬನ್ನಿರಿ " ಎಂದಳು

ವೃಂದಾವನ ಒಳಗ ಬಂದೊಡನೆ ಕುಸುಮೆ ಬಾಗಿಲನ್ನು ಮುಚ್ಚಿ ಅವನ ಎದುರಿಗ ಬಂದು ನಿಂತಳು ಈಕೆಗೆ ಚಿತ್ತಸ್ವಾಸ್ಥ್ಯವಿಲ್ಲವೆಂದೂ ಹುಚ್ಚು ಹಿಡಿದಿದೆಯೆಂದೂ ವೃಂದಾವನ ತಿಳಿದುಕೊಂಡ ಇನ್ನೇನು ಮಾಡು ವಳೊ ಎಂಬ ಸಂಶಯದಿಂದ ಒಮ್ಮೆ ಅವನು ಹೆದರಿಬಿಟ್ಟ

ಆದರೆ ಕುಸುಮೆ ಇಂತಹ ಯಾವ ಪ್ರಕರಣಕ್ಕೂ ಕೈಹಾಕಲಿಲ್ಲ ಆಕ ತಲೆಯ ಮೇಲೆ ಸೆರಗನ್ನೆಳೆದುಕೊಳ್ಳುತ್ತ ಗಂಡನ ಪಾದಗಳ ಮೇಲ ತನ್ನ ಹಣೆಯನ್ನಿಟ್ಟು ಬಿದ್ದುಬಿಟ್ಟಳು

ಆದರೂ ವೃಂದಾವನನಿಗೆ ಅಲುಗಾಡುವ ಎದೆಗಾರಿಕೆಯಾಗಲಿಲ್ಲ. ಅವನು ಸುಮ್ಮನೆ ನಿಂತಂತೆಯೆ ನಿಂತುಬಿಟ್ಟ

ಕುಸುಮೆ ತನ್ನ ಗಂಡನ ವಾದಗಳಿಂದ ಶಕ್ತಿಸಂಗ್ರಹ ಮಾಡಿಕೊಳ್ಳು-ತ್ತಿರುವಳೊ ಏನೊ ಎಂಬಂತೆ ಬಹಳ ಹೊತ್ತಿನ ವರೆಗೆ ಹಾಗೆಯೆ ಬಿದ್ದು-ಕೊಂಡಿದ್ದಳು ಆಮೇಲೆ ಎದ್ದುಕುಳಿತು ಗಂಡನ ಮುಖವನ್ನು ನೋಡುತ್ತ ಅತ್ಯಂತ ಕರುಣಕಂಠದಿಂದ "ನೀವು ಸಹನಶೀಲರೆಂದು ಎಲ್ಲರೂ ಹೇಳುವರು ಆದರೆ ನನ್ನ ಹೃದಯದಲ್ಲಿ ಮಾತ್ರ ಹಗಲಿರುಳೂ ಭೀಷಣವಾದ ಅಗ್ನಿ ಉರಿಯುತ್ತಿದೆ ನಾನು ಬದುಕುವದೆಂತು ? ನಿಮ್ಮನ್ನು ಬಿಟ್ಟು ಸಾಯುವದಾದರೂ ಹೇಗೆ ?" ಎಂದಳು

ಆಗ ಇಬ್ಬರ ಹೃದಯದಲ್ಲಿಯೂ ಒಂದೇ ಬಗೆಯ ಜ್ವಾಲೆ ಇದ್ದಿತು ವೃಂದಾವನನ ಹೃದಯದೊಳಗಿನ ದ್ವೇಷ ನಂದಿಹೋಗಿತ್ತು ಅವನು ಕುಸುಮೆಯ ಕೈಹಿಡಿದು "ಕುಸುಮಾ, ನನಗೆ ದೊರೆತಂತೆ ನಿನಗೂ ಶಾಂತಿ ಸಿಗುವುದು ಇದರ ಹೊರತು ಬೇರೆ ಯಾವ ಮಾರ್ಗವೂ ಇಲ್ಲ" ಎಂದ

ಕುಸುಮೆ ಮೌನವಾಗಿ ನೋಡುತ್ತಿದ್ದಳು ವೃಂದಾವನ ಮರಳಿ ಹೇಳತೊಡಗಿದ— "ಕುಸುಮಾ ನೀನು ಚರಣನನ್ನು ಎಷ್ಟು ಪ್ರೀತಿಸುತಿದ್ದೆಯೆಂಬುದನ್ನು ನಾನು ಬಲ್ಲೆ ಆದುದರಿಂದಲೇ ನಾನು ನಿನ್ನನ್ನು ಇದೇ ಮಾರ್ಗಕ್ಕೆ ಕರೆಯುತ್ತಿರುವುದು ನಿನ್ನ ಚರಣ ಸತ್ತಿಲ್ಲ, ಕಳೆದೂ ಹೋಗಿಲ್ಲ, ಅವನು ಅಡಗಿಕೊಂಡಿದ್ದಾನೆ ಮಾತ್ರ ಒಂದುಸಲ ಚೆನ್ನಾಗಿ ನೋಡಲು ನೀನು ಕಲಿತೆಯೆಂದರೆ ಇಲ್ಲಿರುವ ಒಬ್ಬೊಬ್ಬ ಬಾಲ-ಬಾಲಿಕೆಯೊಂದಿಗೂ ನಮ್ಮ ಚರಣನಿರುವುದು ನಿನಗೆ ಕಾಣುತ್ತದೆ"

ಕುಸುಮೆಯ ಕಣ್ಣಿನಿಂದ ಕಂಬನಿಗಳು ಸೂಸತೊಡಗಿದುವು ಅವಳು ಮತ್ತೊಮ್ಮೆ ಬಾಗಿ ಪತಿಯ ಚರಣಗಳ ಮೇಲೆ ಹಣೆಯನ್ನಿಟ್ಟಳು ಸ್ವಲ್ಪ ಹೊತ್ತಿನ ಮೇಲೆ ತಲೆಯನ್ನೆತ್ತಿ "ನಾನೂ ನಿಮ್ಮಕೂಡ ಬರುವೆ" ಎಂದಳು

ವೃಂದಾವನ ಸ್ವಲ್ಪ ಹಿಂಜರಿಯುತ್ತ "ನನ್ನ ಕೂಡ ? ಇದು ಸಾಧ್ಯ-ವಿಲ್ಲ" ಎಂದ

"ಸಾಧ್ಯವಿದೆ, ನಾನು ಬರುತ್ತೇನೆ"

ವೃಂದಾವನ ಉತ್ಕಂಠಿತನಾಗಿ "ನೀನು ಹೇಗೆ ಬರುವೆ ಕುಸುಮಾ ? ನಾನು ನಿನ್ನನ್ನು ಹೇಗೆ ಕಾಪಾಡಬಲ್ಲೆ ? ನನಗಾಗಿ ನಾನು ಭಿಕ್ಷೆ ಬೇಡಬಲ್ಲೆ, ಆದರೆ ನಿನಗಾಗಿ ಬೇಡಲಾರೆ ! ಅಲ್ಲದೆ ನೀನು ಕಾಲುನಡಿಗೆಯಿಂದ ಹೇಗೆ ಬರುವೆ ?" ಎಂದ

ಕುಸುಮ ಸ್ಥಿರಕಂಠದಿಂದ " ನಾನು ಚೆನ್ನಾಗಿ ಬರಬಲ್ಲ ಇಲ್ಲಿಯ ವರೆಗೆ ನಡೆದೇ ಬಂದಿದ್ದೇನೆ ಅಲ್ಲದೆ ನಿಮಗಾಗಿಯೆ ಆಗಲಿ ನನಗಾಗಿಯೆ ಆಗಲಿ, ನಿಮಗೆ ಭಿಕ್ಷೆ ಬೇಡಗೊಡುವುದಿಲ್ಲ. ನೀವು ನಿಮ್ಮ ಕೆಲಸ ಮಾತ್ರ ಮಾಡುತ್ತ ನಡೆಯಿರಿ ನಾನು ಉಪಜೀವನ ಸಾಗಿಸುವ ಹಂಚಿಕೆಯನ್ನು ಬಲ್ಲೆ, ಸಂಸಾರ ಸಾಗಿಸುವುದನ್ನೂ ಬಲ್ಲೆ ಅಣ್ಣನ ಸಂಸಾರವನ್ನು ಇದು ವರೆಗೆ ನಾನೇ ನಡೆಸಲಿಲ್ಲವೆ ? " ಎಂದಳು

ವೃಂದಾವನ ಯೋಚಿಸತೊಡಗಿದ ಆಗ " ಯೋಚನೆ ಏತರದು ? ನಿಮ್ಮೊಂದಿಗೆ ನಾನು ಬರುವವಳೆ ಅವಹೇಲನದಿಂದ ನಾನು ಮಗುವನ್ನು ಕಳೆದುಕೊಂಡೆ ಈಗ ಪತಿಯನ್ನೂ ಕಳೆದುಕೊಳ್ಳ ಬಯಸುವುದಿಲ್ಲ " ಎಂದಳು ಕುಸುಮೆ

ವೃಂದಾವನ ಸ್ವಲ್ಪ ಹೊತ್ತು ಯೋಚಿಸಿ " ನನ್ನ ಚರಣ ಯಾವ ಮಂತ್ರೋಪದೇಶ ಮಾಡಿ ನನಗೆ ದೀಕ್ಷೆ ಕೊಟ್ಟು ಹೋಗಿರುವನೋ ಅದೇ ಮಂತ್ರದೀಕ್ಷೆಯನ್ನು ನೀನೂ ತೆಗೆದುಕೊಳ್ಳಬಲ್ಲೆಯಾ ? " ಎಂದ

ಕುಸುಮೆ ಶಾಂತ, ದೃಢಸ್ವರದಿಂದ " ಓಹೊ, ತೆಗೆದುಕೊಳ್ಳಬಲ್ಲೆ " ಎಂದಳು

ವೃಂದಾವನ " ಹಾಗಾದರೆ ನಡೆ " ಎಂದು ಒಪ್ಪಿಗೆಯನ್ನಿತ್ತು ಕೇಶವನಿಗೆ ಎಲ್ಲ ಹೊಣೆಯನ್ನೂ ಒಪ್ಪಿಸಿ ಅವನು ಅದೇ ರಾತ್ರಿ ತನ್ನ ಹೆಂಡತಿಯೊಡನೆ ಬಾಡಾಲದಿಂದ ಹೊರಟುಬಿಟ್ಟ